ಸಿರಿಗನ್ನಡ ಜಂಗಳಿ

# ಕತೆಗೊಂಚಲ

ಬರೆದವ - ದೇ ಹ

ಪ್ರಸಿದ್ಧಿಸುವವರು- ರಾಯಚೂರು ವಿದ್ಯಾರ್ಥಿ ಸಂಘದವರು.

ಮೊದಲನೆಯಸಾರೆ

೧೮೫೬ ಭಾರತ ಹುಣ್ಣಿವೆ



ಶ್ರೀ ಸಾವಿತ್ರಿ ಮುದ್ರಾಮಂದಿರದೊಳ್ ಮುದ್ರಿಸಲ್ಪಟ್ಟಿತು.

ಬೆಲೆ ೧ ರೂಪಾಯಿ.

# ಮುನ್ನುಡಿ.

ಈ ಕಥೆಗಳ ಪುಸ್ತಕವು ರಾಯಚೂರ ತರುಣರ ಹೊಸ ಹುರುಪಿಗೆ ಸಾಕ್ಷಿ. ಮೊಗಲಾಯಿಯೊಳಗೆ ಬಿದ್ದಿರುವ ಆ ಕರ್ನಾಟಕ ಭಾಗದಲ್ಲಿ ಈ ಪುಸ್ತಕವು, ಹುಟ್ಟಿದ್ದು ಆಶ್ಚರ್ಯವೇ- ಮರುಭೂಮಿಯಲ್ಲಿ ಮನೆಮಾರುಗ ಳೆದ್ದು ಬಂದಂತೆ! ಯಾಕಂದರೆ ಕನ್ನಡಕ್ಕೆ ತಕ್ಕ ಪ್ರೋತ್ಸಾಹವು, ಅಲ್ಲಿಯ ಕನ್ನಡಿಗರಿಂದಲೇ ಸಿಗುವದು ಅಪರೂಪ. ಹತ್ತುವರ್ಷಗಳಹಿಂದೆ ನಾನಲ್ಲಿ ಯ ಹಮ್‍ದರ್ದ್ ಶಾಲೆಯನ್ನು ಸ್ಥಾಪಿಸಿದಾಗ ನಾನೇಕಂಡ ಅನುಭವವಿದು ಆಶಾಲೆಯಲ್ಲಿಯ ಮೊದಲು ಶಿಕ್ಷಣಕ್ಕೆ ಕನ್ನಡವನ್ನೇ ಮೂಲಭಾಷೆಯನ್ನಾ ಗಿಟ್ಟಾಗ ಆಕ್ಷೇಪಣೆಗಳೂ ಇದಿರಾಟಗಳೂ ನನಗಿನ್ನೂ ನೆನಪಿನಲ್ಲಿವೆ! ಅಂಥ ವಾತಾವರಣದಲ್ಲಿ ೨೨೬ ಪುಟಗಳ ಈ ಪುಸ್ತಕವು ಹುಟ್ಟಿತು- ಎಂದರೆ ಬಹು ಸಂತೋಷದ ವಿಷಯವೇ.

ಇದರಲ್ಲಿ ಕಥಾರಚನೆಯು, ಭಾಷೆಯು, ಮತ್ತು ಅಚ್ಚಿನ ಕುಂದುಕೊರ ತೆಗಳಿವೆ. ಆದರೆ ವಾಚಕರು ಮಾತ್ರ ಪುಸ್ತಕವು ಅಲ್ಲಿ ಈಗೆಚ್ಚರವಾದ ಹು ರುಪಿನ ಹಸುಗೂಸು ಎಂಬವನ್ನು ಮರೆಯಬಾರದು. ಅಲ್ಲಿ ಇಂಥಬರಹವು ಇದೇ ಮೊದಲಾದುದು. ಬರೆದವರದು, ಇದೇ ಮೊದಲನೆಯ ಸಾಹಸ, ಅ ಲ್ಲಿಯದೇ ಆಗಿರುವ ಸಾವಿತ್ರಿ ಮುದ್ರಾಮಂದಿರದಲ್ಲಿ ಸಹ ಇದೇ ಇಷ್ಟುದೊ ಡ್ಡ ಪುಸ್ತಕವು ಅಚ್ಚಾದುದು- ಎಂದಮೇಲೆ ಎಲ್ಲರಿಗೂ ಅಭಿನಂದನ ಸ್ವಾಗ ತಗಳನ್ನು ಕನ್ನಡಿಗರು ಕೊಡದಿರರು ಎಂಬನಂಬಿಕೆಯು ನನಗೆಪೂರ್ಣ ವಾಗಿದೆ.

ಈಮೊದಲನೆಯ ಪ್ರಯತ್ನಕ್ಕೆ ಕರ್ನಾಟಕವು ಪ್ರೇಮದಿಂದ ತೋರಿ ಸುವ ಆದರವನ್ನು ಇವರೆಲ್ಲರೂ ವಿನಿಯೋಗಿಸಿ ಹುರಿಗೊಂಡು ಸಜ್ಜುಗೊಂ ಡು, ಮುಂದು ಮುಂದಕ್ಕೆ ಬರುತ್ತ ಕನ್ನಡಿಗರ ಸೇವೆಯನ್ನು ಮಾಡುವರು ಎಂಬ ಕೋರಿಕೆಯು ಇದೆ. ಜಗನ್ಮಾತೆಯು ಇವರನ್ನು ಆಶೀರ್ವದಿಸಲಿ.

ಸಂಪಾದಕ "**ಪ್ರೇಮ**"<br>ಪ್ರೇಮಾಯತನ,<br>ತುಂಗಭದ್ರಾ.

**ತಾರಾನಾಥ.**

ಈ ಅಲ್ಪಕೃತಿಯನ್ನು

**ಶ್ರೀಮಾನ್, ಕೃಷ್ಣರಾವ ಗಜೇಂದ್ರಗಡ**
ಹೈಕೋರ್ಟವಕೀಲ, ರಾಯಚೂರು.

ಈ ಮಹನೀಯರ ಅಡಿದಾವರೆಗೆಳಲ್ಲಿ
ಇವರಲ್ಲಿರುವ ಪರೋಪಕಾರ, ಔದಾರ್ಯ, ನ್ಯಾಯಪಕ್ಷಪಾತ,
ಸಿವಗನ್ನಡಪ್ರೇಮ, ಮೊದಲಾದ ಅಪ್ರತಿಮ ಗುಣಗಳಿಗೆ
ಲುಬ್ಧನಾಗಿ, ಭಕ್ತಿಪುರಸ್ಸರನಾಗಿ
ಅರ್ಪಿಸಿದ್ದೇನೆ.

ಪುಸ್ತಕ ಬರೆದವ.

# ಬರೆದವನ ಹೃದ್ಗತ.

---

ಕನ್ನಡ ವಾಙ್ಮಯವು ಮೇರೆಯಲ್ಲಿರುವ ಭಾಷೆಗಳ ವಾಙ್ಮಯಕ್ಕಿಂತ ಹೆಚ್ಚಾಗಿದ್ದರೂ, ಪ್ರಚಲಿತ ಭಾಷೆಯಲ್ಲಿ ಕನ್ನಡವು ತೀರ ಹಿಂದುಳಿದಿದೆ. ಎಲ್ಲ ಕನ್ನಡ ಉದ್ಗ್ರಂಥಗಳು ಹಳೆಗನ್ನಡ ದಲ್ಲಿವೆ. ಅವನ್ನು ಅಭ್ಯಾಸಿಸಲು ಎಲ್ಲರಿಗೂ ಅಸಾಧ್ಯವಾದ ಮಾತು. ಕಾಲವು ತಿರುಗುತ್ತ ಹೋದಂತೆ, ಭಾಷೆ ಯಲ್ಲಾದರೂ ಬದಲಾವಣಿ ಯಾಗಬೇಕಾಗುತ್ತದೆ. ಇದಕ್ಕೆ ಬಂಗಾಲ, ಆಂಧ್ರ, ಮರಾಠಾಭಾಷೆಗಳ ಇತ್ತೀಚಿನ ಗ್ರಂಥಗಳೇ ಸಾಕ್ಷಿ. ಪ್ರಚಲಿತ ಭಾಷೆ ಯಲ್ಲಿ ಮೇಲ್ಕಂಡ ಭಾಷೆಗಳು ಒಳ್ಳೇಪ್ರಗತಿಯನ್ನು ಹೊಂದಿವೆ. ಕರ್ನಾಟವು ಮಾತ್ರ ಇದೀಗ ಪೂರ್ಣ ಎಚ್ಚತ್ತಿದೆ. ಮೈಸೂರ ಕರ್ನಾಟಕವು ಎಚ್ಚತ್ತಿದೆ. ಉತ್ತರ ಕರ್ನಾಟಕಪ್ರಾಂತವಾದ ಧಾರವಾಡವು ಕಣ್ದೆರಿಸಿಕೊಳ್ಳ ಹತ್ತಿದೆ; ಆದರೆ, ಕನ್ನಡದ ತಿರುಳಾದ ನಮ್ಮೀ ನಿಜಾಮುಪ್ರಾಂತವು ಇನ್ನೂ ಗಾಢನಿದ್ರಿಯಲ್ಲಿಯೇ ಇರುವದು. ಸಂಕರನ್ನನುಸರಿಸಿ, ನಿದ್ರಿಯಿಂದ ತಿಳಿದೇಳುವದು ಪ್ರಾಂತದ ಪ್ರತಿಯೊಬ್ಬನ ಆದ್ಯ ಕರ್ತವ್ಯವು.

ಪ್ರಸ್ತುತ ರಾಯಿಚೂರ ವಿದ್ಯಾರ್ಥಿಸಂಘವು ಇದೇಕಾರ್ಯವನ್ನು ಕೈಕೊಂಡಿದೆ. ಸಂಘದ ಸದ್ಯಶರೆಲ್ಲರೂ ಬಹುತರವಾಗಿ ವಿದ್ಯಾರ್ಥಿಗಳೇ. ಮಾಧ್ಯಮಿಕ ಉಚ್ಚಶಿಕ್ಷಣದ ವಿದ್ಯಾರ್ಥಿಗಳು ಕೂಡಿಯೇ ಸದಸ್ಯರಿರುವರು. ನಾನಾದರೂ ಸಂಘದ ಓರ್ವ ಸಭಾಸದನಿದ್ದು ಕೈಲಿಂದಾಗುವಷ್ಟು ಕನ್ನಡ ಸೇವೆಯ ಕಾರ್ಯವನ್ನು ಕೈಕೊಂಡಿದ್ದೇನೆ.

ಸದ್ಯದಲ್ಲಿ ಬರೆದುದು "**ಕತೆಗೊಂಚಲ**" ವೆಂಬ ಪುಸ್ತಕವು. ಇದರಲ್ಲಿ ಐತಿಹಾಸಿಕ, ಸಾಮಾಜಿಕ ವಿಷಯವನ್ನೊಳಗೊಂಡ ನಾಲ್ಕು ಕತೆಗಳಿರುವವು. ಐತಿಹಾಸಿಕ ಕತೆಯು ಕರ್ನಾಟಕ ಸಾಮ್ರಾಜ್ಯ, ಕರ್ನಾಟಕ ಗತವೈಭವ, ಮುಂತಾದ ಗ್ರಂಥಗಳ ಆಧಾರದಿಂದ ಬರೆದುದು. ಇನ್ನುಳಿದ ಮೂರು ಕತೆಗಳು ಸದ್ಯದ ಪರಸ್ಥಿತಿಯನ್ನನುಸರಿಸಿ ಬರಿಯಲಾಗಿವೆ. ಪುಸ್ತಕವು ನನ್ನಪ್ರಥಮ ಪ್ರಯತ್ನದ ಫಲವಾಗಿದ್ದು, ಅಲ್ಲಲ್ಲಿನ್ಯೂನ್ಯತೆ ಬಹಳವಾಗಿ ಕಂಡುಬರಬಹುದು. ಇಂತಹ ಹೆಚ್ಚುಪುಟಗಳ ಪುಸ್ತಕವನ್ನು ಅಚ್ಚು ಹಾಕಿದ್ದು ಶ್ರೀ ಸಾವಿತ್ರಿ ಮುದ್ರಾಮಂದಿರದ ಮೊದಲನೇಸಾಹಸ. ಅಚ್ಚಿನ

ದೋಷಗಳೂ ಅಲ್ಲಲ್ಲಿ ಕಂಡುಬರಬಹುದು. ಅದನ್ನು ಹೋಗಲಾಡಿಸುವದಕ್ಕಾಗಿ ಶುದ್ಧಿಪತ್ರಿಕೆಯನ್ನು ಪುಸ್ತಕದ ಕೊನೆಯಲ್ಲಿಕೊಟ್ಟಿದೆ. ವಾಚಕರು ಕುಂದುಕೊರತೆಗಳನ್ನು ಬದಿಗಿರಿಸಿ ಗುಣಗಳನ್ನಷ್ಟೇ ತಗೆದುಕೊಂಡು ಪ್ರೋತ್ಸಾಹಿಸಿದಲ್ಲಿ, ಮುಂದಿನಸಲ ಹೆಚ್ಚು ಪ್ರಯತ್ನಮಾಡಿ ಕುಂದುಕೊರತೆ ಕಾಣಬರದಂತೆ ಬರೆಯಲು ಪ್ರಯತ್ನಿಸುವೆನು

ಪುಸ್ತಕ ಬರೆಯಲು ನನ್ನನ್ನು ಪ್ರೋತ್ಸಾಹಿಸಿದ, ಗು. ಸಿಲೋಗಲ್ಲ ಕೃಷ್ಣಮೂರ್ತಿಗಳಿಗೂ, ಕತೆರಚನೆಗಾಗಿ ಅಲ್ಲಲ್ಲಿ ಸಲುಹೆಗಳನ್ನುಕೊಟ್ಟ, ಶ್ರೀ. ಜಿ. ಆರ್. ಜಾಹಗೀರದಾರ, ಎಮ್ ಎ. ಎಲ್.ಎಲ್. ಬಿ. ವಿಜಾಪೂರ ಇವರ ಮತ್ತು ಧಾರವಾಡ ಮುಂಗಮಠದ ಸಭಾಸದರ ಟ್ರೋರ್ವರೂ ರಾಯಚೂರ ಹಮದರ್ದಶಾಲೆಯ ಮಾಸ್ತರರೂ ಆದ, ಶ್ರೀ. ಪುರಾಣಿಕ ಬಿ. ಎ. ಇವರ ಹಾಗೂ ಶ್ರೀ. ವ್ಹಿ. ಆರ್. ನಾಯಿಕ ಬಿ. ಎಸ್. ಸಿ ಇವರ ಅಭಾರ ಮನ್ನಿಸದಿರೆನು.

ಪುಸ್ತಕ ಅಚ್ಚುಹಾಕಿಸಲು ಕೊಡಗೈಯಿಂದ ಹಣದಸಹಾಯಮಾಡಿದ, ಶ್ರೀ ಆಡಿವಿರಾವ ಫಡನೀಸ ಗಜಂದ್ರಗಡಇವರ, ಅಲ್ಪಕಾಲದಲ್ಲಿ ಸಾಹಸಮಾಡಿ ಅಚ್ಚು ಹಾಕಿಕೊಟ್ಟ, ಶ್ರೀ ಸಾವಿತ್ರಿ ಮುದ್ರಾ ಮಂದಿರದ ಚಾಲಕರಾದ ಶ್ರೀ ಅರಷಣಿಗಿ ಹನುಮಂತರಾಯರ, ಹಾಗೂ ನಿಃಪಕ್ಷಪಾತದಿಂದ ಕುಂದು ಕೊರತೆಗಳನ್ನು ತೋರಿಸಿ ಅಚ್ಚುಕಟ್ಟಾದ ಮುನ್ನುಡಿ ಬರೆದುಕೊಟ್ಟ "**ಪ್ರೇಮ**" ಪತ್ರಿಕೆಯ ಸಂಪಾದಕರಾದ ಶ್ರೀಮಾನ್ ಪಂಡಿತ **ತಾರಾನಾಥ** ಮೊದಲಾದ ಮಹನೀಯರಉಪಕಾರ ಪದೇಪದೇ ಸ್ಮರಿಸುವೆ.

ಕನ್ನಡಿಗರ ಅಡಿಯಾಳು,

**ದೇ. ಹ.**



# ರಣವಿಕ್ರಮ ಚಾಲುಕ್ಯರ ರಣರಸಿಕ



ಗ್ರೀಷ್ಮಋತುವು, ಸಾಮ್ರಾಟದಿನಮಣಿಯ ದೀರ್ಘಕಾಲದಆಳಿಕೆಯ ಮುಗಿದ ಸ್ವಲ್ಪಹೊತ್ತಿನಲ್ಲಿಯೇ ರಾಜ್ಯಸೂತ್ರಗಳನ್ನೆಲ್ಲ ರಜನೀದೇವಿಯು ತನ್ನ ಕೈಯಲ್ಲಿ ತೆಗೆದುಕೊಂಡಳು. ದೇವಿಯು ದರ್ಪದ ರಾಜ್ಯದಾಡಳಿತಕ್ಕೆ ಸಕಲ ಪ್ರಾಣಿಮಾತ್ರವೂ ಭಯಚಕಿತವಾಗಿ ಹೋಗಿತ್ತು. ಗ್ರಾಮವಾಸಿಗಳಾದ ಜನರು ಮನೆಬಿಟ್ಟು ಹೊರಗೆ ಬರಲು ಹಿಂಜರಿಯುತ್ತಿದ್ದರು. ಅವಳ ಕಟ್ಟಪ್ಪಣೆಯ ಮೇರೆಗೆ ಮಾರುತನು, ಗ್ರಾಮಗಳೊಳಗಿಂದ ಹಾದು ನಿರ್ಜನ ಪ್ರದೇಶದಲ್ಲಿ ಪ್ರಚಂಡವೇಗದಿಂದ ಸಾಗುತ್ತಿರಲು, ಅವನ ಆ ವೇಗದ ಆಘಾತಕ್ಕೆ ತರುಲತೆನಿಕರಗಳು ಪಟ ಪಟ ಕಳಚಿ ಬೀಳುತ್ತಿದ್ದವು. ಕ್ರೂರ ಶ್ವಾಪದಗಳೂ ಪಕ್ಷಿಗಳೂ ಕ್ರಿಮಿಕೀಟಕಗಳೂ ಇದ್ದ ತಮ್ಮ ಸ್ಥಳಗಲ್ಲಯೇ ಗರ್ಜನೆಮಾಡುತ್ತ ಗಿಲಿ ಬಿಲಿ ಮಾಡುತ್ತ ಆ ನಿರ್ಜನಪ್ರದೇಶದ ಶಾಂತತೆಯನ್ನು ಭಂಗಗೊಳಿಸುತ್ತಿದ್ದವಲ್ಲದೆ ಮುಂದಡಿಇಡಲು ಧೈರ್ಯ ಮಾಡುತ್ತಿರಲಿಲ್ಲ. ಬರಬರುತ್ತ ಮರುತನಿಗೆ ಮೇಘನ ಸಹಾಯವೂ ದೊರೆಯ ಹತ್ತಿತು. ಆಮೇಲೆ ಕೇಳುವದೇನು! ಮರುತನ ಸುಂಯಸುಂಯಾಟದಿಂದಲೂ ಮೇಘನಕಾರ್ಗೋಲ ಮಿಂಚು ಕಡಕಡಾಟದಿಂದಲೂ ಆ ನಿಶಿಯ ನಿರ್ಜನರಾಜ್ಯವು ಬಹು ಭೀಕರವಾಗಿ ಕಾಣುತ್ತಿತ್ತು.

ರಜನೀದೇವಿಯ ಇಂಥ ಘನಗಂಭೀರ ನಿರ್ಜನರಾಜ್ಯದಲ್ಲಿ ಪ್ರವಾಸಿಯೋರ್ವನು ಅಶ್ವಾರೂಢನಾಗಿ ಮಂದಗತಿಯಿಂದ ಎದುರು ಬರುವ ಎಡ ...ನು, ಲೆಕ್ಕಿಸದೆ, ಮಾರ್ಗಕ್ರಮಣ ಮಾಡುತ್ತ ನಡೆದಿದ್ದನು. ಮಿಂಚಿ ...ದೇಶ ಕಾಣುತ್ತ ಹೋದ ಹಾಗೆಲ್ಲ ತನ್ನ ಕುದುರೆಯನ್ನು ...ನು. ಇಷ್ಟರಲ್ಲಿ ದೂರದಲ್ಲಿ ಮಸಕು ಮಸಕಾಗಿ ... ನಮ್ಮ ಪ್ರವಾಸಿಯು ಆ ದೀವಿಗೆಯ ...ಾಶವಾಗಿ ಸಾಗಿಸಿದನು. ಬೆಳಕಿನ ಸ ...ವ ದಿನ್ನೆಯಮೇಲೆ ಸಾಲ್ಕೈ

ದು ಹುಲ್ಲುಗುಡಿಸಲುಗಳಿದ್ದು ಅವುಗಳೊಳಗೆ ದೀವಿಗೆಗಳು ಮಿಣುಕು ಮಿಣುಕಾಗಿ ಉರಿಯುತ್ತಿದ್ದವು.

ದೀಪವನ್ನು ನೋಡುತಲಿ, ಪ್ರವಾಸಿಗೆ ಕಿಂಚತ್ ಆನಂದವಾದಂತಾಯಿತು. ಇಲ್ಲಿಯಾರಾದರೂ ನಿಶ್ಚಯವಾಗಿ ವಸತಿ ಮಾಡಿರಬಹುದೆಂದು ಊಹಿಸಿ, ದಿನ್ನೆಯಮೆಲೆಹೋಗಿ ತೆರೆಯಲ್ಪಟ್ಟ ಭವ್ಯಗುಡಿಸಲಿನಬಾಗಿಲಲ್ಲಿ ಪ್ರವೇಶಿಸಿದನು ಬಾಗಿಲ ಒಳಕ್ಕೆ ಬಂದೊಡನೆ ' ಯಾರಿರುವರು " ಎಂಬ ಧ್ವನಿಯು ಒಳಗಣಿಂದ ಕೇಳಬಂದಿತು. " ನಾನೊಬ್ಬದಾರಿ ತಪ್ಪಿಸಿಕೊಂಡ ಪ್ರವಾಸಿಯು, ಗಾಳಿಕಟ್ಟಾದುದರಿಂದ ಮಳೆಯು ಒತ್ತರವಾಗಿ ಬರಬಹುದು; ಆದುದರಿಂದ ಈ ಯೊಂದುರಾತ್ರಿ ಇಲ್ಲಿ ಇಳಿಯಲು ಸ್ಥಳಕೊಟ್ಟರೆ ಬಹಳಉಪಕಾರ ವಾಗುವದು " ಎಂದನು ಪ್ರವಾಸಿಯ ವಾಕ್ಯಪೂರ್ಣ ವಾಗುವದರೊಳಗಾಗಿಯೇ ಓರ್ವ ಗಟ್ಟಿಮುಟ್ಟ ಅವಯವದ ಅರವತ್ತುವರುಷದ ಮುದುಕನು ಅಲ್ಲಿಗೆಬಂದು ಪ್ರವಾಸಿಯನ್ನು ತನ್ನತೀಕ್ಷ್ಣಚಕ್ಷುಗಳಿಂದ ಚನ್ನಾಗಿ ನೋಡಿ ಶಾಂತ ಸಮಾಧಾನದಿಂದ ಒಳಗೆಬರಲು ಹೇಳಿ, ತಾನು ಹೊರಗೆಹೋಗಿ ಇಬ್ಬರು ಸೇವಕರನ್ನು ತನ್ನೆಡೆಗೆಬರಲು ಒದರಿಹೇಳಿದನು. ಮುಂದೆ ತುಸುಹೊತ್ತಿನಲ್ಲಿಯೇ ಕಪ್ಪಿನಲ್ಲಿ ಇದ್ದ ಲಿಯನ್ನುಹೋಲುವ ಮುಂಡೆದಿರುಗಿದ ಅವಯವದ ಇಬ್ಬರು ಸೇವಕರು ಅವನೆಡೆಗೆ ಬಂದರು.

ಮುದುಕ:—" ಎಲೋರಾಮ ನೀನು ಈ ಕುದುರೆಯನ್ನು ತೆಗದುಕೊಂಡುಹೋಗಿ, ಮಳೆಗಾಳಿತೂರದ ಒಂದು ಚಪ್ಪರದೊಳಗೆ ಕಟ್ಟಿ, ದಣಿದುಬಂದುದರಿಂದ ತುಸು ವೈತಿಕ್ಕಿ ನೀರುಕುಡಿಸಿ ತಿನ್ನಲುಹುಲ್ಲನ್ನುಹಾಕು. ಲಚಮಾ ನೀನು ಈ ಸಾಮಾನುಗಳನ್ನು ತೆಗದುಕೊಂಡು ಒಳಗೆನ್ನಗೆ " ಎಂದು ಅಧಿಕಾರ ಯುಕ್ತವಾಣಿಯಿಂದ ಅವರೀರ್ವರಿಗೆ ಹೇಳಿ ' ... ಯ ಕಡೆಗೆ ತಿರುಗಿ ಆದರದಿಂದ " ತಮ್ಮ ಕುದುರೆಯ ... ಗಳ ವ್ಯವಸ್ಥೆಯ ಸಲುವಾಗಿ ಸೇವಕರಿಗೆ ಹೇಳಿ ...

ಪ್ರವಾಸಿಯುಒಳಹೊಕ್ಕನು ... ದು ಒತ್ತಟ್ಟಿಗೆ ಇಟ್ಟನು. ...

ಏನುಬೇಕು" ಎಂದುಕೇಳಲು, ಪ್ರವಾಸಿಯು ಕುಡಿಯಲು ತುಸು ನೀರುಕೊಡಿರಿ, ಹಾಗೂಮಲಗಿಕೊಳ್ಳಲು ಸ್ಥಳತೋರಿಸಿರಿ ನೀರುಕುಡಿದು ಮಲಗಿಕೊಳುತ್ತೆನೆ, ಈ ಹೊತ್ತು ನಾನುಬಹಳ ದಣಿದುದರಿಂದ ಹೆಚ್ಚಿಗೆಏನುಬೇಕಿ "ಒಳ್ಳೇದು" ಎಂದು ಆಮುದುಕನು ಒಳಗೆಹೋಗಿ ನೀರುತುಂಬಿದ ಸಲ್ಲಚ್ಚವಾದ ಒಂದು ಮಣ್ಣಿನಪಾತ್ರೆಯನ್ನೂ, ಕಾಬಾಳಿಯ ಎಲಿಯಮೇಲ್ಕೆ ಕೆಲವು ಕಂದಮೂಲ ಫಲಗಳನ್ನೂ ತಂದು ತರುಣನಮುಂದಿರಿಸಿ ಸೌಜನ್ಯದಿಂದ "ತರುಣಶ್ರೇಷ್ಠನೇ ತೆಗೆದುಕೊಳ್ಳು ಹಸಿವೆ ನೀರಡಿಕೆಯಿಂದ ಶಾಂತನಾಗು; ನಾನೋರ್ವವನವಾಸಿಯು ನನ್ನಹತ್ತರ ನಿನಗುಚಿತವಾದ ಪದಾರ್ಥಗಳು ಇಲ್ಲ. ಈ ಆರಣ್ಯವಾಸಿಯು ತನ್ನಲ್ಲಿದ್ದ ಕಂದಮೂಲ ಫಲಗಳನ್ನು ನಿನಗಾಗಿ ತಂದಿರುವನು ಒಲ್ಲೆನ್ನದೆ ತೆಗೆದುಕೊಳ್ಳು. ಈ ಭಾಗದಲ್ಲಿ ವ್ಯಾಘ್ರಚರ್ಮ ಹಾಸಿರುತ್ತದೆ ಸುಖವಾಗಿ ಮಲಗಬಹುದು." ಎಂದು ಹೇಳಿ ಆಮುದುಕನು ಬಾಗಿಲ ತಟ್ಟೆಯನ್ನು ಮುಚ್ಚಿಕೊಂಡು ಹೊರಕ್ಕೆ ಹೋದನು.

ಪ್ರವಾಸಿಯು ಅತ್ಯುತ್ತಮವಾದ ಹಣ್ಣು ಹಂಪಲಗಳನ್ನು ತಿಂದು ಎಷ್ಟೇಚ್ಛ ನೀರುಕುಡಿದು ಹುಲಿದೊಗಲಮೇಲೆ ಮಲಗುವದೊಂದೇತಡ ಗಾಢವಾದ ನಿದ್ರೆಯುಬಂದಿತು. ಒಂದುಮಗ್ಗಲಿಂದ ಮತ್ತೊಂದುಮಗ್ಗಲು ಆಗ್ವವದರೊಳಗಾಗಿಯೇ ಅರುಣೋದಯವಾಗಿತ್ತು. ಸೂರ್ಯೋದಯವಾಗುತಲೆ ಎಚ್ಚರಾಯಿತು. ನಿದ್ರೆಯುಚೆನ್ನಾಗಿ ಆದುದರಿಂದ ನವಚೈತನ್ಯವು ಬಂದಂತಾಗಿತ್ತು. ಅವನು ಮೆಲ್ಲಗೆ ಗುಡಿಸಲ ಬಾಗಿಲನ್ನು ತೆರದು ಹೊರಗೆ ಬಂದುನೋಡುತಲೆ ಆಕಾಶವು ನಿರಭ್ರವಾಗಿ ಕಾಣುತ್ತಿತ್ತು. ಉಷ್ಣರಶ್ಮಿಯ ಸುವರ್ಣಕಿರಣಗಳು ಎಲ್ಲಕಡೆಗೂ ಪಸರಿಸಿದ್ದವು. ರಾತ್ರಿಯಲ್ಲಿ ಮಳೆಯು ಚೆನ್ನಾಗಿ ಆದುದರಿಂದ ನೋಡಿದತ್ತೆಲ್ಲ ಕೆಸರೂ ಅಲ್ಲಲ್ಲಿನೀರುಕಾಣ್ಣುತಿತ್ತು ಮುಂಜಾವಿನ ತಂಗಾಳಿಯು ಮಂದವಾಗಿಬೀಸಿ ಮನಸ್ಸಿಗೆ ಆಲ್ಹಾದ ಕೊಡುತಿತ್ತು. ಪ್ರವಾಸಿಯು ಗುಡಿಸಲತಲೆಬಾಗಿಲನ್ನು ಮೊದಲನಂತೆ ಮುಂದಕೆ ಮಾಡಿ ದಿನ್ನೆಯನ್ನು ಇಳಿದು ಕೆಳಗೆಹೋಗಹತ್ತಿದನು.

ತುಸುದೂರ ಹೋದಮೇಲೆ ಒಂದು ಚಿಕ್ಕಹಳ್ಳವು ಕಣ್ಣಿಗೆಬಿತ್ತು. ಪ್ರವಾಸಿಯು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಹಳ್ಳಕ್ಕೆಹೋಗಿ ಕೈಕಾ

ಲುಮೋರೆಗಳನ್ನು ಸ್ವಚ್ಛವಾಗಿತೊಳೆದುಕೊಂಡು, ಹಳ್ಳದ ದಂಡೆಗುಂಟ ವಿಚಾರಮಾಡುತ್ತ ಪೂರ್ವಾಭಿಮುಖನಾಗಿ, ಸೃಷ್ಟಿಸೌಂದರ್ಯವನ್ನೀಕ್ಷಿಸುತ್ತ ದೇಹದರಿವಿಲ್ಲದೆ ಸಾಗಿದ್ದನು. ವಿಚಾರಮಗ್ನನಾದುದರಿಂದ ಅವನಲ್ಲಿ ಯಾವಕಡೆಗೆ ಹೋಗುವನೆಂಬ ಅರಿವು ಸಹ ಇದ್ದಿಲ್ಲ. ಇಷ್ಟರಲ್ಲಿ "ಗುರ್, ಗುರ್," ಎಂಬ ಶಬ್ದವು ಆರಣ್ಯವನ್ನೆಲ್ಲ ವ್ಯಾಪಿಸಿ ಪ್ರವಾಸಿಯ ಕರ್ಣರಂಧ್ರವನ್ನೂ ಪ್ರವೇಶಿಸಿತು. ಬಹಿರ್ಮುಖನಾಗಿ ನಾಲ್ಕುಹೆಜ್ಜೆ ಹಿಂದಿರುಗಿ ನೋಡುತ್ತಾನೆ. ಪ್ರಭಾತ ಸಮಯದಲ್ಲಿ ಹಳ್ಳದ ನೀರು ಕುಡಿಯಲು ಬಂದ ವ್ಯಾಘ್ರವು ಇವನನ್ನುನೋಡಿ ಗರ್ಜಿಸುತ್ತಿರುವದು ಕಂಡು ಬಂದಿತು. ಪ್ರವಾಸಿಯು ಹಾಸಿಗೆಯಿಂದ ಎದ್ದವನು ಮೈಮೇಲೆ ಎಚ್ಚರವಿಲ್ಲದೆ, ಹಾಗೆಯೇ ಬಂದುದರಿಂದ, ಈ ಹೊತ್ತಿನಲ್ಲಿ ಅವನಕೈಯಲ್ಲಿ ಯಾವಬಗೆಯ ಆಯುಧವೂ ಇದ್ದಿಲ್ಲ ಮೈಮೇಲೆ ಕಿರಿ ಅಂಗಿಯೂ ಹೆಗಲಮೇಲೆ ಹೊತ್ತುಕೊಳ್ಳುವ ಧೋತರಮಾತ್ರ ಇದ್ದಿತು ತೊಟ್ಟ ಅಂಗಿಯನ್ನು ಕಳೆದು ಧೋತರವನ್ನೂ ಅಂಗಿಯನ್ನೂ ವ್ಯಾಘ್ರದ ಬಾಯಿಯಲ್ಲಿ ಕೊಡುವದಕ್ಕಾಗಿ, ಎಡಗೈಗೆ ಸುತ್ತಿಕೊಳ್ಳುವಷ್ಟರಲ್ಲಿಯೇ ಹುಲಿಯು ಮೈಮೇಲೆ ಜಿಗಿಯಿತು. ಪ್ರವಾಸಿಯು ಶೀಘ್ರಗತಿಯಿಂದ ಅಡ್ಡಸರಿದು ಮೊದಲಿನ ಲಾಘವನ್ನು ತಪ್ಪಿಸಿಕೊಳ್ಳುವದರೊಳಗಾಗಿಯೇ, ಬಾಯಿಗೆ ತುತ್ತು ಬಾರದೆ ಹೋದುದರಿಂದ, ಹಿಂದಕ್ಕೆ ಸರಿದು ಹುಲಿಯು ಮತ್ತೊಂದು ಸಾರೆ ಹಾರಿತು. ಈ ಸಾರೆ ಪ್ರವಾಸಿಯು ಅದನ್ನು ಎದುರಿಸಬೇಕಾಯಿತು. ಅವನು ಬಟ್ಟೆ ಸುತ್ತಿದ ತನ್ನ ಎಡಗೈಯನ್ನು ಅದರ ಬಾಯಿಯಲ್ಲಿಕೊಟ್ಟು ಅದರ ಎರಡೂ ಹಿಂಗಾಲುಗಳಮೇಲೆ ಬಲವಾಗಿ ತನ್ನಕಾಲುಗಳನ್ನಿಟ್ಟು ಮುಂಗಾಲೆರಡನ್ನು ತನ್ನಹೆಗಲಮೇಲೆ ತೆಗದುಕೊಂಡು, ಅದರಮೃದುವಾದ ಹೊಟ್ಟೆಯಮೇಲೆ ಮುಷ್ಟಿಪ್ರಹರವನ್ನು ಮಾಡಹತ್ತಿದನು. ಎರಡುಮೂರು ಹೊಡತದೊಳಗೆ ಅದು ಆರಣ್ಯವೆಲ್ಲ ನಡುಗುವಹಾಗೆ ಗರ್ಜಿಸಿ ಉರುಳಿ ನೆಲದಮೇಲೆಬಿದ್ದಿತು ನೆಲಕ್ಕೆ ಬಿದ್ದಮೇಲೆ ಮತ್ತೊಂದು ಸಾರೆ ಹೊಡೆಯುವಷ್ಟರಲ್ಲಿ ಆಹೆಣ್ಣು ಹುಲಿಯು ಆವೇದನೆಯನ್ನು ಸಹಿಸಲಾರದೆ ಕೆರಳಿ ಚಡಪಡಿಸುತ್ತ ಪುನಃ ಮೇಲಕ್ಕೆದ್ದುನಿಂತು ಕುತ್ತಿಗೆಗೆ ಬಾಯ್ನಿಡುವಷ್ಟರಲ್ಲಿ ಹಿಂದಿನಿಂದ ಬಾಣಗಳು ಒಂದರಮೇಲೊಂದು ಸುಯಿಗುಟ್ಟುತ್ತಬಂದು, ಬಲವಾದ ಗಾಯಗ

ಳನ್ನು ಮಾಡಿ ನೆಲಕ್ಕೆ ಕೆಡುಹಿದವು. ಬಾಣಗಳು ಮರ್ಮಸ್ಥಳದಲ್ಲಿ ನಟ್ಟಿ
ದುದರಿಂದ ಕಾಲುಗಳನ್ನು ಮೇಲಕೆತ್ತಲುಸಹ ಬರಲಿಲ್ಲ. ಪ್ರವಾಸಿಯು ಧೈ
ರ್ಯದಿಂದ ನಟ್ಟಬಾಣಗಳನ್ನು ಕಡೆಗೆ ತೆಗೆಯುತಲೆ ಆಹುಲಿಯು ಪ್ರಾಣ
ಬಿಟ್ಟಿತು.

ಬಿಲ್ಲುಹೊಡೆದವರು ಯಾರಿರಬಹುದೆಂದು ತಿರುಗಿನೋಡುತಲೆ ಹಿಂ
ದಿನರಾತ್ರಿ ಮಲಗಲು ಸ್ಥಳಕೊಟ್ಟ ವೃದ್ಧನೂ ಅವನಬದಿಯಲ್ಲಿ ದೇವನಾಗ
ಕನ್ನಿಕೆಯರನ್ನು ಹಿಯ್ಯಾಳಿಸುವ ಗಂಭೀರ ಮುದ್ರೆಯುಳ್ಳ ಓರ್ವ ನವ
ಬಾಲಿಕೆಯೂ ಅವನಹಿಂದೆ ಬಾಣಬತ್ತಳಿಕೆಗಳುಳ್ಳ ರಾಕ್ಷಸರಂತಿರುವ ಇ
ಬ್ಬರು ಬೇಡರೂ ನಿಂತಿದ್ದರೂ. ಪ್ರವಾಸಿಯು ತಿರುಗಿ ನೋಡುತಲೆ ಆ ವೃ
ದ್ಧನು, “ಶೂರತರುಣನೇ ಭಾಪು! ಭಾಪು!! ನಾನುಮುಂಜಾವಿನಲ್ಲಿ ಎದ್ದು
ಬರುವದರೊಳಗಾಗಿಯೇ ನೀನು ಕುಟೀರವನ್ನು ಬಿಟ್ಟು ಹೊರಹೋರಟಿದ್ದಿ
ಪ್ರಾತರ್ವಿಧಿ ತೀರಿಸಿಕೊಂಡು ಬರಬಹುದೆಂದು ಊಹಿಸಿ ನಾನುಕುಸುರೆಯ
ಚಪ್ಪರದಕಡೆಗೆ ಹೋದೆನು. ಇಷ್ಟರಲ್ಲಿ ಹುಲಿಯ ಗರ್ಜನೆಯು ತೀರ ಸ
ಮೀಪದಲ್ಲಿ ಕೇಳಬಂದಂತಾಯಿತು. ಕೂಡಲೆ ನಾನು ಬಿಲ್ಲನ್ನುತೆಗೆದುಕೊಂ
ಡು ಧ್ವನಿಯು ಕೇಳಿಬಂದ ದಿಕ್ಕಿನಕಡೆಗೆ ಹೊರಟೆನು. ನಾನು ಹೊರಡುತ
ಲೆ ಇವರೆಲ್ಲರೂ ನನ್ನನ್ನು ಹಿಂಬಾಲಿಸಿದರು. ಹಳ್ಳದಸಮೀಪಕ್ಕೆ ಬಂದು
ನೋಡುತಲೆ ಹುಲಿಯ ಸಂಗಡ ನಿಮ್ಮ ಮುಷ್ಟಿಯುದ್ಧವು ನಡೆದಿತ್ತು.
ನೀವು ಯಾವುದೊಂದು ರಾಜಕುಲವನ್ನಾಗಲಿ ಅಥವಾ ಶೂರ ಪುರುಷರ
ವಂಶವನ್ನಾಗಲಿ ಅಲಂಕರಿಸಿರ ಬಹುದೆಂದು ನಾನು ನಿನ್ನನ ರಾತ್ರಿಯೇ
ಊಹಿಸಿದ್ದೆನು. ನನ್ನ ತರ್ಕವು ಸಪ್ರಮಾಣವಾಗಿ ಈಗ ಕಣ್ಣುಮಟ್ಟ ನೋಡಿ
ರುವ ತಮ್ಮ ಈಶೂರಕೃತ್ಯದಿಂದ ನಿಃಸಂಶಯವಾಗಿ ಸಿದ್ಧವಾದಂತಾಯಿತು

“ವ್ಯಾಘ್ರನಖದಿಂದಾದ ಗಾಯದಿಂದ ಹೊರ ಹೊರಡುತ್ತಿರುವ
ನೆತ್ತರವನ್ನು ಒರಸಿಕೊಳ್ಳುತ್ತ ತರುಣನು” ತಮ್ಮ ತರ್ಕವು ಸ್ವಲ್ಪಾಂಶ
ದಿಂದ ನಿಜವದೆ. ನಾನು ಚಾಲುಕ್ಯ ಸಾಮ್ರಾಟ ಪುಲಕೇಶಿ ಮಹಾರಾಜರ
ತಮ್ಮ ಆಂಧ್ರ ದೇಶಾಧಿಪತಿ ಕುಬ್ಜ ವಿಷ್ಣುವರ್ಧನರ ಮಗನು ನನಗೆ ರಣ
ರಸಿಕ ನೆನ್ನುವರು. ಇದನ್ನು ಕೇಳುತಲೆ ಮುದುಕನ ಮುಖಚರ್ಯವೇ

ಬೇರೆ ಯಾಯಿತು. "ಇರಬಹದು" ಎಂದು ಒಂದು ದೀರ್ಘ ಶ್ವಾಸಬಿಟ್ಟು ರಾಜಪುತ್ರನೇ ! ಹೀಗೆ ಅಡವಡವಿ ಅಲೆದಾಡುವದರಲ್ಲಿ ನಿನ್ನ ಉದ್ದೇಶ ವೇನಿರುವದು.

ರಣರಶಿಕನು ವಿನಯದಿಂದ ತಮ್ಮ ಕುಟೀರಕ್ಕೆ ನಡೆಯಿರಿ ಅಲ್ಲಿನಾನು ನನ್ನ ಎಲ್ಲ ಹೃದ್ಗತವನ್ನು ಹೇಳುವೆನು.

ಮುದುಕ:— ಹೌದು ನಡೆಯಿರಿ ಸೂರ್ಯನು ಮೇಲಕ್ಕೆ ಬಂದಿರುವನು. ಬಿಸಿಲಿನ ತಾಪವಾದರೂ ಆಗಹತ್ತಿದೆ. ಗುಡಿಸಲಿಗೆ ಹೋಗೋಣ. ದಾರಿಯಲ್ಲಿ ಯಾವಮಾತು ಕತೆಗಳಾಗದೆ ಎಲ್ಲರೂಬಂದು ಗುಡಿಸಲು ಸೇರಿದರು. ಗುಡಿಸಲಿನೊಳಗೆ ಪ್ರವೇಶಿಸಿದಮೇಲೆ ಅಲ್ಲಿಯೇ ಹಾಸಿದ ಒಂದು ಹುಲಿ ದೊಗಲಮೇಲೆ ವೃದ್ಧನು ಉಸ್ಸೆಂದು ಕುಳಿತುಕೊಂಡನು. ಅವನ ತುಸು ದೂರದಲ್ಲಿಯೇ ಜಿಂಕೆಯ ತೊಗಲಿನಮೇಲೆ ರಣರಸಿಕನು ಕುಳಿತುಕೊಂಡನು. ಆಗ ಮುದುಕನು— ರಾಜಪುತ್ರ ನೀನು ನಿನ್ನ ಹೃದ್ಗತ ಹೇಳುವೆನೆಂದಯಲ್ಲ ಹೇಳಲು ಬರುವಂತಿದ್ದರೆ ಹೇಳು.

ರಾಜಪುತ್ರ:— ತಮ್ಮಮುಂದೆ ಹೇಳದೆ ಇನ್ನಾರಮುಂದೆ ಹೇಳಲಿ. ಪೂಜ್ಯರೇ ! ನಾನು ನನ್ನ ಸ್ವರ್ಗವಾಸಿ ಪಿತ್ರಗಳ ಅಂತಿಮ ಆಜ್ಞೆಯನ್ನು ಪಾಲಿಸುವದಕ್ಕಾಗಿ ಹೀಗೆ ಆಡಿವಿ ಅಡವಿ ಅಲೆದಾಡುತ್ತಿರುವೆನು. ಎಂದು ವಿಷಣ್ಣ ವದನನಾಗಿ ಹೇಳಿದನು.

ಆ ವೃದ್ಧಪುರುಷನು ತನ್ನ ವಿಶಾಲವಾದ ಕಣ್ಣುಗಳನ್ನು ರಣರಸಿಕನ ಕಡೆಗೆ ಹೊರಳಿಸಿ " ಏನು ರಣರಸಿಕ ರಾಜಪುತ್ರನೇ ಚಾಲುಕ್ಯ ವಂಶೀಯನೆಂಗಿ ವಿಷ್ಣುವರ್ಧನ ಮಹಾರಾಜರು ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಯಿಸಿ ಈನಶ್ವರ ದೇಹವನ್ನು ಬಿಟ್ಟುಹೋದರೋ ?

ರಣರಶಿಕ:— ಹೌದು ಪಿತೃವರ್ಯರು ಗತಿಸಿ ವಂದುವರುಷವಾಯಿತು. ಅವರಕಡೆಯ ಇಚ್ಛೆಯನ್ನು ಪೂರ್ಣಗೊಳಿಸುವದಕ್ಕಾಗಿ ನಾನು ಹೊರಟದ್ದರಿಂದ ಆಂಧ್ರದೇಶದ ಆಡಳಿತ ಎಲ್ಲ ವ್ಯವಸ್ಥೆಯನ್ನು ಚಾಲುಕ್ಯ ಸಾಮ್ರಾಟ ಚಂದ್ರಾದಿತ್ಯಮಹಾರಾಯರೇ ನೋಡುವರು ಎಂದು ಅಶ್ರು

ಪೂರ್ಣ ನೇತ್ರದಿಂದ ನುಡಿದನು. ವೀರವೃದ್ಧನ ಕಣ್ಣುಗಳೂ ನೀರುದುಂಬಿದವು. ಯಾರಿಗೂ ಕಾಣಗೊಡದಂತೆ ವಿರುದ್ಧ ದಿಶೆಗೆ ತನ್ನಮೋರೆ ತಿರುವಿ ಕಣ್ಣೀರೊರಿಸಿಕೊಂಡು ದುಃಖಾವೇಗವನ್ನು ಕಡಿಮೆ ಮಾಡಿಕೊಂಡು ರಾಜಪುತ್ರ ಮಹಾರಾಯರ ಕೋನೆಯ ಇಚ್ಛೆಯನ್ನು ಹೊರನುಡಿಯಲು ಬರುವಂತಿದ್ದರೆ ಹೇಳಲು ಅಡ್ಡಿ ಇಲ್ಲ.

ರಾಜಪುತ್ರ— ಮೇಲಿಂಗಮೇಲೆ ಇದನ್ನೇನು ಕೇಳುವಿರಿ, ಪ್ರಪಂಚದಿಂದ ಅಲಿಪ್ತರಾಗಿ ಆರಣ್ಯವಾಸಿಗಳಾದ ನಿಮ್ಮಮುಂದೆ ಹೇಳಲು ಯಾಕೆ ಸಂಕೋಚ. ಪಿತ್ರವರ್ಯರ ಮೊದಲನೆಯ ಆಜ್ಞೆಯಂದರೆ ಪುಲಕೇಶಿ ಸಾರ್ವಭೌಮರ ಅಪ್ಪಣೆಯ ಮೇರೆಗೆ ರಾಜ್ಯಸೂತ್ರಗಳನ್ನು ಸಾಗಿಸಲು ಕುಬ್ಜಮಹಾ ರಾಯರಿಗೆ ಸಹಾಯಕೊಡಲು ಬಂದ ಮಂತ್ರಿವರ್ಯವೀರಸೇನರನ್ನು ಗೊತ್ತುಹಚ್ಚುವದು ಏಕಂದರೆ ಅವರು ಕುಬ್ಜಮಹಾರಾಯರು ಇರುವಾಗಲೆ, ಆದೇಶವನ್ನು ಬಿಟ್ಟು ರೇವಾಖಂಡದ ಈ ಭಾಗಕ್ಕೆಬಂದು ಈ ಕಟ್ಟಡವಿಯಲ್ಲಿ ಕಾಲಕ್ಷೇಪ ಮಾಡುತ್ತಿರುವರೆಂದು ಸುದ್ದಿಯು ಈ ಭಾಗದಲ್ಲಿ ನೆಲೆಗೊಂಡಿದೆ ಆದುದರಿಂದ ಅವರನ್ನು ಅಲ್ಲಲ್ಲಿಹುಡುಕಲು ತಿರುಗಾಡುತ್ತೇನೆ.

ಅಶ್ರುಪ್ರವಾಹದಿಂದ ಕೆಂಜಿಗದಂತೆ ಕೆಂಪಾದ ಕಣ್ಣುಗಳನ್ನು ತೆರೆದು ಮುದುಕನು ಅವರಕಡೆಗೆ ಹೋಗವದು ಇಷ್ಟು ಅತ್ಯಾವಶ್ಯವಿದೆಯೋ ? ನೀವು ಆವೀರಸೇನರನ್ನು ನೋಡಿರಬಹುದು?

ರಣರಶಿಕ— ಇಲ್ಲ! ಮೊದಲು ನೋಡಿರಬಹುದು ಅದು ನನಗೆ ಚೆನ್ನಾಗಿ ನೆನಪಿಲ್ಲ. ಇತ್ತೀಚಿಗೆ ನಿಜವಾಗಿ ಅವರನ್ನು ನಾನು ಎಂದು ನೋಡಿಲ್ಲ. ಆದುದರಿಂದ ಇವರೇ ವೀರಸೇನ ಮಹಾರಾಯರೆಂದು ಗುರ್ತು ಹಿಡಿಯಲು ಬಾರದಂತಾಗಿದೆ. ಅವರು ರಾಜಧಾನಿಯಲ್ಲಿದ್ದಾಗ ನಾನು ಬಹಳ ಸಣ್ಣವ ನಿರಬಹುದು ಮಧ್ಯದಲ್ಲಿಯೇ ಮುದುಕನು ಬಾಯಿಹಾಕಿ ಹಾಗಾದರೆ ಆ ವೀರಸೇನರು ಇನ್ನು ಜೀವದಿಂದಿರಬಹುದಲ್ಲವೇ? ಒಳ್ಳೇದು ಅವರನ್ನು ಹುಡುಕಿ ನೀವು ಮಾಡುವದಾದರೂ ಏನು? ರಣರಶಿಕ— ಅದು

ನನಗೆ ಗೊತ್ತಿಲ್ಲ, ಗೊತ್ತಿಲ್ಲದ ವಿಷಯವನ್ನು ಹೇಗೆ ಹೇಳಲಿ. ಮೊದಲು ಹೇಳಿದಮೇರೆಗೆ ಅವರು ಈಭಾಗದಲ್ಲಿ ಇರುವರೆಂಬ ಸುದ್ದಿಯು ಇದ್ದುದರಿಂದ ಹುಡುಕಲು ಹೊರಟಿರುವೆನು. ಆ ವೃದ್ಧಗೃಹಸ್ಥನು ತನ್ನ ಬಲಭಾಗದಲ್ಲಿ ಕುಳಿತಿದ್ದ ಬಾಲಕಿಯ ಕಡೆಗೆ ನೋಡುತ್ತ ಏನು? ಆ ಸರದಾರರಿಗೆ ಯುದ್ಧದ ನಿಮಂತ್ರಣ ಕೊಡಲು ಬಂದಿರುವಿರೋ? ಅಥವಾ ಕೈಗೆಶಿಕ್ಕುತಲೆ ಶೆರೆಹಿಡಿದು ಇಲ್ಲವೇ ಕಾಣುತಲೆ ಶಿರಚ್ಛೇದ ಮಾಡುವಿರೋ? ಮುದುಕನ ಮಾತಿಗೆ ನಾಚಿಕೆಗೊಂಡು, ರಣರಶಿಕನು—ಛೀ! ಮನಸ್ಸಿನಲ್ಲಿ ಎಳ್ಳಷ್ಟಾದರೂ ವಿಪರೀತ ಕಲ್ಪಿಸಕೂಡದು. ಸ್ವರ್ಗಸ್ಥ ಕುಬ್ಜಅರಸರು ಅಮಾತ್ಯರೊಡನೆ ವರ್ತಿಸಿದ ಕಠೋರತನಕ್ಕಾಗಿ ಅವರಲ್ಲಿ ಕ್ಷಮೆಬೇಡಲು ನನಗೆ ಆಜ್ಞೆಮಾಡಿರುವರು. ಇದಲ್ಲದೆ ಅವರು ಕ್ಷಮಿಸದವರೆಗೆ ಪರಲೋಕದಲ್ಲಿ ನನ್ನ ಜೀವಕ್ಕೆ ಶಾಂತಿ ಸಿಗಲಾರದೆಂದು ಸಾರಿ ಸಾರಿ ಹೇಳಿರುವರು. ಆದುದರಿಂದ ನನ್ನ ತಂದೆಯವರು ಮಾಡಿದ ಸರ್ವಾಪರಾಧಕ್ಕೆ ನಾನುಅವರನ್ನು ಕ್ಷಮೆ ಬೇಡುವೆನು. ಅವರ ಶೋಧಾರ್ಥವಾಗಿಯೇ ಈ ಹತ್ತು ಹನ್ನೆರಡು ತಿಂಗಳಿಂದ ರಾತ್ರಿಹಗಲು ಬಿಸಿಲು ನೆರಳು ಚಳಿಮಳೆ ಗಾಳಿಯನ್ನದೆ ಅಲ್ಲಿಂದಿಲ್ಲಿ ಇಲ್ಲಿಂದಲ್ಲಿ ಅಡ್ಡಾಡುತ್ತಿರುವೆನು. ಮುಂದುಚ್ಚರಿಸುವದು ಅವನಿಂದಾಗಲಿಲ್ಲ. ಅವನ ಕುತ್ತಿಗೆಯು ಸಿರಗಳುಬಿಗಿದು ಕಣ್ಣೊಳಗಿಂದ ಪಟಪಟ ನೀರ ಹನಿಗಳು ಉದರಹತ್ತಿದವು. ಅವನು ಅಧೋವದನನಾಗಿ ಚಿತ್ರದೊಳಗಣ ಬೊಂಬೆಯಂತೆ ಸುಮ್ಮನೆ ಕುಳಿತುಬಿಟ್ಟನು.

ಆವೃದ್ಧನಿಗೂ ಬಹಳ ವಿಷಾದವಾದಂತೆ ಕಂಡುಬಂದಿತು. ಅವನು ದೊಡ್ಡದೊಂದು ನಿಟ್ಟುಸಿರುಬಿಟ್ಟು ಈಶ್ವರೇಚ್ಛೆಯು ಅವನ ಅಘಾದ ಮಹಿಮೆಯನ್ನು ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ. ಇರಲಿ ಒಳ್ಳಿದು ಬಂದಿದ್ದೆಲ್ಲ ಭೋಗಿಸಲೇಬೇಕು. ದುಃಖಾವೇಗವು ಕಡಿಮೆ ಯಾಗುತಲಿ ರಣರಸಿಕನು, ವೃದ್ಧಪುರುಷನೇ! ಪುಲಕೇಶಿ ಸಾಮ್ರಾಟರು ತಮ್ಮಂದಿರಾದ ಕುಬ್ಜ ವಿಷ್ಣುವರ್ಧನರಿಗೆ ವೆಂಗಿಯ ಆಧಿಪತ್ಯವನ್ನು ಕೊಡುವಕಾಲಕ್ಕೆ ತಮ್ಮ ವಿಶ್ವಾಸಿಕ ಸರದಾರರಾದ ವೀರಸೇನರನ್ನು ಕರೆದು ತಮ್ಮಂದಿರ ರಾಜ್ಯಪಾಡಳಿತವನ್ನು ನೋಡಲು ಹೇಳಿದರಂತೆ. ‚‚ ಹಾಗಾದರೆ ಮುಂದೇ-

ನಾಯಿತು.'' ಎಂದು ಮುದುಕನು ಕಿಂಚಿತ್ ಆತುರದಿಂದ ಕೇಳಿದನು. ''ದಿವಂಗತ ಮಹಾರಾಯರು ಕೆಲವು ದಿವಸಗಳವರೆಗೆ ಅಣ್ಣನವರ ಹೇಳಿಕೆಯ ಮೇರೆಗೆ ವೀರಸೇನರ ಕಿವಿಯ ಮೇಲಿಡದೆ ಯಾವಕೆಲಸವನ್ನೂ ಮಾಡುತ್ತಿದ್ದಿಲ್ಲವಂತೆ; ಆದರೆ ಮುಂದೆ ತುಸು ದಿವಸಗಳಲ್ಲಿಯೇ ''ವಿನಾಶಕಾಲೆ ವಿಪರೀತಬುದ್ಧಿ'' ಎಂಬಂತೆ ಅವರ ಹೇಳಿಕೆಯ ಮೇರೆಗೆ ನಡೆಯುವದಂತೂ ದೂರುಳಿಯಿತು. ಪ್ರತಿಯೊಂದು ಕೆಲಸವನ್ನು ಆ ಮುತ್ಸದ್ದಿ ವೃದ್ಧ ವೀರನ ವಿರುದ್ಧವಾಗಿ ಮಾಡಲುಪಕ್ರಮಿಸಿದರು. ಸಾರ್ವಭೌಮ ಪುಲಕೇಶಿ ಮಹಾರಾಯರು ಯಾವ ಉತ್ತರದೇಶದ ಸಾಮ್ರಾಟ ಹರ್ಷವರ್ಧನನ್ನು ಗೆದ್ದು ನರ್ಮದೆಯ ಆಚೆಯವರೆಗೆ, ಎಲ್ಲಭೂಮಿಯನ್ನು ತಮ್ಮ ಪಾದಾಕ್ರಾಂತ ಮಾಡಿದ್ದರೋ, ಆಹರ್ಷವರ್ಧನರ ಮಾಂಡಲೀಕರಲ್ಲೊಬ್ಬನು ತಲೆಎತ್ತಿ, ಆ ಪುಲಕೇಶಿ ಮಹಾರಾಯರ ತಮ್ಮಂದಿರಾದ ಇವರನ್ನು ಬಗ್ಗುಬಡೆಯಬೇಕೆಂದು ಮಹತ್ವಾಕಾಂಕ್ಷೆಯನ್ನು ತಾಳಿ, ಇಲ್ಲಿಯ ಮರ್ಮವನ್ನು ತಿಳಿದುಕೊಳ್ಳುವ ಸಲುವಾಗಿ ಕಳುಹಿದ ಗುಪ್ತಚಾರನಿಗೆ ಹಿಂದು ಮುಂದಣ ವಿಚಾರವಿಲ್ಲದೆ ಆಶ್ರಯ ಕೊಟ್ಟರಂತೆ. ಅವನೇ ಇವರ''—ಅವನನ್ನು ಮುಂದೆ ಮಾತಾಡಗೊಡದೆ ಮುದುಕನು ವೀರಾವೇಶದಿಂದ ಅವನ ಹೆಸರೇನು? ಎಂದು ಕೇಳಿದನು. ಮುದುಕನಕಡೆಗೆ ನೋಡುತ್ತಾ ರಾಜಪುತ್ರನು ''ಅವನ ನಿಜವಾದಹೆಸರು ಇದುವರೆಗೆ ಯಾರಿಗೂ ತಿಳಿದುಬಂದಿರುವದಿಲ್ಲ ಅವನು ನಮ್ಮಲ್ಲಿ ವ್ಯಾಘ್ರದಂತನೆಂಬ ಹೆಸರಿಂದ ಇರುತ್ತಿದ್ದನಂತೆ. ಅವನು ತನ್ನ ಹೆಸರಿನಂತೆ ನಿಜವಾಗಿ ವ್ಯಾಘ್ರದೋಪಾದಿಯುಳ್ಳ ಕ್ರೂರನೂ ಪರಹಿಂಸೆ ಮಾಡುವವನೂ, ದುಷ್ಟನೂ, ದೂರಾಚಾರಿಯೂ ಆಗಿದ್ದನು ಅವನಿಂದಲೇ ರಾಜ್ಯಕ್ಕೆ ಈ ದುರವಸ್ಥೆಯು ಬಂದಿತು''

ಮುದುಕ— ರಾಜಪುತ್ರ ನನ್ನಕಿವಿಯವರೆಗೂ ಈಸುದ್ದಿಯು ಕೇಳಬಂದಿದೆ ಮುಂದೇನಾಯಿತು.

ರಾಜಪುತ್ರ— ಅವನು ಬರುತ್ತಲೆ ನಮ್ಮ ಸೈನ್ಯದಲ್ಲಿ ಚಾಕರಿಗೆನಿಂತನು, ತನ್ನ ಕಾರ್ಯದಿಂದಲೂ ಮೃದು ನುಡಿಗಳಿಂದಲೂ ತುಸು ದಿವಸಗಳಲ್ಲಿಯೇ ಅರಸರಿಗೆ ಅತ್ಯಂತ ನಂಬಿಕೆಯ ಸರದಾರನಾದನು. ಆವನು

ತನ್ನ ವಿಷಪೂರಿತ ಬಾಷಣಗಳಿಂದ ವೀರಸೇನ ಅಮಾತ್ಯರು ಪ್ರತಿಸ್ಪರ್ದಿಗಳನ್ನು ಕೂಡಿರುವರೆಂಬ ದುರಾರೋಪಣೆಯನ್ನು ಮಾಡಿದನು. ಇದಲ್ಲದೆ ತನ್ನಂತೆ ಮಾತನಾಡುವ ರಾಯರಿಗೆ ಬೇಕಾಗಿರುವ ಮೂವರು ನಾಲ್ವರು ಮುಖ್ಯ ಮುಖ್ಯ ಸರದಾರರಿಂದಲೂ ಸಹ ಅಮಾತ್ಯರಿಗೆ ಕಟುವಚನಗಳನ್ನಾಡಿಸಿದನು.

"ಅರಸರಿಗೆ ಅರಬುದ್ಧಿ" ಎಂಬಂತೆ ಕೇಳುವದೇನು? ಮರುದಿನವೇ ಅಮಾತ್ಯವರರ ಮನೆಮಾರು ದನಕರು ಒಸ್ತ ಒಡಿವೆ ಜಾಹಗೀರು ಮೊದಲಾದವುಗಳು ಕಸಿದು ಕೊಳ್ಳಲ್ಪಟ್ಟವು. ಅಮಾತ್ಯಪದದಿಂದ ಕೆಳಗೆ ದೂಡಲಾಯಿತು. ಇಂತಿಷ್ಟು ಸಾಲವೆ ರಾಜದ್ರೋಹಿ ಇರುವನೆಂಬ ಆರೋಪಹೊರಸಿ ಗಡಿಪಾರು ಮಾಡಬೇಕೆಂಬದಾಗಿ ಕಟ್ಟಪ್ಪಣೆಯು ಕೊಡಲ್ಪಟ್ಟಿತು. ಈ ಎಲ್ಲ ಅನಾಹುತ ಆಗುವವನೊಳಗಾಗಿಯೇ ಅಮಾತ್ಯರು ಹೇಳಹೆಸರಿಲ್ಲದೆ ಎಲ್ಲಿಯೋ ಹೋಗಿಬಿಟ್ಟಿದ್ದರು. ಅವರ ಅಲ್ಪವಯಿ ಬಾಲಿಯೊರ್ವಳು ರಾಯರ ಕೈಯಲ್ಲಿ ಸಿಕ್ಕಿದ್ದಳು. ಮುಂದೆ ತುಸುದಿವಸಗಳಲ್ಲಿಯೇ ಅಮಾತ್ಯರ ಶೂರ ಮುತ್ಸದ್ದಿ ಸ್ನೇಹಿತನೋರ್ವನು ಬಾಲೆಯು ಬಂಧವಿಮೋಚನೆಮಾಡಿ ತನ್ನಕೂಡ ಬಾಲೆಯನ್ನು ತೆಗೆದುಕೊಂಡು ನಡೆದನು. ಇದುವರೆಗೆ ಚಿಕ್ಕ ಆ ಮಾತೃಹೀನ ಬಾಲೆಯ ಶೋಧವೂ ಇಲ್ಲದಂತಾಗಿದೆ ಇದನ್ನೆಲ್ಲ ಕೆಳುತಿದ್ದ ಆನವತರುಣಿಯು ತನ್ನ ಮಧುರ ವಾಣಿಯಿಂದ "ತಮ್ಮ ಪೂರ್ವಜರ ವೃತ್ತಾಂತವು ಬಹು ಹೃದಯಂಗಮವಾಗಿಯೂ ಆಶ್ಚರ್ಯ ಕರವಾಗಿಯೂ, ಕರುಣಾಜನಕ ವಾಗಿಯೂ, ಇರುವದೆಂದು ಮಂದಸ್ಮಿತದಿಂದ ತಲೆಕೆಳಗೆಮಾಡಿ ನುಡಿದಳು.

ಇಷ್ಟು ಹೊತ್ತಿನವರೆಗೆ ಆ ತರುಣಿಯಕಡೆಗೆ ರಣರಸಿಕನ ಲಕ್ಷ್ಯವು ಇದ್ದಿಲ್ಲ. ನೋಡುತಲೆ ಅವಳನ್ನುದ್ದೇಶಿಸಿ ರಾಜಪುತ್ರನು "ನಿಮಗೆ ಮನೋರಂಜಕವಾಗಿ ಕಾಣಬಹುದು, ಆದರೆ ನಮ್ಮ ವಂಶಕ್ಕೆ ಕಲಂಕವನ್ನು ಹಚ್ಚಿ ನಮ್ಮ ಮಾನ ಹಾನಿಮಾಡಿ ಬಿಟ್ಟದುದರಿಂದ, ತಲೆಎತ್ತಿ ನಡೆಯಲುಸಹ ನಮಗೆ ಬಾರದಂತಾಗಿದೆ, ಮುದುಕನು ಖತಿಗೊಂಡು ಉಸುರ್ಗರೆದು "ಇರಲಿ ರಾಜಪುತ್ರ ಮುಂದೆ ವರ್ತಿಸಿದ ಸಂಗತಿಯನ್ನು ಹೇಳಿರಿ"

ರಣರಸಿಕನು ನೆಲವನ್ನು ನೋಡುತ್ತ— ಮುಂದಣ ಸಂಗತಿಯು ಮೊದಲು ಹೇಳಿದ ವಿಷಯಕ್ಕಿಂತಲೂ ಹೆಚ್ಚು ಹಾಸ್ಯಾಸ್ಪದವಾಗಿಯೂ ಲಜ್ಜಾಸ್ಪದವಾಗಿಯೂ ಇರುವದು. ವೀರಸೇನ ಅಮಾತ್ಯರು ಹೋದಮೇಲೆ ಮತ್ತೂ ಮೂವರು ನಾಲ್ವರು ಹೋದ ಅಮಾತ್ಯರ ಮಾರ್ಗವನ್ನೇ ಅವಲಂಬಿಸಿದರು. ಆದುದರಿಂದ ಅರಸರು ತುಸು ಅಪ್ರೀಯವಾಗಿಯೇ ಕಾಣಹತ್ತಿದರು ಶೂರ, ವೀರ, ಮುತ್ಸದ್ದಿ ತರುಣ ವೃದ್ಧ ಪುರುಷರು ಮೆಲ್ಲಗೆ ರಾಜಧಾನಿಗೆ ಶರಣು ಹೊಡೆಯ ಹತ್ತಿದರು. ಇವರ ದುರ್ಬಲತೆಯನ್ನು ನೋಡಿ, ಮೊದಲಿನಿಂದ ಹೊಂಚುಹಾಕಿ ಕುಳಿತಿದ್ದ ಆ ಮಾಂಡಲೀಕ ಅರಸನು ಇವರ ರಾಜ್ಯದಮೇಲೆ ದೊಡ್ಡಸೈನ್ಯದೊಂದಿಗೆ ದಾಳೀಮಾಡಿದನು.

ಮುದುಕ— ಕುಬ್ಜ ಅರಸರ ಪತನವು ಅಲ್ಲಿಯೇ ಆಗಿರಬಹುದು.

ರಸಿಕ— ಇಲ್ಲ, ಮೊದಲನೇಸಾರೆ ವೀರಾವೇಶದಿಂದ ಕಾದಿ ಶತ್ರುಸೈನ್ಯವನ್ನು ಹಿಂದಕ್ಕಟ್ಟಿದರು. ಆದರೆ ಎರಡನೆಯ ಸಾರೆಮಾತ್ರ ಅವರ ಬಲಾಢ್ಯ ಸೈನ್ಯದೆದುರಾಗಿ ನಿಲ್ಲವದು ಇವರಿಂದ ಆಗಲಿಲ್ಲ. ಅವರು ನಮ್ಮ ಮುಖ್ಯ ಮುಖ್ಯ ದುರ್ಗಗಳನ್ನು ಎಲ್ಲವನ್ನೂ ಕೈವಶ ಮಾಡಿಕೊಂಡರು. ಪ್ರಶಿದ್ಧ ನಂದೀದುರ್ಗವು ಸಹ ನಮ್ಮ ಕೈಬಿಟ್ಟುಹೋಯಿತು. ಇದನ್ನೆಲ್ಲ ಕೇಳುತ್ತ ಕುಳಿತಿದ್ದ ಮುದುಕನಲ್ಲಿ ವೀರಾವೇಶದ ಗಾಳಿಯು ಸಂಚರಿಸಿದಂತಾಗಿ ಅವನ ಬೇರಿಳಿದ ಹಲ್ಲುಗಳು ಒಮ್ಮಿಂದೊಮ್ಮೆ ಕೆಳದುಟಿಯನ್ನು ಕಚ್ಚಿದವು ಅವನ ಕಣ್ಣುಗಳು ಗುಲಗುಂಜಿಯಂತೆ ಕೆಂಪಾದವು. ಬಂದ ಸಿಟ್ಟನ್ನು ಹೊರಗೆ ತೋರಗೊಡದೆ ಕಿಂಚಿತ್ ಸಮಾಧಾನಹೊಂದಿ ಮುದುಕನು ಇಂಥಸಮಯದಲ್ಲಿ ವ್ಯಾಘ್ರದಂತನು ಏನುಮಾಡುತ್ತಿದ್ದನು. ಆವೀರನಿಂದ ಸಹಾಯ ತೆಗದು ಕೊಳ್ಳಬಹುದಾಗಿತ್ತು.

ರಸಿಕನು ಮೋರೆ ಸಣ್ಣದುಮಾಡಿ—ಅಯ್ಯೋ! ಅವನಸಹಾಯವೇ? ಮೊದಲನೆಯ ಕಾಳಗದಲ್ಲಿಯೇ ಆಕ್ರೂರ ಕಪಟಿಯು ನಮ್ಮ ಕಡೆಯ ತುಸು ಜನರನ್ನೊಡಕೊಂಡು ಶತ್ರುಪಕ್ಷವನ್ನು ಕೂಡಿಕೊಂಡನು.

ಆಮೇಲೆ ಕುಬ್ಜ ಮಹಾರಾಯರಿಗೆ ಪೂರ್ವದ ಸ್ಮರಣೆಯು ಬಂದಿತು. ಜರುಗಿದ ವಿಷಯವನ್ನು ನೆನಿಸಿಕೊಂಡು ಆಮೇಲೆ ಮಾಡುವದೇನು ? ಕಟ್ಟಕಡೆಗೆ ಅವರಸಂಗಡ ಹೇಳಲಸಹ್ಯವಾದ ಒಪ್ಪಂದವನ್ನು ಮಾಡಿಕೊಂಡು ಅವರ ಮಾಂಡಲೀಕತ್ವವನ್ನು ಸ್ವೀಕರಿಸಿದರು.

ಮುದುಕನು ಹಣೆ ಹಣೆ ಬಡೆದುಕೊಂಡು ವೆಂಗೀಯ ಅರಸರಿಗೆ ಇಂಥ ದುರ್ದೆಶೆಯೇ ? ಎಂದು ನಿಟ್ಟುಸಿರುಬಿಟ್ಟನು.

ರಾಜಪುತ್ರ— ಪರಕೀಯರಿಂದಾದ ಅಪಮಾನವನ್ನು ಅರಸರಿಂದ ಸಹಿಸುವದಾಗಲಿಲ್ಲ. ಅವರು ಭ್ರುವಿಂಷ್ಟ ರಾದಂತಾಗಿ ವೀರಶೇನ ವಿಜಯ ಸಿಂಹ ಎಂದು ಬಾರಿಬಾರಿಗೂ ಅನ್ನುತ್ತ ಮುಂದೆ ತುಸು ದಿವಸಗಳಲ್ಲಿಯೇ ತಮ್ಮ ಇಹಲೋಕದ ಮಹಾಯಾತ್ರೆಯನ್ನು ಮುಗಿಯಿಸಿದರು.

“ ವಿಜಯಸಿಂಹರೆಂಬುವರು ಯಾರಿರಬಹುದು. ” ಎಂದು ಮುದುಕನು ವಿಚಾರಮಾಡುತ್ತ ಆಚ್ಚರಿಗೊಂಡಂತಾಗಿ ಕೇಳಿದನು.

ಕುಮಾರ— ವಿಜಯಸಿಂಹ ರೆನ್ನುವವರೂ ಓರ್ವವಿಶ್ವಾಸಿಕ ಸರದಾರರೇ ಇದ್ದಂತೆ ಅವರೇ ಅಮಾತ್ಯ ವೀರಸೇನರ ಪುತ್ರಿಯ ಬಂಧ ವಿಮೋಚನೆಮಾಡಿ ತಂದೆ ಇದ್ದೆಡೆಗೆ ಕರೆದುಕೊಂಡು ಹೋದರಂತೆ.

“ ಕುಮಾರ! ಆಹೃದಯ ವಿದೀರ್ಣ ಸುದ್ದಿಯನ್ನು ನಿಲ್ಲಿಸಿರಿ ನನ್ನಿಂದ ಕೇಳದಾಗದು. ಮುಂದೆ ಆವಕಾರ್ಯ ಕೈಕೊಳ್ಳಬೇಕೆಂಬ ಇಚ್ಛೆ ಇರುವದು. ” ಎಂದು ಮುದುಕನ ಬಲಭಾಗದಲ್ಲಿ ಕುಳಿತಿದ್ದ ತರುಣಿಯು ಅಲ್ಲಡತನದಿಂದ ನುಡಿದಳು.

ರಣರಸಿಕ— ಅಮಾತ್ಯವರರನ್ನು ಹಡುಕಿ ಪಿತ್ರುವರ್ಯ ಕುಬ್ಜಮಹಾರಾಯರ ಅಕ್ಷಮ್ಯತಪ್ಪಿನ ಕ್ಷಮೆಬೇಡುವದು ಮೊದಲನೆಯ ಕೆಲಸ. ಎರಡನೆಯದೆಂದರೆ ವೆಂಗೀಯವರ ಕೈಯೊಳಗಿಂದನ ಸುಳಿಹೋದ ರಾಜ್ಯವನ್ನು ತಿರುಗಿ ತೆಗೆದುಕೊಳ್ಳುವದು.

ತರುಣಿ— ರಾಜಪುತ್ರರೇ! ಚಾಲುಕ್ಯ ವಂಶದಲ್ಲಿ ಹುಟ್ಟಿದುದಕ್ಕು ಸಾರ್ಥಕವು ನಿಮ್ಮಪ್ರತಿಜ್ಞೆಯು ನಿಜವಾಗಿ ನಿಮ್ಮ ವಂಶಕ್ಕೆ ಭೂಷಣಾಸ್ಪದವಾಗಿದೆ. ನೀವು ಕೈಕೊಂಡ ಈ ಕಾರ್ಯವು ಕ್ಷಿಪ್ರದಲ್ಲಿಯೇ ಕೈಗೂಡಲೆಂದು ಆ ದಯಾಘನನಲ್ಲಿ ನನ್ನ ಪ್ರಬಲವಾದಕೋರಿಕೆ. ನಿಮ್ಮ ಹಿಡಿದ ಈ ಕಾರ್ಯದಲ್ಲಿ ನಾವೂ ತನುಮನ ಧನಗಳಿಂದ ಸಹಾಯಮಾಡಲು ಸಹ ಸಿದ್ಧರಿರುವೆವು. ತರುಣಿಯು ತನ್ನಮುಖವನ್ನು ಬೇರೆಕಡೆಗೆತಿರುವಿ ಕಿಂಚಿತ್ ಹಾಸ್ಯದಿಂದ— ಕುಮಾರರೇ! ತಮ್ಮವಿವಾಹವು ಆಗಿರಬಹುದಲ್ಲವೇ?

ರಣರಸಿಕ— ಇಲ್ಲ! ಹಿಡಿದ ಕೆಲಸವನ್ನು ಪೂರ್ಣಮಾಡುವವರೆಗೆ ಗೃಹಸ್ಥಾಶ್ರಮಿ ಯಾಗುವದಿಲ್ಲೆಂಬದಾಗಿ ಪ್ರಭುವಿನೆದುರಿಗೆ ಪ್ರತಿಜ್ಞೆ ಮಾಡಿರುವೆನು.

ಇಷ್ಟುಹೊತ್ತಿನವರೆಗೆ ಸಾವಧಾನಚಿತ್ತದಿಂದ ಕೇಳುತ್ತ ಕುಳಿತಿದ್ದ ಮುದುಕನು ಒಮ್ಮಿಂದೊಮ್ಮೆ ಗಂಭೀರಮುದ್ರೆಯನ್ನುತಾಳಿ ‹ಧನ್ಯವಾದ! ಕ್ಷಾತ್ರವೀರನೇ ಧನ್ಯವಾದ !! ನನಗೆ ನಿಮ್ಮತಂದೆಯವರ ಗುರುತುಇತ್ತು

ಇರಲಿ ನನ್ನ ವೃತ್ತಾಂತವನ್ನು ಕೇಳುವಇಚ್ಛೆ ನಿನಗೂ ಇದ್ದಪಕ್ಷದಲ್ಲಿ, ಈಗ ನನ್ನಮನಸ್ಸು ಒಂದೆಡೆಯಲ್ಲಿ ಇಲ್ಲದುದರಿಂದ ಹೇಳಲು ಬರುವಂತಿಲ್ಲ. ಸಮಯ ದೊರೆತಾಗ್ಗೆ ಸವಿಸ್ತಾರ ಹೇಳುವೆನು. ಹೊತ್ತು ಬಹಳಾಗಿದೆ, ನಿಮ್ಮ ಊಟ ಉಡಿಗೆಗಳನ್ನು ತೀರಿಸಿಕೊಳ್ಳಿರಿ ಎಂದು ಹೇಳಿ ಒತ್ತರದಿಂದ ಹೊರಹೊರಟವನು ಕ್ಷಣಾರ್ಧದಲ್ಲಿ ಕಾಣದಂತಾದನು.

✤ ✤ ✤ ✤ ✤ ✤ ✤

ರಣರಸಿಕನು ಬಹಳಹೊತ್ತಿನವರೆಗೆ ವಿಚಾರಮಾಡುತ್ತ. ಶೂನ್ಯದೃಷ್ಟಿಯಿಂದ ನೆಲವನ್ನು ನೋಡುತ್ತ ಕುಳಿತುಕೊಂಡಿದ್ದನು. ಆಷ್ಟುಹೊತ್ತಿನವರೆಗೆ ಅವನಿಗೆ ತಾನು ಎಲ್ಲಿರುವನೆಂಬ ಅರವೇ ಇದ್ದಿಲ್ಲ. ಹೊತ್ತು ಬಹಳಾಗಿದೆ ಊಟದ ಲಕ್ಷ್ಯವಿಲ್ಲದೆ ಹಾಗೆಯೇ ಕುಳಿತಿರುವಿರಲ್ಲ. ‹‹ ಎಂದು ಯಾರೋ ಕೇಳುವ ಸುಂದರವಾದ ಮಂಜುಲವಾಣಿಯು ಸಮೀಪದಲ್ಲಿಯೇ ಕೇ

ಳಬಂದಿತು, ಅವನು ಎಚ್ಚತ್ತು ನೋಡುತಲೆ ಮೊದಲು ಕಾಣಿಸಿಕೊಂಡ ಆ ನವಯೌವನ ಹರಿಣಾಕ್ಷಿಯು ಅವನ ಹಿಂದೆಯೇ ತುಸುದೂರದಲ್ಲಿನಿಂತಿರುವದು ಕಂಡುಬಂದಿತು. ಊಟದ ಹೊತ್ತಾಗಿರುವದೆಂದು ಪುನಃ ಅವಳು ನಸು ನಗುತ್ತ ವಿನಯದಿಂದ ಸೂಚಿಸಿದಳು.

ರಣರಸಿಕ— ಇಷ್ಟುಹೊತ್ತಿನವರೆಗೆ ಇಲ್ಲಿಯೆಕುಳಿತಿದ್ದ ಆ ವೃದ್ಧಪುರುಷನು ಕಂಡುಬರುವದಿಲ್ಲವಲ್ಲ ! ಎಂದು ಅವಳಕಡೆಗೆ ನೋಡಿ ದಿರುವಿ ವಿಚಾರಿಸುತ್ತ ಕೇಳಿದನು.

ತರುಣಿ— ಅವರು ಸಂಜೆಯುವರೆಗೆ ಬರುವದಿಲ್ಲ. ಮುನಸ್ಸಿಗೆ ವಿಶೇಷ ತ್ರಾಸ ವಾಗುತಲೆ ಅವರಿಗೆ ಹುಚ್ಚುಹಿಡಿದಂತಾಗಿ ಹೇಳಕೇಳದೆ ಮನಬಂದೆಡೆಗೆ ಹೋಗುವರು, ಪುನಃ ಶಾಂತಿ ಸಿಗುವವರೆಗೆ ಇತ್ತಕಡೆಗೆಬರುವದಿಲ್ಲ

ರಣರಸಿಕ— ಇತ್ತನೋಡಿರಿ! ಕೋಪಿಸಕೂಡದು, ವಿಶೇಷ ಮನಸ್ತಾಪ ವಾಗುತಲೆ ನನ್ನಸ್ಥಿತಿ ಯಾದರೂ ಹೀಗೆಯೇ ಆಗುತ್ತದೆ. ಈಗ ನನ್ನ ಮನಸ್ಸಾದರೂ ನನ್ನ ಸ್ವಾಧೀನದಲ್ಲಿ ಇಲ್ಲದಂತಾಗಿದೆ ಇಂಥ ಪರಿಸ್ಥಿತಿಯಲ್ಲಿ ನನಗೆ ಅನ್ನ ನೀರು ಯಾವೂ ರುಚಿಸವು

ರಣರಸಿಕನ ಅಸ್ಫುಟಸ್ವರವನ್ನು ಕೇಳಿಸ ಲಜ್ಜವದನದಿಂದ ಆಬಾಲಿಕೆಯು "ಇದೇನು ? ಕುಮಾರರು ಹುಲ್ಲುಗುಡಿಸ ಲೊಳಗಣ ಬಡವರ ಆದರಾತಿಥ್ಯವನ್ನು ಕೈಕೊಳ್ಳಬಾರದೆನ್ನುವದು ? ತಾವು ನಮ್ಮಂಥವರಡೆಗೆ ಬರುವದೇ ಅಪರೂಪ. ನಮ್ಮ ಸುದೈವದಿಂದ ದೈವವಶಾತ್ ಬಂದಿದ್ದು, ಊಟಮಾಡದೆ ಹಾಗೆಯೇ ಉಪವಾಸವಿರುವದು ನಮ್ಮಿಂದೆಂದಿಗೂ ನೋಡುವದಾಗುವದಿಲ್ಲ. " ಎಂದಳು.

ರಣರಸಿಕನು ದೀನಸ್ವರದಿಂದ—ನೀವು ಮನಸ್ಸಿನಲ್ಲಿ ಎಂದಿಗೂ ವಿಕಲ್ಪ ಯೋಚಿಸಕೂಡದು. ನಾನು ನಿಮ್ಮೀರ್ವರಲ್ಲಿ ಓರ್ವನಿದ್ದೇನೆ. ಇತ್ತನೋಡಿರಿ! ನಿಜವಾಗಿ ನಾನೋರ್ವ ವನಚರ ನಿರುವೆನು. ನನಗೆ ಉಣ್ಣ ತಿನ್ನುವ ಇಚ್ಛೆಯೇ ಇಲ್ಲ. ಊಟ ಉಡಿಗೆಯ ಸಲುವಾಗಿ ವಿಶೇಷ ಆಗ್ರಹವನ್ನು ತಾಳಕೂಡದು.

ತರುಣಿ— “ ತಮಗೆ ಮಿತಿ ಮೀರಿದ ಮನಸ್ತಾಪ ವಾಗಿರಬಹುದಾಗಿ ಕಾಣುತ್ತದೆ, ಇಲ್ಲಿಂದ ಸಮೀಪದಲ್ಲಿಯೇ ಈಶ್ವರ ದೇವಾಲಯವಿರುವದು. ಅಲ್ಲಿಗೆ ಹೋದರೆ ತಮ್ಮ ಮನಸ್ಸಿಗೆ ಶಾಂತಿ ಸಿಕ್ಕರೂ ಸಿಗಬಹುದಾಗಿ ತೋರುತ್ತದೆ ” ಎಂದು ನಮ್ರತೆಯಿಂದ ಆಪ್ತಾಲೋಚನೆಯ ವಿಷಯವಾಗಿ ಮಾತಾಡಿದಳು.

ರಸಿಕ— ನಡೆಯಿರಿ, ಅವಶ್ಯವಾಗಿ ನಡೆಯಿರಿ, ನನ್ನನ್ನು ಯಾವ ಸ್ಥಳಕ್ಕೆ ಕರೆದೊಯಿದರೂ ಚಿಂತೆಇಲ್ಲ. ನನ್ನ ತಂದೆಯವರ ಕಡೆಯ ಕೋರಿಕೆಗಳಿಷ್ಟು ಕೈಗೂಡಿದರೆ ತೀರಿತು. ಬಾಲಕೆಯು ಯಾವಮಾತನ್ನು ಆಡಲಿಲ್ಲ. ಅವಳು ಗುಡಿಸಲ ತೀರ ಒಳಗಣಭಾಗದಲ್ಲ ಹೋಗಿ ಬಿಲ್ಲು ಬತ್ತಳಿಕೆ ಢಾಲು ಮುಂತಾದ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಪರ್ಣಕುಟೀರದ ತಲೆಬಾಗಿಲಲ್ಲಿ ಬಂದು ನಿಂತುಕೊಂಡಳು. ಇಷ್ಟರಲ್ಲಿ ರಣರಸಿಕನು, ತಲೆಬಾಗಿಲವರೆಗೆ ಬಂದು ಬಾಲಕಿಯನ್ನುದ್ದೇಶಿಸಿ “ ನಾನು ಒಳಗಣ ನನ್ನ ಖಡ್ಗ ಬರ್ಚಿಗಳನ್ನು ತರಲು ಮರೆತನು ” ಸಸುನಗುತ್ತ “ ನಿಮ್ಮಕೈಯಲ್ಲೇಕೆ? ಈ ತೀಕ್ಷ್ಣವಾದ ಅಸ್ತ್ರಗಳು.

ತರುಣಿ— ನಾನು ಶಸ್ತ್ರಾಸ್ತ್ರವಿಲ್ಲದೆ ಎಂದೂ ಹೊರಗೆ ಹೊರಡುವದಿಲ್ಲ; ಏಕಂದರೆ ನಾವಿರುವ ಈ ಪ್ರದೇಶವು ಬಹು ಭೀಕರವಾಗಿರುವದು. ಹುಲಿ, ಕರಡಿ, ಚಿರ್ಚ, ಮೊದಲಾದ ಹಿಂಸ್ರ ಪಶುಗಳು ಬೇಕಾದಹಾಗೆ ಬೇಕಾದತ್ತ ಹಗಲುಸಹ ಆಡ್ಡಾಡುವವು. ಇಡಲ್ಲದೆ—

ರಣರಸಿಕ— ನಿಮ್ಮ ಕೂಡ ನಾನಿರುವಕಾಲಕ್ಕೆ ಶಸ್ತ್ರಾಸ್ತ್ರವೇತಕ್ಕೆ ? ಇರಲಿ, ಮನಸ್ಸಿನ ವಿರುದ್ಧಹೋಗುವದೂ ವಿಹಿತವಲ್ಲ. ನಿಮಗೆ ಶಸ್ತ್ರಾಸ್ತ್ರ ಕಲೆಯು ಪೂರ್ಣ ಅವಗತ ವಿದ್ಧಂತೆ ತೋರುತ್ತದೆ. ಈ ಹೊತ್ತು ಮುಂಜಾನೆ ಹುಲಿಗೆ ನೀವೇಬಾಣವನ್ನು ಗುರಿಇಟ್ಟಿದುದಾಗಿ ಕಾಣುತ್ತದೆ. ರಣರಸಿಕನ ಪ್ರಶಂಸೋದ್ಗಾರ ಭಾಷಣಗಳಿಂದ ಆತರುಣಿಗೆ ನಾಚಿಕೆ ಬಂದಂತಾಯಿತು. ಅವಳಮುಖವು ಕೆಂಪೇರಿತು. ಲಜ್ಜೆಯು ಸಂಪೂರ್ಣ ಆವರಿಸಿದ್ದರಿಂದ ಆವಳುತಲೆ ಅಲ್ಲಾಡಿಸಿ ಹೋಕಾರಾರ್ಥ ಉತ್ತರವನ್ನಷ್ಟೇಕೊಟ್ಟಳು.

ರಣರಸಿಕ— ನೀವು ಹೇಳಿದಸ್ಥಳವು ಇಲ್ಲಿಂದ ಎಷ್ಟುದೂರದ ಮೇಲಿರುವದು? ತರುಣಿಯು ಅಂಗುಲಿನಿರ್ದೇಶಮಾಡಿ ಎದುರಿಗೆಕಾಣುವ ಭವ್ಯಗಿಡಗಳಗುಂಪೇ ಆಸ್ಥಳವು. ಅಷ್ಟೇನು ದೂರಿಲ್ಲ. ಇಲ್ಲಿಯೇ ಸಮೀಪದಲ್ಲಿ ಸ್ವಚ್ಛವಾದ ಸ್ಫಟಿಕದಂತಿರುವ ನದಿಯ ಪ್ರವಾಹ ವಿರುವದು. ದೇವಾಲಯವು ಬಹಳ ಪುರಾತನದ್ದಿದ್ದು, ಬಹು ಭವ್ಯವಾಗಿರುವದು. ಸ್ಥಳವು ರಮಣೀಯ ವಾಗಿದ್ದು, ಪ್ರೇಕ್ಷಣೀಯ ವಾಗಿರುವದು. ಆಸ್ಥಳವು ನಿಜವಾಗಿ ಕುಮಾರರ ಚಿತ್ತಾಕರ್ಷಣಮಾಡುವದು

ರಣರಸಿಕ— ನೋಡುವಾ! ನಿಮ್ಮ ಕಡೆಯಿಂದ ದೊರಕುವ ಆದರಾತಿಥ್ಯದಿಂದ ನನಗೆ ಅತ್ಯಂತ ಆನಂದವಾಗಿದೆ. ಅರಮನೆಗಿಂತಲೂ ನನಗೆ ಇಲ್ಲಿಯೇ ಹೆಚ್ಚು ಸಮಾಧಾನ ತೋರುತ್ತದೆ. ಆದರೆ—ಆದರೆ ದೇವಿ! ಅವಳಕಡೆಗೆ ನೋಡುತ್ತ “ ಯಾವಸದ್ ಭಾಗ್ಯನ ಹೊಟ್ಟೆಯಲ್ಲಿ ಈ ಕನ್ಯಾರೂಪದಿಂದ ಜನ್ಮವೆತ್ತಿರುವಿರಿ? ಜನ್ಮಕೊಟ್ಟಿರುವ ಮಾತಾ ಪಿತೃಗಳು ಧನ್ಯರು ! ನಿಜವಾಗಿ ಧನ್ಯರು !! ಇಗಲಿ ನಿಮ್ಮ ಕೂಡ ಇದ್ದ ಆ ತೇಜಸ್ವಿ ವೃದ್ಧರು ಆರಿರುವರು? ” ಈ ಪ್ರಶ್ನವನ್ನು ಕೇಳುತಲೆ, ಅವಳ ಮೋರೆಯ ಮೇಲಣ ಪಸನ್ನತೆಯು ಇಲ್ಲದಂತಾಗಿ ಅದರ ಸ್ಥಳದಲ್ಲಿ ತುಸುಖಿನ್ನತೆಯು ಕಾಣಹತ್ತಿತು. ಅವಳು ಕಿಂಚಿತ್ ಕಂಪಿತ ಸ್ವರದಿಂದ “ರಾಜಪುತ್ರರೇ ! ಈ ಬಾಲಿಕೆಯನ್ನು ಕ್ಷಮಿಸಬೇಕು. ತಾವು ವಿಚಾರಿಸಿದ ಮಾತುಗಳಿಗೆ ನನಗೆ ಉತ್ತರಕೊಡಲು ಬರುವಂತಿಲ್ಲ; ಆದರೆ ನಾನೋರ್ವ ಮಾತೃಹೀನಕ್ಷತ್ರಿಯ ಕುಲೋತ್ಪನ್ನ ಬಾಲಿಕೆಯಿದ್ದು ಚಿಕ್ಕಂದಿನಿಂದ ವನವಾಸಿಯಾಗಿದ್ದೇನೆ. “ ದಯಾರ್ದ್ರದೃಷ್ಟಿಯಿಂದ ರಣರಸಿಕನು “ ಛೆ! ನಿಮಗೆ ಸುಮ್ಮನೆ ತ್ರಾಸಕೊಡುವದು ತರವಲ್ಲ, ಹೆಸರು ಹೇಳಲು ಬರುವಂತಿದ್ದರೆ, ಕೇಳಲು ಉತ್ಸುಕತೆಯುಳ್ಳವ ನಾಗಿದ್ದೇನೆ”

ತರುಣಿ— ಹೆಸರಿನ ಸಲುವಾಗಿ ಇಷ್ಟೊಂದು ವಿಜ್ಞಾಪನೆಯೇ ? ಅಗತ್ಯವಾಗಿ ಹೇಳುತ್ತೇನೆ. ನನಗೆ ಮಾಲತಿ ಎಂದು ಕರೆಯುವರು.

ರಸಿಕ— ನಿಜವಾಗಿ ಹೆಸರು ಒಪ್ಪುವಂತಿದೆ; ಆದುದರಿಂದಲೇ ನೀವು ಮುಂದಡೆ ಇಡುವ ಮೊದಲೇ ಸುವಾಸನೆಯು ನಿಮ್ಮ ಹೆಸರಿನ ಅಭಿ

ಪ್ರಾಯವನ್ನು ಸೂಚಿಸುತ್ತದೆ" ರಣರಸಿಕನನ್ನು ತನ್ನ ವಿಷಯದ ಮಾತಿನಿಂದ ಬೇರೆಕಡೆಗೆ ಒಯ್ಯಬೇಕೆನ್ನುತ್ತ ಮಾಲತಿಯು "ರಾಜಕುಮಾರ ಇತ್ತನೋಡಿರಿ ! ಎದುರಿಗೆ ಕಾಣುವ ಈಶ್ವರಾಲಯವು ಎಷ್ಟುಮನೋಹರವಾಗಿ ಕಾಣುತ್ತದೆ. ಇಲ್ಲಿನೋಡಿರಿ! ಸ್ಫಟಿಕ ಸದೃಶ ನೀರಿನಪ್ರವಾಹವನ್ನು ಸುಗಂಧವನ್ನು ಬೀರುವ ಆ ಚಿತ್ರ ವಿಚಿತ್ರ ಹೂಗಳನ್ನು ನೋಡಿರಿ. ರತ್ನಗಂಬಳಿಯೊಳಗಣ ಹೂವಿನಂತೆ ಒಂದೇಸಮನಾಗಿ ಹೇಗೆ ಸುಂದರವಾಗಿ ಕಾಣುತ್ತವೆ." ಒಳ್ಳೇ ಉತ್ಸಾಹದಿಂದ ರಣರಸಿಕನು "ಅಲಲ! ರಮಣೀಯ ಉದ್ಯಾನವನವಿದು. ದೇವಿ ! ಸ್ನಾನಮಾಡಿ ದೇವಪೂಜಾದಿಗಳನ್ನು ಮಾಡಿಕೊಂಡು ತಾಸೆರಡು ತಾಸು ನನಗೆ ಇಲ್ಲಿಯೇ ಕುಳಿತು ಕೊಳ್ಳಬೇಕೆನಿಸುತ್ತದೆ." ಮಾಲತಿಯು "ಕುಮಾರರು, ತಮ್ಮ ಅಪೇಕ್ಷೆಯ ಮೇರೆಗೆ ನಡೆಯ ಬಹುದು" ಎಂದು ಮಂಜುಳಸ್ವರದಿಂದ ನುಡಿದಳು.

ರಣರಸಿಕನು ಸ್ವಚ್ಛವಾದ ನೀರಿನಪ್ರವಾಹದಲ್ಲಿ ಯಥೇಚ್ಛ ಸ್ನಾನಮಾಡಿ ದಂಡೆಯ ಮೇಲಿದ್ದ ಬಿಲ್ವವೃಕ್ಷಕ್ಕೆಹೋಗಿ, ಬಿಲ್ವಪತ್ರಗಳನ್ನು ತೆಗೆದುಕೊಂಡು ದೇವಾಲಯಕ್ಕೆಹೋಗಿ, ಗರ್ಭಾಗಾರದಲ್ಲಿದ್ದ ಸಿವಲಿಂಗಕ್ಕೆ ಬಿಲ್ವಪತ್ರಗಳನ್ನೇರಿಸಿ, ದೇವರೆದುರಿಗೆ ಪದ್ಮಾಸನಹಾಕಿ ಧ್ಯಾನಮಾಡುತ್ತ ಕುಳಿತುಕೊಂಡನು. ಆನಿರ್ಜನ ಪ್ರದೇಶದಲ್ಲಿಯ ನಿಸರ್ಗದ ರಮ್ಯತೆಯಿಂದ ಅವನ ಮನಸ್ಸಿಗೆ ಒಂದುಪ್ರಕಾರದ ಆನಂದವಾದಂತಾಗಿ, ದೇಹಭಾನವಿಲ್ಲದೆ ಅನಿಮಿಷಲೋಚನನಾಗಿ ಆ ಕರುಣಾಕರ ಸಿವಲಿಂಗವನ್ನು ನೋಡುತ್ತ ಕುಳಿತುಕೊಂಡನು. ಅವನಿಗೆ ಹೊತ್ತಾದ ಅರಿವೇ ಆಗಲಿಲ್ಲ. "ಪ್ರಾರ್ಥನೆಯು ಇನ್ನೂ ಮುಗಿದಿರಲಿಲ್ಲವೇ? " ಎಂದು ಯಾರೋ ಒಮ್ಮಿಂದೊಮ್ಮೆ ವಿಚಾರಿಸಿದಂತಾಗಲು ಹಿಂದಿರುಗಿ ನೋಡಿದನು

ನಸುನಗುತ ಮಾಲತಿಯು ಆವನ ಬೆನ್ನುಹಿಂದೆಯೇ ನಿಂತಿದ್ದಳು

"ರಾಜಪುತ್ರರೇ ! ಇಷ್ಟುಹೊತ್ತಿನವರೆಗೆ ಯಾವಪ್ರಾರ್ಥನೆಯನ್ನು ಮಾಡಿದಿರಿ ದೇವನಲ್ಲಿ? ಯಾವವಿಷಯದ ಸಲುವಾಗಿ ಆ ದಯಾಪೂರ್ಣನನ್ನು ಬೇಡಿಕೊಂಡಿರಿ? " ಎಂದು ಮುಗುಳುನಗೆ ನಗುತ್ತ ಅವಳು ಅವನನ್ನು ಪುನಃ ವಿಚಾರಿಸಿದಳು.

ರಣರಸಿಕನು ಯಾವ ಉತ್ತರವನ್ನು ಕೊಡಲಿಲ್ಲ. ಮನಸ್ಸಿನಲ್ಲಿಯೇ ನಗುತ್ತ ಗರ್ಭಾಗಾರದಿಂದ ಹೊರಗೆ ಬಂದನು. ಎದುರಿಗೆ ನೋಡುತಲೆ ಅಲ್ಲಿಯೇ ವಿಶಾಲವಾಗಿ ಬೆಳೆದಿದ್ದ ಒಂದು ಭವ್ಯವಟವೃಕ್ಷ ದಡೆಯಲ್ಲಿ, ಕಸ ತೆಗೆದು ಸ್ವಚ್ಛವಾಡಿ ನಾನಾಪ್ರಕಾರದ ಹಣ್ಣು ಹಂಪಲಗಳನ್ನು ಒರಣವಾಗಿ ಅಡಿವಿಯ ಎಲಿಯುಮೇಲೆ ಇಟ್ಟದ್ದು ಕಂಡುಬಂದಿತು. ಇಷ್ಟರಲ್ಲಿ ಮಾಲತಿಯು ಅವನ ಹಿಂದೆಯೇ ಹೊರಗೆಬಂದು ‹‹ ಕುಮಾರ ನಡೆಯಿರಿ. ಅಲ್ಲಿರುವ ಹಣ್ಣು ಹಂಪಲಗಳನ್ನು ಸೇವಿಸಿದ ನಂತರ ಮನೆಗೆ ಹೋಗೋಣ ” ಎಂದಳು. ಉಲ್ಹಾಸಿತ ವೃತ್ತಿಯಿಂದ ರಸಿಕನು - ಎಲ! ಇದೇನು? ನನ್ನಲ್ಲಿ ಎಳ್ಳಷ್ಟಾದರೂ ಮನಸ್ತಾಪ ವಿಲ್ಲದಂತಾಗಿ ಪೂರ್ಣ ವಿಶ್ರಾಂತಿ ಸಿಕ್ಕಂತಾಗಿದೆ. ನಡೆಯಿರಿ ನೀವಾದರೂ ಹಸಿದಿರಬಹುದು. ನಾವಿಬ್ಬರೂ ಕೂಡೆಯೇ ಫಲಾಹಾರವನ್ನು ಮಾಡೋಣ. ನಿಜವಾಗಿ ಈ ಅರಣ್ಯವನ್ನು ಈಹೊತ್ತು ಅರಮನೆಯು ಸಹ ಸರಿಗಟ್ಟಲಾರದು.

ಮಾಲತಿಯು ತಾವರೆಯ ಪಕಳೆಗಳಂತೆ ಮೃದುವಾದ ತನ್ನಕೋವಲವಾದ ಕೈಗಳಿಂದ, ಹಣ್ಣುಗಳನ್ನು ತನ್ನ ತೀಕ್ಷ್ಣವಾದ ಅಲಗಿನಿಂದ ಹೆಚ್ಚಿ ಇಡುತ್ತ ‹‹ ಕುಮಾರರೇ! ಉದ್ವಿಗ್ನತೆಯು ಪೂರ್ಣಅಳಿದು ತಮ್ಮಮನ ಪ್ರವರ್ತಿಯು ಉಲ್ಹಾಸಿತ ವಾದುದರಿಂದ ನನಗೆ ಬಹಳೇ ಸಂತೋಷವಾಗಿದೆ. ಕೈಲಾಸನಾಥನು ತಮ್ಮನ್ನು ಯಾವಾಗಲೂ ಆನಂದಿತ ವೃತ್ತಿಯಲ್ಲಿಯೇ ಇಡಲಿ. ” ಒಮ್ಮಿಂದೊಮ್ಮೆ ನಿಶ್ಚಯದರ್ಶಕಮೇಲ್ ಸ್ವರದಲ್ಲಿ ರಣರಸಿಕನು ‹‹ ಹೌದು! ಇದಲ್ಲದೆ ನನ್ನ ಪ್ರತಿಜ್ಞೆಯು ಕೊನೆಗಂಡಿತೆಂದರೆ ದೇವಿಯುನ್ನೊಡಗೊಂಡೇರಾಜಧಾನಿಗೆ ತೆರಳುವದು. ಈವನದೇವಿಯ ಹೊರ್ತು, ನನ್ನ ಉಲ್ಹಾಸಿತ ವೃತ್ತಿಯು ಆಬಾಧಿತವಾಗಿರಲಾರದು, ”

ಮಾಲತಿಯು ಅಧೋವದನಳಾಗಿ ಕಂಪಿತ ಸ್ವರದಿಂದ ‹‹ ಇದೇನು! ಅಂದರೆ!! ಅರಸುಮಕ್ಕಳ ಮಾತಿನ ಅರ್ಥವು ಏನಿರುವದು ” ಮೊದಲಿನ ಆವೇಶದಿಂದಲೇ ರಸಿಕನು ‹‹ ಎರಡನೆಯ ದೇನಿರುವದು? ನನ್ನೆದುರಿಗೆ ಅಧೋವದನಳಾಗಿ ಕುಳಿತಿರುವ ಈ ಮಾಲತಿಯು ಹಸ್ತದ ಹೊರ್ತು, ಅನ್ಯ ಯಾವ ರಮಣಿಯರ ಪಾಣಿಗ್ರಹಣವನ್ನೂ ಮಾಡುವದಿಲ್ಲ. ಈ ಮಾತಿಗೆ ಇಲ್ಲಿದ್ದ ಮುಕ್ಕಣ್ಣನೇಸಾಕ್ಷಿಯು ”

ಕೆಳಮೋರೆಯಿಂದಲೇ ಮಾಲತಿಯು, "ಛೀ! ಛೀ!! ರಾಜಕುಮಾರರೇ ಇದೇನು ? ನಾನೋರ್ವ ಅರಣ್ಯವಾಸಿ ನಿಕೃಷ್ಟಾವಸ್ಥೆಯಲ್ಲಿ ಬೆಳೆದಂಥ ವನ ವನ ಸಂಚರಿಸುವಂಥ ಓರ್ವವನಕನ್ಯೆಯು ಅಂದಮೇಲೆ " — ರಸಿಕನು ಅವಳನ್ನು ಮುಂದೆ ಮಾತಾಡಗೊಡದೆ, "ಹೌದು ನಿಜವಾಗಿ ಇಂಥ ನಿರ್ಜನಪ್ರದೇಶವನ್ನು ಕೂಡ ಸುಶೋಭಿತವಮಾಡಿದ ಈ ವನ ಕುಸುಮವು ಅರಮನೆಯನ್ನು ಸುಶೋಭಿತ ಮಾಡದೆ ಇದ್ದೀತೆ?"

ಮಾಲತಿಯು ನೆಲವನ್ನು ನೋಡುತ್ತ ಅಂಗುಷ್ಟದಿಂದ ನೆಲವನ್ನು ಬಗಿಯುತ್ತ ಆನಂದ ಬಾಷ್ಪಗಳಿಂದ ಕೂಡಿದ ಆವೇಶದ ಸ್ವರದಿಂದ "ಈ ಅಭಾಗಿನಿಯ ಭಾಗ್ಯದಿಂದ ರಾಜಕುಮಾರರು ಒಂದುವೇಳೆ ವಚನಬದ್ಧರಾದದುದೇ ಆಯಿತೆಂದರೆ, ನಾನಾದರೂ ಕುಮಾರರು ಕೈಕೊಂಡ ಪ್ರತಿಜ್ಞೆಗೆ ಸಹಾಯಮಾಡಿ ಅವರಿಗೆ ಸೌಖ್ಯವಾಗುವಂತೆ ಆಚರಿಸುವೆನು. ಇದಕ್ಕೆ ಭಗವಾನ್ ಶ್ರೀ ವಿಶ್ವೇಶ್ವರನೇಸಾಕ್ಷಿ."

ರಸಿಕನು ಮೈಮರೆತು ಒಮ್ಮಿಂದೊಮ್ಮೆ ಅವಳ ಕೈಹಿಡಿದು "ಭಾಪು ಕ್ಷಾತ್ರತರುಣಿಯೇ ಭಾಪು!! ನಿಜವಾಗಿ ನಮ್ಮ ಭಾಗ್ಯೋದಯವಾಯಿತು ಇನ್ನು ನನ್ನ ಪ್ರತಿಜ್ಞೆಯು ಈಡೇರುವ ದೆಂಬಲ್ಲಿ ಸಂದೇಹವೇ ಇಲ್ಲ."

ಮಾಲತಿಯು ಅವನ ಕೈಯಲ್ಲಿ ಸಿಕ್ಕಿದ್ದ ತನ್ನ ಕೈಯನ್ನು ಬಿಡಿಸಿಕೊಳ್ಳುತ್ತ ನಾಚಿಕೆಯಿಂದ ಬೇರೆಕಡೆಗೆ ಮೋರೆದಿರುವಿ "ತಾವನ್ನುವದೆಲ್ಲ ತಮ್ಮಶೀಲಕ್ಕನು ಗುಣವಾಗಿದೆ ಈ ಮಾಲತಿಯು ತಮ್ಮ ರೂಪಕ್ಕನುಗುಣವಾಗಿಲ್ಲ ಇವಳು ತಮ್ಮ ಓರ್ವ ದಾಶಿಯಂತೆ ಸೇವೆಮಾಡುವಳು,"

ರಸಿಕ— ಅದೆಂದಿಗೂ ಆಗದು ಆವಳುನನ್ನ ಹೃದಯಸ್ವಾಮಿನಿಯು ಎಂದು ಸದಭಿಮಾನ ಸ್ವರದಿಂದ ನುಡಿದನು.

ಇಷ್ಟರಲ್ಲಿ ಆಮುದುಕನು ಪುನಃ ಅಲ್ಲಿ ಇವರೀರ್ವರ ಕಣ್ಣಿಗೆಬಿದ್ದನು ರಾಜಕುಮಾರರೇ ತಾವು ಇಲ್ಲಯೇ ಇರುವಿರಲ್ಲ. ನಡೆಯಿರಿ ಗುಡಿಸಲಿಗೆ ಹೋಗೋಣ ಎಲ! ಇದೇನು? ಈ ಅಲ್ಲಡಹುಡಿಗೆಯು ಸಹ ಇಲ್ಲಿಯೇ ಇರುವಳಲ್ಲ. ಕುಟೀರದಕಡೆಗೆ ಬರುವದಿಲ್ಲವೇನು? ಎಂದು ಅವರೀರ್ವರನ್ನೊ

ಡಗೊಂಡು ಮುದುಕನು ಮನೆಯದಾರೀ ಹಿಡಿದನು. ದಾರಿಯಲ್ಲಿ ಪರಸ್ಪರರ ನಡುವೆ ಯಾವ ವಿಷಯದ ಮಾತುಗಳೂ ಜರುಗಲಿಲ್ಲ. ನಡುನಡುವೆ ಮಾತ್ರ ಮಾಲತಿಯೂ ರಾಜಪುತ್ರನೂ ಮುದುಕನ ಕಣ್ಣು ತಪ್ಪಿಸಿ ಒಬ್ಬರನ್ನೊಬ್ಬರು ನೋಡುತ್ತಿದ್ದರು.

✣ ✣ ✣ ✣ ✣ ✣ ✣ ✣

ನಂದಿ ದುರ್ಗವು ಮೈಸೂರ ಅರಸರ ಆಡಳಿತಕ್ಕೆ ಸೇರಿದೆ. ಬೆಂಗಳೂರಿಂದ ಕೋಲಾರಕ್ಕೆ ಹೋಗುವ ದಾರಿಯಲ್ಲ ನಂದಿ ಸ್ಟೇಶನದಿಂದ ಎರಡು ಮೈಲು ಅಂತರದಮೇಲಿದೆ. ಬೆಟ್ಟದಬುಡದಲ್ಲಿಯೂ 'ನಂದಿ' ಹೆಸರಿನ ಒಂದು ಗ್ರಾಮ ಉಂಟು ಇಲ್ಲಿ ಭೋಗ ನಂದೀಶ್ವರನ ದೇವಾಲಯವಿರುವದು. ದೇವಾಲಯದ ಕಟ್ಟಡವು ಬಹು ಪುರಾತನದಿದ್ದು ಮೇಣವಲ್ಲಿಯೂ ಸಹ, ಮಾಡಲು ಬಾರದಂಥ, ಕೆತ್ತಿಗೆಯ ಕುಸುರಿನ ಕೆಲಸವನ್ನು ಕರಿಯ ಕಲ್ಲಿನಲ್ಲಿ ಮಾಡಿರುವರು. ಅದನ್ನು ನೋಡುಕಲೆ ಪ್ರೇಕ್ಷಕನಿಗೆ ಭಾರತ ವರ್ಷದ ಶಿಲ್ಪ ಕಲೆಯು ಮೂರ್ತಿಮಂತಾಗಿ ಕಾಣುವಂತಿದೆ ಪ್ರತಿ ವರುಷ ನಂದೀಶ್ವರನ ರಥೋತ್ಸವವಾಗುತ್ತದೆ. ಗ್ರಾಮದ ತುಸು ಅಂತರದಮೇಲೆ ಬೆಟ್ಟದ ಬುಡವು ಪ್ರಾರಂಭವಾಗುತ್ತದೆ. ಬೇಸಿಗೆಯಲ್ಲಿ ಈಗ್ಗೆ ಬಹಳ ಜನರು ಅಲ್ಲಿ ಇರಲು ಹೋಗುವರು. ಮೇಲಕ್ಕೇರಲು ಬುಡದಲ್ಲಿ ಸೋಪಾನಗಳಿರುವವು. ಬೆಟ್ಟವು ಅಷ್ಟೇನು ದೊಡ್ಡದಲ್ಲ; ಆದರೆ ಉನ್ನತ ಬಹಳವಿದ್ದು ಮುಗಿಲು ಮುಟ್ಟಿದಂತೆ ಕಾಣುತ್ತದೆ. ಬೆಟ್ಟದ ಸುತ್ತಲೂ, ಮೇಲೂ, ಇರುವೆ ಅಡ್ಡಾಡಲು ಸಂದಿಸದಂತೆ ಢಟ್ಟಾಗಿ ನಾನಾಬಗೆಯ ಗಿಡಮರಗಳು ಬಹು ಉನ್ನತವಾಗಿ ಬೆಳೆದಿರುವವು. ತರುಣರು ಸೋಪಾನಗಳನ್ನೇರಿ ಮೇಲೆ ಸಹಜ ಹೋಗಬಹುದು. ವಯಸ್ಕ ಜನರಿಂದ ಸಾಧ್ಯವಿಲ್ಲ ಅವರಿಗಾಗಿ ಬುಡದಲ್ಲಿ ಕುರ್ಚಿಗಳು ಸಿಕ್ಕುತ್ತವೆ. ಎರಡು ಮೂರು ರೂಪಾಯಿಕೊಟ್ಟರೆ ತೀರಿತು - ಅಲ್ಲಿಯ ಜನರು ನಿರಾಯಾಸವಾಗಿ ಮೇಲಕ್ಕೆ ಒಯ್ಯುತ್ತಾರೆ. ಚಳಿಮಳಿಗಾಲವಲ್ಲಿ ಅಲ್ಲಿ ಯಾರಿಂದಲೂ ಇರಲು ಸಾಧ್ಯವಿಲ್ಲ. ಬೇಸಿಗೆಯ ನಾಲ್ಕು ತಿಂಗಳದಲ್ಲ ಮಾತ್ರ ಎತ್ತನೋಡಿದತ್ತಲ್ಲ ಜನರೇ ಕಾಣುವರು.

ಹವೆಯು ಬಹಳತಂಪು. ಮುಂಜಾವಿನಲ್ಲಿ ಮೋಡಗಳು ತಲೆಯಮೇಲೆಯೇ ಹಾದು ಹೋದಂತಾಗುವವು. ತಾಸೆರಡು ತಾಸುಗಳವರೆಗೆ ಒಬ್ಬರ ಮೋರೆಯು ಮತ್ತೊಬ್ಬರಿಗೆ ಕಾಣವದಿಲ್ಲ. ಹವೆಯು ತಂಪಿದ್ದರೂ ಬಹು ಆರೋಗ್ಯಕರವು. ಬೆಟ್ಟದಮೇಲೆ ಎತ್ತನೋಡಿದತ್ತಲ್ಲ ರಾಜಮಾರ್ಗಗಳಿರುವವು.

ರಾಜಮಾರ್ಗಗಳೆಡಬದಿಗೆ ನೀಲಗಿರಿಯಗಿಡಗಳೂ, ನೀರಲಗಿಡಗಳೂ ಶ್ರೀಗಂಧದಗಿಡಗಳೂ, ಸೂರ್ಯಕಿರಣವನ್ನು ಬುಡದಲ್ಲಿ ಪ್ರವೇಶಿಸದಂತೆ ಬೆಳೆದಿರುವವು. ಬೆಟ್ಟದಮೇಲೆ ಯೋಗಿನಂದೀಶ್ವರನ ದೇವಾಲಯ, ಅಮೃತ ಸರೋವರ, ಶೌನಕತೀರ್ಥ, ಪಾಲಾರನದಿಯ ಉಗಮವಿರುವದು. ಯೋಗೇಶ್ವರನ ದರುಶನಕ್ಕೆ, ಪ್ರತಿ ಶುಕ್ರವಾರ ಬಹಳಜನರು ಬರುವರು. ಇದಲ್ಲದೆ ಅಲ್ಲಲ್ಲಿಪ್ರಾಚೀನ ಕಟ್ಟಡಗಳು ಕಾಣಬರುವವು. ಅಮೃತ ಸರೋವರದನೀರು, ನಾನಾಪ್ರಕಾರದ ಗಿಡಮೂಲಿಕೆಗಳಿಂದಿಳಿದು ಬಂದುದರಿಂದ ಪ್ರತಿ ಅಮೃತಕ್ಕೆ ಸರಿಯಾಗಿರುವದು.

ಉತ್ತರದಿಕ್ಕಿನ ದ್ವಾರವು ಮುಖ್ಯದ್ವಾರ. ಪಶ್ಚಿಮ ದಕ್ಷಿಣ ದಿಕ್ಕುಗಳಿಗೆ ಆಳವಾದ ಕೊಳ್ಳಗಳಿವೆ. ಪೂರ್ವದಿಕ್ಕಿಗೆ ಒಂದುಸಣ್ಣ ಗುಪ್ತದ್ವಾರವಿರುವದು. ಬೆಟ್ಟಕ್ಕೆ ಬಲವಾದ ಇಟ್ಟಂಗಿಯ ಕೋಟೆ ಕೊತ್ತಳಗಳಿವೆ. ಕೋಟೆಯ ಗೋಡೆಯು, ಹಾರಿಯಿಂದ ಆಗಿದರೂ ಒಂದುಚೂರು ಬಾರದಷ್ಟು ಗಟ್ಟಿಯಾಗಿರುವದು. ಇದನ್ನು ಮೈಸೂರ ಮಹಮ್ಮದೀಯ ಅರಸನಾದ ಟೀಪುವು ಕಟ್ಟಿಸಿದ್ದನಂತೆ.

ಪಶ್ಚಿಮಭಾಗಕ್ಕೆ ಟೀಪುವು ಶರೆಯಾಳುಗಳನ್ನು ರುಳಿಸುವ ಕಡಿದಾದ ಸ್ಥಳವಿದೆ. ಅಲ್ಲಿಂದ ಅವನು ತನ್ನಶೆರೆ ಯಾಳುಗಳನ್ನು ಕೆಳಗಣ ಕೊಳ್ಳದಲ್ಲಿ ಉರುಳಿಸುತ್ತಿದ್ದನಂತೆ. ಮೇಲೆ ಎಲ್ಲಬಗೆಯ ವ್ಯವಸ್ಥೆ ಇದೆ. ಇದೆಲ್ಲವನ್ನು ಮೈಸೂರ ಅಲ್ಪವಯೀ ಅರಸರ ಕಾಲದಲ್ಲಿ ರಾಜ್ಯದ ವ್ಯವಸ್ಥೆಯನ್ನು ನೋಡುತ್ತಿದ್ದ ಕಬ್ಬನ್ ನೆಂಬ ಇಂಗ್ಲೀಷ ಅಧಿಕಾರಿಯು ಮಾಡಿರುವನಂತೆ. ಅವನ ಹೆಸರಿನ, ಅರಮನೆಯನ್ನು ಹೋಲುವ ಒಂದುಭವ್ಯಮನೆಇರುವದು

ಈಬೆಟ್ಟವು ಹದಿನೇಳನೆಯ ಶತಮಾನದಲ್ಲಿ ಶಿವಛತ್ರಪತಿಯ ತಮ್ಮನಾದ ವೆಂಕೋಜಿಯ ಅಧಿಪತ್ಯಕ್ಕೆ ಸೇರಿತ್ತೆಂದು ಹೇಳುತ್ತಾರೆ. ಮತ್ತು ಇ

ತರ ದೃಷ್ಟಿಯಿಂದ ನೋಡಿದರೆ ಪುರಾತನಕಾಲದಲ್ಲಿ ಚಾಲುಕ್ಯ ಸಾಮ್ರಾಟ ರಿಂದ ಕಟ್ಟಿಸಿದುದಾಗಿ ತೋರತ್ತದೆ. ಮೊದಲಿನಕಾಲದಲ್ಲಿ ದುರ್ಗವು ಅಭೇದ್ಯವಾಗಿದ್ದು, ವೈರಿಗಳಿಂದ ತಡೆಹಾಯಲು, ಶಕ್ಯವಿದ್ದಿಲ್ಲೆಂಬದಾಗಿ ತೋರುತ್ತದೆ. ಈಗ ಪಶ್ಚಿಮ ಗೋಡೆಯನ್ನೊಡೆದು, ಮೋಟಾರಗಾಡಿಗಳು ಬರಹೋಗಲು, ಮಾರ್ಗವನ್ನು ಮಾಡಹತ್ತಿರುವರು. - ಇರಲಿ -

ಈಹೊತ್ತು ರಣರಸಿಕನ ಪರಾಕ್ರಮವನ್ನು, ನಿಜವಾಗಿ ವರ್ಣನಮಾಡಲು ಸಾಧ್ಯವಿರಲಿಲ್ಲ. ಅವನಿಗೆ ಅವನ ಹಿರಿಯಣ್ಣನಾದ, ಚಾಲುಕ್ಯ ಸಾಮ್ರಾಟ ಚಂದ್ರಾದಿತ್ಯ ಮಹಾರಾಯನು, ವಾತಾಪಿ ಪುರದಿಂದ ಕೃಷ್ಣಕಾಂತನೆಂಬ ಓರ್ವ ಪಸಿದ್ಧ ಸೇನಾನಿಯನ್ನು ತಮ್ಮನಿಗೆ ಸಹಾಯಮಾಡಲು ಕಳುಹಿದ್ದನು. ಕೃಷ್ಣಕಾಂತನು ಅನೇಕ ಕಾಳಗದಲ್ಲಿ ಶೌರ್ಯದಿಂದ ಕಾದಿ ಜಯಸಂಪಾದಿಸಿದ ಪ್ರಸಿದ್ಧ ಸೇನಾನಿಯಾಗಿದ್ದನು.

ದುರ್ಗದ ಅಗ್ರಭಾಗದಲ್ಲಿ ರಣರಸಿಕ ನೋರ್ವನೇ ಶಸ್ತ್ರಹಿಡಿದುಕೊಂಡು ಕಾಳಗಕ್ಕೆ ಸಿದ್ಧನಾಗಿ ನಿಂತಿದ್ದನು. ದಕ್ಷಿಣದ ಕೊಳ್ಳದ ಭಾಗದಲ್ಲಿ ಕೆಲವು ಬೇಡರಸೈನ್ಯ ನಿಂತಿತ್ತು. ದಳವಾಯಿಯು ಉತ್ತರದಿಕ್ಕಿನ ಕಡೆಗೆ ವೈರಿಗಳ ಮಾರ್ಗಪತೀಕ್ಷೆ ಮಾಡುತ್ತ ಕಣ್ಣೊಳಗೆ ಎಣ್ಣೆಹಾಕಿಕೊಂಡು ಕುಳಿತಿದ್ದನು. ಉತ್ತರಭಾಗದ ಬುಡದಲ್ಲಿ ಅರಣ್ಯವಾಸಿ ವೃದ್ಧವೀರನು, ತನಭಿಲ್ಲಜನರೊಂದಿಗೆ ಸಜ್ಜಾಗಿ ನಿಂತಿದ್ದನು. ಅವನು ನಂದರಾಜರಿಂದ ಶತ್ರುಗಳಸಹಾಯಕ್ಕೆ ಬರುವ ಸೈನ್ಯವನ್ನು ನಡುದಾರಿಯಲ್ಲಿಯೇ ತಡೆದು ಅಲ್ಲಿಂದಲೇ ಹಿಂದಟ್ಟುತ್ತಿದ್ದನು.

ವಿಜಯದುರ್ಗದ ದುರ್ಗಾಧಿಪತಿಯು, ಚತುರನೂ, ರಣಸಾಹಸಿಯೂ ಇದ್ದರೂ, ಇವರೀರ್ವರ ಮುಂದೆ ಅವನ ಆಟವು ಸಾಗಲಿಲ್ಲ. ಕಳೆದುಕೊಂಡ ನಂದೀದುರ್ಗವನ್ನು, ಪುನಃ ತೆಗೆದುಕೊಳ್ಳಲು ನಾಲ್ಕೈದುದಿನ ಹಗಲು ರಾತ್ರಿಯನ್ನದೆ ಸಾಹಸಪಟ್ಟರೂ, ಯಶದ ಲಕ್ಷಣವುತೋರಲಿಲ್ಲ.

ಇತ್ತ ರಸಿಕನು, ಬೆಟ್ಟವನ್ನಿಳಿದು, ಆರಿಸಿದ ನೂರಾರು ಬೇಡರನ್ನು ತೆಗೆದುಕೊಂಡು, ವಿಜಯದುರ್ಗದ ಅಗಸೆಯ ಬಾಗಿಲಿಗೆ ಬಂದುಮುಟ್ಟಿದನು. ಸಂಗಡಬಂದ ಬೇಡರು, ಮೇಲಿರುವ ಎದುರಾಳಿಗಳ ಹೊಡತವ

ನ್ನು ಲೆಕ್ಕಿಸದೆ, ಬಾಗಿಲಕೆಳಗೆ ಸುರಂಗಹೊಡೆದು, ಕ್ಷಣಮಾತ್ರದಲ್ಲಿ ಉಕ್ಕಿನಂತೆ ಬಲವಾದ ಅಗಸೆಯನ್ನು ಭೂಮಿಗುರಿಳಿಸಿದರು. ಆಮೇಲೆ ಒಳಹೊಕ್ಕುನೋಡುತ್ತಲೆ, ಅಲ್ಲೇನಿದೆ; ದುರ್ಗಾಧಿಪತಿಯು, ಯೋದ್ಧಾಹನಂತೆ ನಟಿಸಿ, ಪಶ್ಚಿಮದ ದಿಡ್ಡಿಯಬಾಗಿನಿಂದ, ಯಾವಾಗಲೋ ಚಿನ್ನದ ದುರ್ಗದಕಡೆಗೆ ಕಾಲ್ದೆಗೆದಿದ್ದನು. ದುರ್ಗದೊಳಗಣ ನೂರಾರು ಶಸ್ತ್ರಹೀನ ಸೈನಿಕರು ಮಾತ್ರ ರಣರಸಿಕನ ಕೈಗೆಸಿಕ್ಕರು. ತುಸುಹೊತ್ತಿನಲ್ಲಿ ಕೃಷ್ಣಕಾಂತನೂ ಬಂದು ಅರಸುಮಗನನ್ನು ಕೂಡಿಕೊಂಡನು.

ಕೃಷ್ಣಕಾಂತ— ಕುಮಾರರೇ! ಈಹೊತ್ತು ಚಿನ್ನದ ದುರ್ಗವು ನಿಜವಾಗಿ ನಮ್ಮ ಕೈಸೇರುವಂತಿದೆ; ಏಕಂದರೆ ಆಪ್ರಭುವಿನ ಕೃಪಾಕಟಾಕ್ಷದಿಂದಲೂ ಆಂಧ್ರಾಧಿಪತಿಯ ಪುಣ್ಯಪ್ರಭಾವದಿಂದಲೂ ಎರಡು ದುರ್ಗಗಳಂತೂ, ರಕ್ತಪಾತವಿಲ್ಲದೆ ನಿರಾಯಾಸವಾಗಿ ನಮ್ಮ ಕೈಸೇರಿರುತ್ತವೆ. ಇನ್ನು ಚಿನ್ನದದುರ್ಗ ಒಂದೇಅಲ್ಲವೇ ?

ರಣರಸಿಕನು ಉತ್ಸಾಹದಿಂದ— ಹೌದು ಸೇನಾನಿಗಳೇನನಗಾದರು ಹಾಗೆಯೇ ತೋರುತ್ತದೆ. ಈಶ್ವರನ ಓಲುಮೆ ಮಾತ್ರ ಇರಬೇಕು.

ನಾನು ನನ್ನ ಪ್ರತಿಜ್ಞೆಯನ್ನು ಕೊನೆಗಾಣಿಸುವೆನೆಂದು, ನನ್ನ ಮನೋದೇವತೆಯು ನುಡಿಯಹತ್ತಿದ್ದಾಳೆ, ‘‘ ಎಂದನು. ಕೃಷ್ಣಕಾಂತನು ಗಂಭೀರಸ್ವರದಿಂದ ’’ ಆಗಲಿ ಒಳತೆ ಆಯಿತು ! ತಮ್ಮ ಪ್ರತಿಜ್ಞೆಯ ಪೂರ್ತಿಯಿಂದ ಚಾಲುಕ್ಯವಂಶಕ್ಕೆ ಹತ್ತಿದ, ಕಲಂಕವಾದರೂ ತೀವ್ರ ಇಲ್ಲದಂತಾಗಲಿ. ನನ್ನ ಆದಯಾಳು ಅನ್ನದಾತೃಗಳಾದ ಸಾಮ್ರಾಟ ಪುಲಕೇಶಿಮಹಾರಾಯರೂ, ವೆಂಗಿ ಅಧಿಪತಿಗಳಾದ ಕುಬ್ಜರಾಯರೂ, ಸ್ವರ್ಗದಲ್ಲಾದರೂ ಸಮಾಧಾನ ಹೊಂದಲಿ.

ಇದಿರಲಿ ಕುಮಾರ! ನಿನ್ನಿನದಿವಸ ನಂದೀದುರ್ಗದಉತ್ತರಕ್ಕೆ ಕೆಳಗಣ ಭಾಗದಲ್ಲಿ ಓರ್ವ ಬೇಡನಾಯಕನು ತನ್ನ ಕಾಲಾಳುಗಳೊಂದಿಗೆ ನಿಂತಿದ್ದನಲ್ಲ ಆವನು ಯಾರು? ”

ರಣರಸಿಕನು ತಲೆ ಅಲ್ಲಾಡಿಸುತ್ತ, ‹‹ಹೌದು. ಅವನಹೆಸರು ನನಗೂ ಗೊತ್ತಿರುವದಿಲ್ಲ. ದುರ್ಗದ ಮುತ್ತಿಗೆಯ ಕೆಲಸವು ಯುಕ್ತಿಯಿಂದ ಅವನಿಂದಲೇಆಯಿತು. ”

ಮಾತಾಡುತ್ತ ಮಾತಾಡುತ್ತ, ಈರ್ವರೂ ದುರ್ಗದ ತೀರ ಮೇಲ ಭಾಗದಲ್ಲಿ ಬಂದರು. ಉನ್ನತ ಸ್ಥಳದಮೇಲೆ ನಿಂತು ನಾಲ್ಕೂಕಡೆಗೆ ತನ್ನ ದೃಷ್ಟಿಯನ್ನು ಹೊರಳಿಸಿ, ‹‹ ಸೇನಾನಿಗಳೇ! ಈ ಬಡಗಣ ಭಾಗದಲ್ಲಿ ಒಂದು ನೆಲಕೋಟೆ ಕಾಣುಬರುವದಲ್ಲ! ಕೋಟೆಯ ಸುತ್ತುಮುತ್ತು ಕಂದಕವು ಸಹ ಇರುವದು. ಕೋಟೆಯು ಬಲವಾಗಿದ್ದಿರಬೇಕು. ” ಕೃಷ್ಣಕಾಂತನು ಅತ್ತಕಡೆಗೆ ತನ್ನ ತೀಕ್ಷ್ಣದೃಷ್ಟಿಯನ್ನು ಹೊರಳಿಸಿ, ‹‹ ಇರಬಹುದು! ವಿಜಯದುರ್ಗದ ದುರ್ಗಾಧಿಪತಿಯ ಕೈಕೆಳಗೆ ಇದ್ದಿರಬೇಕು. ಇರಲಿ ಸಧ್ಯಕ್ಕೆ ಎರಡು ದುರ್ಗಗಳೂ ಬೆಟ್ಟದ ಬುಡವಲ್ಲಿಯ ನೂರಿನ್ನೂರು ಹಳ್ಳಿಗಳು ನಮ್ಮ ಆಧಿಪತ್ಯದ ಕೆಳಗೆ ಬಂದಿರುವವು. ನಾನು ನನ್ನ ಕೈಕೆಳಗಣ ಓರ್ವ ಅಧಿಕಾರಿಯನ್ನು ಅವುಗಳ ವ್ಯವಸ್ಥೆಯ ಸಲುವಾಗಿ, ಏರ್ಪಾಟಮಾಡಿ ಕಳುಹಿಕೊಡುತ್ತೇನೆ. ”

ರಣರಸಿಕ— ಒಳ್ಳೇದು ಮುಂದಣ ಯೋಚನೆ ಏನು?

ಕೃಷ್ಣಕಾಂತ— ಹಿಂದಿನಿಂದ ಎಲ್ಲವಿಷಯವನ್ನು ಕುರಿತು ವಿಚಾರ ಮಾಡೋಣ. ಸಧ್ಯಕ್ಕೆ ಸುತ್ತುಮುತ್ತಲಿನ ಪ್ರದೇಶದಮೇಲೆ ನಮ್ಮ ಅಧಿಕಾರಿಗಳನ್ನು ನೇಮಿಸಿ, ನಾವು ಒಂದು ಉತ್ತಮಸ್ಥಳಹಿಡಿದು ಕುಳಿತುಕೊಳ್ಳಬೇಕು.

ರಸಿಕ— ಹೌದು, ನೀವು ಹೇಳಿದಮೇರೆಗೆ ನಡೆಯುವದೇ ವಿಹಿತ ಕಾಣುತ್ತದೆ. ಮೊದಲು ನಾಲ್ಕೈದು ದಿವಸ ವಿಶ್ರಾಂತಿ ತೆಗೆದುಕೊಂಡು, ಆಮೇಲೆ ಅವರ ಇಂಗಿತವನ್ನರಿತು, ಒಮ್ಮಿಂದೊಮ್ಮೆ ಚಿನ್ನದ ದುರ್ಗಕ್ಕೆ ಮುತ್ತಿಗೆ ಹಾಕಬೇಕು.

ರಾಜಕುಮಾರನು ಆಡಿದಮಾತಿಗೆ ಸೇನಾನಿಯು ನಗುತ್ತ, ‹‹ ರಾಜಪುತ್ರರೇ! ಆವರೇನು ಮೂರ್ಖರಲ್ಲ, ವಿಜಯದುರ್ಗವು ಕೈವಶವಾದಮೇಲೆ,

ಚಿನ್ನದದುರ್ಗದಮೇಲೆ ಸಾಗಿಬರುವರೆಂಬದನ್ನು ಅವರೇನು ಅರಿಯರೇ? ಅವರಂತೂ ಒಳ್ಳೇಉತ್ಸಾಹದಿಂದ ನಮ್ಮ ಮಾರ್ಗಪ್ರತೀಕ್ಷೆ ಮಾಡುತ್ತಿರಬಹುದು." ರಣರಸಿಕನು ನಿರಾಸೆಯಿಂದ, "ಕೃಷ್ಣಕಾಂತರೇ! ನೀವಾಡುವದು ನಿಜವು; ಈ ದುರ್ಗದ ದುರ್ಗಾಧಿಪತಿಯು ಸಹ, ನಮ್ಮ ಕೈಯಿಂದ ಜಾರಿ ಹೋಗಿರುವನು. ಅವನು ನಮ್ಮಕೈಗೆ ಸಿಕ್ಕಿದ್ದರೆ ಚೆನ್ನಾಗಿತ್ತು ಅವನಾದರೂ ನಂದರಾಜನನ್ನು ಹೋಗಿ ಕಲೆಯುವವನೇ."

ಕೃಷ್ಣಕಾಂತ— ಛೀ! ಅವನು ಬಲುಸಾಹಸಿಯು. ನಿಜವಾಗಿ ಅವನು ಸಮರಶೂರ ನಿರಲಕ್ಕೆಬೇಕು; ಏಕಂದರೆ, ಇತ್ತ ನಮ್ಮೆದುರಿಗೆ ಯುದ್ಧವನ್ನು ನಟಿಸಿ ಹಾ ಹಾ ಅನ್ನುವದರೊಳಗಾಗಿ, ತನ್ನ ಸೈನ್ಯಸಮೇತ ಹೇಳಹೆಸರಿಲ್ಲದೆ ಹೋಗಿರುವನು. ಬಹುಶಃ ಸೋಲುವ ಚಿನ್ಹವು ಕಾಣುತ್ತ ಹೋದಹಾಗೆಲ್ಲ ಸೈನಿಕರನ್ನು ಅತ್ತಕಡೆಗೆ ಸಾಗಿಸಿರಬಹುದು. ಇಂಥ ಧೂರ್ತಮುತ್ಸದ್ದಿ ಜನರು ಕೈವಶ ನಾಗುವಡು ಸುಲಭ ಸಾಧ್ಯದಮಾತಲ್ಲ. ಇರಲಿ! ಕುಮಾರ, ನಮ್ಮಜೊತೆಗೆ ಇದ್ದ ಆ ಬೇಡರೊಡಯು, ವೃದ್ಧವೀರನ ಗುರುತು ಮಾಡಿ ಕೊಡುವಿರೇನು? ಅವನನ್ನು ನಾನು ಎಲ್ಲೋನೋಡಿದಂತೆ ಭಾಸವಾಗುತ್ತದೆ. ಮುತ್ತಿಗೆಯ ಕೆಲಸದಲ್ಲಿ ಅವನು ಮಾಡಿದ ಕುಶಲತನ ಹೆಚ್ಚು. ನಂದರಾಜರಿಂದ ಬರುತಲಿರುವ ಬಲುವನ್ನು ಮಧ್ಯದಲ್ಲಿಯೇ ಹೊಡೆದೋಡಿಸ್ಸಿ, ಕಡೆಯುವರೆಗೂ ದುರ್ಗಾಧಿಪತಿಗೆ ಸಹಾಯ ಸಿಕ್ಕುವಂತೆ ಮಾಡಲಿಲ್ಲ. ಮುದುಕನಾದರೂ ಅವನಲ್ಲಿರುವ ವೀರಸವು ಅಳಿದಿಲ್ಲ. ಅವರ ಶೂರತನಕ್ಕೆ ಈಡಿಲ್ಲ. ಕಾಳಗದಲ್ಲಿಯ ಅವನ ಕಲಿತನವು, ನಾನು ನಾನು, ಎನ್ನುವ ರಣವಿಕ್ರಮ ತರುಣರನ್ನು ಮೀರುವಂತಿದೆ. ಈಹೊತ್ತಿನ ಜಯವು ಅವನಿಂದಲೇ ದೊರೆಯಿತುಎಂದರೆ ಅತಿಶಯೋಕ್ತಿ ಯಾಗಲಾರದು. ಇಂಥ ವೀಠ ಪುರುಷರನ್ನು ಬೆಟ್ಟಿಯಾಗಲಿಕ್ಕೇಬೇಕು.

ರಣರಸಿಕನು ನಡುವೆ ಬಾಯಿಹಾಕಿ "ಆಮುದುಕನ ಬೆಟ್ಟಿಯಾಗುವದು ತೀರ ಅಸಂಭವದ ಮಾತು"

ಕೃಷ್ಣಕಾಂತನು ವಿಸ್ಮಯದಿಂದ "ಅದುಹೇಕೆ"?

ರಣರಸಿಕ— ಆ ವೃದ್ಧನು ನನಗೆ ಸಹಾಯವಾಡುವೆನೆಂದು ಹೇಳು ವಪೊದಲು ನನ್ನಿಂದ ಕೆಲವು ಆಣೆ ಪ್ರಮಾಣಗಳನ್ನು ಮಾಡಿಸಿಕೊಂಡಿರು ವನು. ಈಗ ಅವನ್ನು ಮುರಿಯಲು ಬರುವಂತೆ ಇಲ್ಲ.

ಕೃಷ್ಣಕಾಂತ— ಆವಮಾತಿನ ವಿಷಯಕ್ಕೆ ಇಷ್ಟೆಲ್ಲ ಆಣೆಪ್ರಮಾಣ?

ರಸಿಕ— ಮೊದಲನೆಯ ಮಾತೆಂದರೆ ನಮ್ಮ ಯಾವವೀರರ ಕೂಡ ಲು ಬೆಟ್ಟಿಯಾಗುವದಿಲ್ಲೆಂಬದಾಗಿ. ಎರಡನೆಯ ವಿಷಯ ವೆಂದರೆ ನಮ್ಮ ಯಾವಸೇನಾನಿಗಳಕೂಡ ಮಾತಾಡುವ ದಿಲ್ಲವಾಗಿ; ಇದಲದೆ ವಿಜಯದು ರ್ಗದಿಂದ ಕೆಳಗಣದುರ್ಗದಕಡೆಗೆ ಹೋಗುವ ನಡುದಾರಿಯಲ್ಲಿ ಒಂದು ಸ ಣ್ಣದಾದಹಳ್ಳ ಕಾಣಬರುವದಲ್ಲ, ಆ ಹಳ್ಳದ ಮೇಲ್ಭಾಗದಕಡೆಗೆ ಒಂದು ಹೆಜ್ಜೆಯನ್ನು ಸಹ ಇಡಲಾರೆ ನೆಂಬದಾಗಿ ಹೇಳಿರುವನು.

ಕೃಷ್ಣಕಾಂತ— ಏನೆನ್ನಬೇಕು, ಇಂಥಮನುಷ್ಯರಿಗೆ ಒಂದು ವಿಲಕ್ಷ ಣ ವೃತ್ತಿಯ ವೃದ್ಧನಿರುವದಾಗಿ ಕಾಣುತ್ತದೆ.

ರಣರಶಿಕ— ವಿಲಕ್ಷಣವಲ್ಲದೆ ಮತ್ತೇನು ? ಅವನು ಮಿತಿಮೀರಿದ ಹಟವಾದಿಯು ನನ್ನಕೂಡಸಹ ಮಾತಾಡಲು, ಬೆಟ್ಟಿಯಾಗಲು, ಪ್ರಸಂ ಗ ವಿಶೇಷ ಯಾವುದೇ ವಿಷಯಕ್ಕಾಗಲಿ ಸಹಾಯವಾಡಲು ಒಪ್ಪಿಕೊಂಡಿ ರುವನು. ಇಷ್ಟಾದರೂ, ನಮ್ಮ ಸುಕೃತವೆಂದೇ ತಿಳಿಯಬೇಕು.

ಕೃಷ್ಣಕಾಂತ— ಹಾಗಾದರೆ ಪೂರ್ವದಲ್ಲಿ, ಇವನು ಓರ್ವ ಚಾಣಾ ಕ್ಷ ಕಳ್ಳನಿದ್ದು ವಯಸ್ಸು ಗತಿಸಿದನೋ. ತನ್ನ ಪಾಪಕರ್ಮದ ಪಶ್ಚಾತ್ತಾ ಪದಿಂದ, ಈ ಆರಣ್ಯವಾಸ ಪತ್ಕರಿಸಿರಲಿಕ್ಕೆಬೇಕು ನನಗಂತೂ ಹಿಗೆಯೇ ಕಾಣುತ್ತದೆ ಏಕೆ? ರಾಜಪುತ್ರ ನಿಮ್ಮ ಅಭಿಪ್ರಾಯವೇನು ?

ರಣರಸಿಕ— ಛೀ ! ದಳವಾಯಿಗಳೆ ಅವನವಿಷಯಕ್ಕೆ ಇಂಥ ಕುಕ ಲ್ಪನೆಯೇ ಬೇಡಿರಿ. ಅವನು ಯಾವನೋ ಓರ್ವ ಕ್ಷತ್ರಿಯಕುಲೋತ್ಪನ್ನ ಶೂರ ಸರದಾರ ನಿರಲಿಕ್ಕೇಬೇಕು.

ಸೇನಾನಿಯು ಸಾಶಂಕಮುದ್ರೆಯಿಂದ “ ಎದುರಾಳಿಗಳ ಪಕ್ಷದ ಗುಪ್ತಚಾರನಿರಲಿಕ್ಕಿಲ್ಲವಷ್ಟೇ? ” ಗಂಬೀರಮುದ್ರೆಯಿಂದ, ರಣರಸಿಕನು ಇಂಥ ದುಷ್ಟ ಆಲೋಚನೆಯನ್ನು ಮನದಲ್ಲಿ ತರಬೇಡಿರಿ. ಗುಪ್ತಚಾರನಾಗಿದ್ದರೆ, ಕಳೆದ ಹದಿನೈದು ಇಪ್ಪತ್ತು ದಿವಸಗಳಿಂದ ಅವನಲ್ಲಿ ನನಗೆ ಆಶ್ರಯವೇ ಸಿಕ್ಕುತ್ತಿದ್ದಿಲ್ಲ. ”

ಕೃಷ್ಣಕಾಂತ— ಇರಲಿ ಯಾವುದೆ ಬಗೆಯಿಂದ, ಸಹಾಯ ಸಿಗುತ್ತಿರುವ ದೊಂದು ಗುರುತು ಸ್ವಲ್ಪಹೊತ್ತಿನವರಿಗೆ ನಿಮಗೆ ವಿಶ್ರಾಂತಿಯು ಅಗತ್ಯವಿದೆ. ನಾನಾದರೂ ಜಯಿಸಿದ ಎಲ್ಲಭಾಗವನ್ನು ಒಂದುಸಾರೆಚೆನ್ನಾಗಿ ನೋಡುವೆನು. ಆಮೇಲೆ ಮುಂದೆ ಮಾಡತಕ್ಕ ಏರ್ಪಾಡು ಮಾಡೋಣವಂತೆ. ಅರಸುಮಗನು ಈಮಾತಿಗೆ ಪ್ರತ್ಯುತ್ತರಕೊಡದೆ, ತಲೆವಾಗಿ ಒಪ್ಪಿಗೆಯನ್ನು ಕೊಟ್ಟನು.

✣ ✣ ✣ ✣ ✣ ✣ ✣ ✣

ದುರ್ಗವು ಕೈವಶವಾದ ಮೂರನೆಯ ದಿನದಲ್ಲಿಯೇ ದುರ್ಗದ ಉತ್ತರದಿಕ್ಕಿಗಿರುವ ಗುಡ್ಡದಬರೆಗುಂಟ, ಸುಮಾರು ಇಪ್ಪತನಾಲ್ಕು ಇಪ್ಪತ್ತೈದು ವರುಷ ವಯಸ್ಸಿನ ಓರ್ವತರುಣನು ದೊಡ್ಡದಾದ ಒಂದು ಕರೀ ಪಂಚಕಲ್ಯಾಣಿ ಕುದುರೆಯನ್ನೇರಿ, ಸೃಷ್ಟಿಸೌಂದರ್ಯವನ್ನ ವಲೋಕಿಸುತ್ತ ಸಾಗಿದ್ದನು. ಒಡೆಯನ ಕೈಯಲ್ಲಿರುವ ಕಡಿವಾಣದ ಸನ್ನೆಯಮೇರೆಗೆ ಅಶ್ವವಾದರೂ ಸುಮ್ಮನೆ ಎಡಬಲ ನೋಡುತ್ತ ಮಂದಗತಿಯಿಂದ ನಡೆಯುತಿತ್ತು. ತರುಣನು ಅಂಗಾಂಗದಿಂದ ಸುಂದರನಿದ್ದು. ದುಂಡಾದಮೊಗವೂ, ವಿಶಾಲವಾದ ಹಣೆಯು, ಚೂಪಾದಮೂಗೂ, ಕಪ್ಪಾದ ಕಣ್ಣುಗುಡ್ಡಿಗಳೂ, ಹರವಾದ ಎದೆಯೂ, ನಿಡದಾದ ತೋಳುಗಳೂ. ಇವನ್ನೆಲ್ಲನೋಡಿದ ಕೂಡಲೆ, ಇವನು ಕ್ಷತ್ರಿಯ ಕುಲೋತ್ಪನ್ನ ರಾಜಕುಮಾರ ನಿರಬಹುದೆಂದು ತಟ್ಟನೆ ಹೊಳೆಯುತಿತ್ತು. ತಲೆಗೆ ಜರತಾರಿ ಮುಂದೀಲವನ್ನು ಸುತ್ತಿದ್ದು, ಪ್ರಭಾತಕಾಲ ವಿದ್ದುದರಿಂದ ಮಂದವಾಗಿ ಬೀಸುವ ತಂಗಾಳಿಯಿಂದ, ಅವನ ಉನ್ನತಕೇಶಗಳು ಎರಡೂ ಭುಜಗಳಮೇಲೆ ಅಲೆದಾಡುತ್ತಿದ್ದವು. ಮಂದಮಾರುತನು ತರುತಲಿರುವ ನಾನಾ ಜಾತಿಯ ವನ್ಯಪುಷ್ಪಗಳ ಸುಗಂಧವು ಅವ

ನ ಘ್ರಾಣೇಂದ್ರಿಯಕ್ಕೆ ತಗುಲುತ್ತಿದ್ದುದರಿಂದ ಮನಸ್ಸಿಗೆ ಆಲ್ಹಾದ ವಾದಂತೆ ಕಾಣಬರುತ್ತಿತು. ಮನಸ್ಸಿನ ಉಲ್ಹಾಸಿತ ವೃತ್ತಿಯಿಂದ ಅವನು ಮೈಮರೆತು ನಡೆದಿದ್ದನು. ಇಷ್ಟರಲ್ಲಿ ಸುಂಯಗುಟ್ಟುತ್ತ ಒಂದರಹಿಂದೊಂದು ಬಾಣಗಳು ಬರಹತ್ತಿದವು. ಮೊದಲಿನ ಮೂರುನಾಲ್ಕು ಬಾಣಗಳು ಗುರಿದಪ್ಪಿದವು. ಹಿಂದುಗಡೆಯಿಂದ ಬಂದ ಬಾಣಗಳು, ಒತ್ತರದಿಂದ ಬಂದು ಕುದುರೆಯ ಕಾಲೊಳಗೆ ಗಟ್ಟಿಯಾಗಿ ಸಿಕ್ಕಿಕೊಂಡವು. ಕುದುರೆಯುಮುಗ್ಗರಿಸಿತು. ತರುಣನು ಕೆಳಗೆ ಬೀಳುವವನು; ಅಷ್ಟರಲ್ಲಿ ಪ್ರಸಂಗವರಿತು ಸಾವರಿಸಿಕೊಂಡು ತಿರುಗಿ ನೋಡುತಲೆ, ತುಸುದೂರದಲ್ಲಿ ಶಸ್ತ್ರಾಸ್ತ್ರಗಳಿಂದ ಸಜ್ಜಾದ ಹತ್ತು ಹದಿನೈದುಜನ ರಾಹುತರು, ತನ್ನನ್ನು ಹಿಂಬಾಲಿಸಿ, ಬರುತ್ತಿರುವದು ಕಂಡುಬಂತು. ಕೂಡಲೆ ತರುಣನು ಕುದುರೆಯಿಂದ ಕೆಳಗಿಳಿದನು. ಅಶ್ವವು ಬಾಣದ ವೇದನೆಯನ್ನು ತಾಳಲಾರದೆ ಅತ್ತಿತ್ತ ಓಡಾಡ ಹತ್ತಿತು.

ಓದುಗರೇ ! ಈತರುಣನು ಯಾವನೂ ಇರದೆ, ನಮ್ಮ ಪರಿಚಿಯುದ ರಾಜಪುತ್ರ ರಸಿಕನೇ ಆಗಿದ್ದನು ಅವರಿಗೆ ಎದುರಾಗಿನಿಂತು, ಹಿಂದಿನಿಂದ ತೀರ ಸಮೀಪದಲ್ಲಿ ಬರುತ್ತಿರುವ, ಎದುರಾಳಿಗಳಲ್ಲೋರ್ವನನ್ನು ತನ್ನ ಭಾಲೆಯ ಒಂದೇತಿ ವಿತದಿಂದ ನೆಲಕ್ಕುರಿಳಿಸಿದನು. ಕೂಡಲೆ ಎರಡನೆಯವನು ಮುಂದಕ್ಕೆಬಂದು, ತನ್ನಹರಿತಾದ ಖಡ್ಗದಿಂದ ಒಳತಾಗಿ ಹೊಡೆಯುವವನು, ಅಷ್ಟರಲ್ಲಿ ರಸಿಕನು ಚಪಲತನದಿಂದ ಬರುತಲಿರುವ ಖಡ್ಗಕ್ಕೆ ತನ್ನಢಾಲನ್ನುಹಿಡಿದನು. ಮೂರನೆಯವನು ಕಿವಿಯವರೆಗೆ ಜಗ್ಗಿದಬಾಣವನ್ನು ಬಿಡುವವನು, ಇಷ್ಟರಲ್ಲಿ ಸೂ ಸೂ ಅನ್ನುತ್ತ ಒಂದು ಬಾಣವು ಬಂದು ಕೈಯಲ್ಲಿನಟ್ಟು, ಅವನ ಕೈಯನ್ನು ನಿರ್ಬಲವಾಡಿತು. ನಾಲ್ಕನೆಯವನು ಬರ್ಚಿಯನ್ನು ನೆಗುಹಿ ಗುರಿನೋಡಿ ಒಗೆಯುತ್ತಿರುವಷ್ಟರಲ್ಲಿ ಯೀ ಬೆನ್ನೊಳಗೆ ಬಾಣನಟ್ಟು ಗಾಯಾಳುವಾಗಿ ನೆಲಕ್ಕೆಬಿದ್ದನು. ಹೀಗೆ ಕನಸು ಮನಸ್ಸಿನಲ್ಲಿದೆ ಒಮ್ಮಿಂದೊಮ್ಮೆ ಬಾಣಗಳು ಬರಹತ್ತಿ, ತಮ್ಮಕಡೆಯ ಎಲ್ಲಜನರು ಮೃತ್ಯುಮುಖದಲ್ಲಿ ಬೀಳಹತ್ತಿದುದರಿಂದ, ಉಳಿದಜನರು ಗಾಬರಿಯಾಗಿ ಹಿಂದಕ್ಕೆ ಕಾಲ್ದೆಗೆದರು. ಕುದುರೆಯ ಕಾಲಿನಲ್ಲಿ ನಟ್ಟಿದ್ದ ಬಾಣವನ್ನು ಕಿತ್ತಿ ತಲೆಗೆ ಸುತ್ತಿದ ಜರದವಸ್ತ್ರವನ್ನು ಹರಿದು ಅದರ

ಗಾಯಕ್ಕೆ ಕಟ್ಟಿ, ಹಿಂದಕ್ಕೋಡಿದ ಶತ್ರುಪಕ್ಷವನ್ನು ಬೆನ್ನಟ್ಟ ಬೇಕೆಂಬ ವಿಚಾರದಿಂದ, ರಾಜಪುತ್ರನು ಹಿಂದಿರುಗಿದನು. ಅಷ್ಟರೊಳಗೆ ಹತ್ತು ಹನ್ನೆರಡು ಮಾರುಗಳ ಅಂತರದಮೇಲೆ ಅಮೂಲ್ಯ ವಸ್ತ್ರಾಭರಣಗಳಿಂದ ಭೂಷಿತಳಾದ, ಬಾಣಬತ್ತಳಿಕೆಗಳಿಂದ ಸಜ್ಜಾದ ಓರ್ವ ಪ್ರೌಢತರುಣಿಯು, ಆಯುಧಗಳಿಂದ ಸಜ್ಜಾದ ನಾಲ್ಕೈದುಜನ ರಾಹುತರ ಮುಂಭಾಗದಲ್ಲಿ ತನ್ನನ್ನೇ ದೃಷ್ಟಿಸಿ ಆಶಾಪೂರ್ಣದೃಷ್ಟಿಯಿಂದ ನೋಡುತ್ತ ನಿಂತಿದ್ದನ್ನು ನೋಡಿದನು. ಹೊರಗಣ ದೃಷ್ಟಿಯಮೇಲೆ ಮುಗ್ಧನಾದ ಇವನಿಗೆ ಅವಳಅಂತರಂಗದ ದೃಷ್ಟಿಯು ಹೇಗೆತಾನೆ ಗೊತ್ತಾಗಬೇಕು. ಇದೆಲ್ಲವನ್ನುನೋಡಿ ಕುಮಾರನಿಗೆ ಬಹಳ ಆಶ್ಚರ್ಯವಾಯಿತು. ಪರಸ್ಪರ ದೃಷ್ಟಿಗಳು ಒಂದುಗೂಡಿದವು. ಅದಾಗ್ಯೂ ಮೊದಲು ಕಲೆತ ಮಾಲತಿಯದೃಷ್ಟಿಗೂ ಇವಳದೃಷ್ಟಿಗೂ ಭೂಮ್ಯಾಕಾಶದಷ್ಟು ಅಂತರ ವಿದ್ದಿತು. ಕುಮಾರನು ಅವಳನ್ನುದ್ದೇಶಿಸಿ, ಏನೋ ಮಾತಾಡುವವನು, ಅಷ್ಟರಲ್ಲಿ ಅವಳು ಪ್ರೇಮದಅವಿರ್ಭಾವವನ್ನು ತೋರಿಸಿ, ತಂತಿಯಂತೆ ಸಣ್ಣಾದ ತನ್ನ ವಾಣಿಯಿಂದ “ಅರಸುಮಕ್ಕಳು ಶತ್ರುಪಕ್ಷದ ಪ್ರದೇಶದಲ್ಲಿ, ಏಕಾಂಗಿಯಾಗಿ ತಿರುಗುವ ಹವ್ಯಾಸ ಮಾಡಬಾರದಾಗಿತ್ತು.” ಎಂದಳು.

ರಾಜಪುತ್ರನಿಗೆ ಮಿತಿಮೀರಿದ ಆಶ್ಚರ್ಯವಾಯಿತು. ಕೃತಜ್ಞತೆಯಿಂದ ಅವಳಕಡೆಗೆ ಮೋರೆದಿರುಪಿ “ಏನು? ನಾನುಯಾರಿರುವೆ ನೆನ್ನುವದನ್ನು ಅರಿತಿರುವಿರೋ?” ಎಂದನು. ಬಂದತರುಣಿಯು ತನ್ನ ಮೊದಲಿಣ ಧ್ವನಿಯಿಂದಲೇ “ಅಹದು; ಯಾರುತಮ್ಮ ಬಾಹುಬಲದಿಂದ ನಂದೀದುರ್ಗ, ವಿಜಯದುರ್ಗ, ಗಳನ್ನು ಹಾ ಹಾ ಅನ್ನುವರೊಳಗಾಗಿ ಜಯಿಸಿ, ಸುತ್ತುಮುತ್ತಲಿನ ಎಲ್ಲಪ್ರಾಂತವನ್ನು ಪಾದಾಕ್ರಾಂತಮಾಡಿ, ಚಾಲುಕ್ಯ ನಾಡುಗುಡಿಯನ್ನು ಮೆರೆಯುವಂತೆ ಮಾಡಿದರೋ, ಅವರೇ, ರಾಜಪುತ್ರರರು, ನನ್ನೆದುರಿನಲ್ಲಿ ನಿಂತಿರುವರು.”

ರಾಜಪುತ್ರನು ಕಿಂಚಿತ್ ಖಿನ್ನಸ್ವರದಿಂದ “ನಿಮ್ಮ ಶ್ಲಾಘನೆಗೆ ನಾನು ಎಳ್ಳಷ್ಟಾದರೂ ಅರ್ಹನಲ್ಲ; ನಿಜವಾಗಿ ಈ ಶೌರ್ಯವು ನನ್ನದಿಲ್ಲ

ಸಮರಣಾಂಗಣದಲ್ಲಿ, ಶತ್ರುಗಳಸಮ್ಮುಖದಲ್ಲಿ, ವೀರಾವೇಶದಿಂದಕಾದಿ, ವೀರಸ್ವರ್ಗವನ್ನು ಹೊಂದಿದ ಚಾಲುಕ್ಯವಂಶಜರ ಏಕನಿಷ್ಠಸೇವಕರದು— ನಾನು ಹೆಸರಿನಿಂದಷ್ಟೇ ದೊಡ್ಡವನಿರುವೆನು.

ಹೊಸತರುಣಿಯು— ಕುಮಾರರೇ! ಶಾಲೀನತೆಯು ತಮ್ಮ ಶೀಲಕ್ಕ ನುಗುಣವಾಗಿದೆ,

ಅವಳ ಮಧುರಭಾಷಣದಿಂದಲೂ ಕಡೆಗಣ್ಣನೋಟದಿಂದಲೂ, ರಣ ರಸಿಕನ ಮನಸ್ಸು ಅಲ್ಲೋಲ ಕಲ್ಲೋಲವಾಗ ಹತ್ತಿತು. ಅವಳ ಅಂತರಂಗ ದ ವಿಷಪೂರಿತಭಾಷಣ ಕೃತ್ರಿಮಕಡೆಗಣ್ಣನೋಟ, ಬಾಹ್ಯಾಡಂಬರಕ್ಕೆಬೆರ ಗಾದ ರಣರಸಿಕನಿಗೆ ಹೇಗೆತಾನೇಗೊತ್ತಾಗಬೇಕು. ರಾಜಪುತ್ರನನ್ನುತನ್ನ ಜಾಲದಲ್ಲಿ ಕೆಡುಹಿಕೊಳ್ಳುವದಕ್ಕಾಗಿ ನಾನಾಬಗೆಯಾಗಿ ವರ್ತಿಸುತ್ತಿದ್ದಳು.

ಮೊದಲಣ ಯುಗಗಳಲ್ಲಿ ತಮ್ಮ ಆತ್ಮೀಯಶಕ್ತಿಯನ್ನು ತಮ್ಮ ಸ್ವಾ ಧೀನದಲ್ಲಿಟ್ಟುಕೊಳ್ಳಲು, ಸಾಮರ್ಥ್ಯವಿರುವ, ಮಹಾನ್ ಮಹಾನ್ ರಾಜ ರ್ಷಿಗಳು, ಮಹರ್ಷಿಗಳು, ಕಾಂತೆಯರನ್ನು ನೋಡುತಲಿ ಮನಸೋಲುತ್ತಿ ರಲು, ಕಲಿಯುಗದಲ್ಲಿಯೂ, ಅದರಲ್ಲಿ ಅರಸುವಂಶದಲ್ಲಿಯೂ, ಜನಿಸಿದ, ನವಯೌವನ ತರುಣನಾದ ರಣರಸಿಕನಿಂದ "ಹೆಣ್ಣನ್ನು, ಹೊನ್ನನ್ನು, ಹಣ್ಣಾದ ಫಲಗಳನ್ನು ಕಣ್ಣಾರೆಕಂಡು ಬಯಸದ ಅಣ್ಣಗಳಾರು" ಎಂಬಂ ತೆ ಸಹಿಸುವದು ಹೇಗಾಗಬೇಕು.

ಗೌರವರ್ಣದ ಅಂಗಕಾಂತಿಯಿಂದ, ಉತ್ಸಾಹದ ಅಲಂಕಾರದಿಂದ, ಶೋಭಾಯಮಾನಳಾದ ತರುಣಿಯನ್ನು ನೋಡುತಲೆ ಇವನ ಚಿತ್ತವೃತ್ತಿ ಯು ಚಂಚಲವಾಗಿ ಕಣ್ಣುಬಡಿಯದೆ ಕುತೂಹಲ ದೃಷ್ಟಿಯಿಂದ ಅವಳನ್ನು ದಿಟ್ಟಿಸಿ ನೋಡುತ್ತನಿಂತನು. ಬಹಳಹೊತ್ತಿನವರೆಗೆ ಅವಳನ್ನು ಮಾತಾಡಿ ಸದೆ ಸುಮ್ಮನೆ ಇರುವದು ಇವನಿಂದಾಗಲಿಲ್ಲ. ಕೂಡಲೆ ಅವಳನ್ನುದ್ದೇಶಿಸಿ "ತರುಣಿ ನಿನ್ನವಾಸಸ್ಥಾನ ಯಾವುದು? ನಿನ್ನತಾಯಿ ತಂದೆಗಳಹೆಸರೇನು ಶಸ್ತ್ರಾಸ್ತ್ರದಿಂದ ಸಜ್ಜಾಗಿ ಹೀಗೆ ಒಮ್ಮಿಂದೊಮ್ಮೆ ಬರಲು ಕಾರಣವೇನು.? ಎಂದು ಆತುರದಿಂದ ಕೇಳಿದನು.

ಅವಳು ಕೋಮಲವಾದ ತನ್ನ ಕೈಯನ್ನೆತ್ತಿ 'ತಾವರೆಯ ದೇಟುಗಳಂತಿರುವ ತನ್ನಕೈಬೆರಳುಗಳಿಂದ " ಕುಮಾರ ಅತ್ತನೋಡಿರಿ! ಒಂದು ನೆಲಕೋಟೆ ಕಾಣಬರುವದಲ್ಲ; ಅದೇನಾನಿರುವಸ್ಥಳವು. ಮುಪ್ಪಿನತಂದೆಯ ಹೊರ್ತು ನನಗೆ ಇತರಯಾವ ಆಪ್ತ ಇಷ್ಟರೂ ಅಲ್ಲಿರುವದಿಲ್ಲ. " ಎಂದು ತೋರಿಸಿದಳು.

" ಈ ಕೋಟೆಯು, ನಾವು ಕೈವಶಮಾಡಿಕೊಂಡ ದುರ್ಗದ ಅಧಿಪತ್ಯದಕೆಳಗೆ ಇರುತ್ತಿರುವದೆಂದು ಕೇಳಿದ್ದೇನೆ " ಎಂದು ಅವಳನ್ನು ಮುಂದೆ ಮಾತಾಡಗೊಡದ ರಣರಸಿಕನು ಕೇಳಿದನು.

ಹೊಸತರುಣಿ— ಆಹುದು; ತಾವೆನ್ನುವದು ನಿಜವಿದೆ. ನನ್ನತಂದೆಯು ಮೊದಲು ಈ ದುರ್ಗದ ದುರ್ಗಾಧಿಪತಿ ಇದ್ದನು. ಇತ್ತಿತ್ತಲಾಗಿ ಸಂಸಾರದಿಂದ ಬೇಸತ್ತು, ತನ್ನಚಿತ್ತವನ್ನು ರಾಜಕಾರಣದಿಂದ ಪಾರಮಾರ್ಥದ ಕಡೆಗೆ ಹೊರಳಿಸಿ, ವಾನಪ್ರಸ್ಥಾಶ್ರಮಿ ಯಾಗಿರುವನು. ನಾನೋರ್ವಳೆ ಕೋಟೆಯಹೊರಗಣ ನಮ್ಮಮೊದಲಿನ ವಿಲಾಸಮಂದಿರದಲ್ಲಿ, ದಾಸ ದಾಸಿಯರಿಂದೊಡಗೂಡಿ ಇರುತ್ತೇನೆ.

ರಸಿಕ — ಚೆನ್ನಾಯಿತು ನಿಮ್ಮಹೆಸರೇನು?

ತರುಣಿ— ಹೆಸರು ತಿಳಿದುಕೊಳ್ಳುವದಕ್ಕಾಗಿ ಇಷ್ಟೊಂದು ವಿಚಾರ ! ' ನಾವೂ ನಿಮ್ಮಸೇವಕರೇ ?

ಕುಮಾರ— ಏನು? ನೀವೂನಮ್ಮಸೇವಕರೇ? ನಿಮ್ಮಮಾತಿನ ಅರ್ಥವೇ ತಿಳಿಯದಂತಾಗಿದೆ. ತರುಣಿಯು ನಡುವೆ ಬಾಯಿಹಾಕಿ " ನನ್ನನ್ನು ಮೋಹಿನಿ " ಎಂದು ಕರೆಯುವರು.

ಅವಳನ್ನು ಎವೆಇಕ್ಕದೆ ನೋಡುತ್ತ ಸಹಾಸ್ಯವದನದಿಂದ ರಣರಸಿಕನು " ಆಹಹ! ವಿಧಾತನು ತನ್ನ ಕೌಶಲ್ಯವನ್ನು ನಿಜವಾಗಿ ಇವಳಲ್ಲಿಯೇ ತೋರಿಸಿರುವನು. ಹೆಸರಾದರೂ ರೂಪಕ್ಕೆತಕ್ಕಂತೆ ಇರುವದು. "

ಮೋಹಿನಿಯು ಮುಗುಳುನಗೆ ನಗುತ್ತ ರಾಜಪುತ್ರನು ಪೂರ್ಣ ತನ್ನ ಮೋಹಜಾಲದಲ್ಲಿ ಬಿದ್ದಿರುವನೆಂದು ತಿಳಿದು " ರಾಜಪುತ್ರರೇ ! ತಮ್ಮ

ಶೌರ್ಯ ಸಾಹಸ ಓದಾರ್ಯಾದಿ ಗುಣಗಳನ್ನು ಕೇಳಿದ್ದೇನೆ ರಾಜವಂಶದಲ್ಲಿ ಇಂಥಪುರುಷರು ಜನ್ಮಿಸುವದು ಅಪರೂಪ ಎಂದು ನುಡಿದಳು.

ರಸಿಕ— ಇಷ್ಟೊಂದು ಹೊಗಳಿ ಸುಮ್ಮನೆ ನನ್ನನ್ನು ಮೇಲಕ್ಕೇರಿಸಲು ನಾನೇನು ಅಂಥ ದೊಡ್ಡಕೆಲಸವನ್ನು ಮಾಡಿರುವೆನು.

ಮೋಹಿನಿ— "ಸತ್ಪುತ್ರರು ತಮ್ಮನ್ನುತಾವು ಎಂದೂ ಸಮರ್ಥಿಸಲಾರರು. ಇದಿರಲಿ ಕುಮಾರ; ತಮ್ಮೆಡೆಯಲ್ಲೊಂದು ವಿಜ್ಞಾಪನೆ ಇರುವದಲ್ಲ" ಎಂದು ಗೋಣು ಅಲ್ಲಾಡಿಸುತ್ತ ಪ್ರೇಮಭಾವದಿಂದ ಕೇಳಿದಳು.

ರಸಿಕ— ಅವಕೆಲಸವು, ಕ್ಷುಲ್ಲಕ ಕೆಲಸದಸಲುವಾಗಿ ಇಷ್ಟೊಂದು ಪ್ರಸ್ತಾವನೆಯೇ? ತೀವ್ರಹೇಳು. ನಿನ್ನಿಂದ ಉಪಕಾರಬದ್ಧನಾದ ರಣರಸಿಕನು. ನೀನುಹೇಳುವ ಮೊದಲು ಕೆಲಸಮಾಡಲು ಹಾತೊರೆಯುತ್ತಿರುವನು

ಮೋಹಿನಿ— ಮತ್ತೇನುಇಲ್ಲ; ಚಾಲುಕ್ಯ ರಾಜಪುತ್ರರು ಒಂದುಸಾರೆ ನನ್ನಲ್ಲಿಬಂದು ಬಡವರಿಂದಾಗುವ ಆದರಾತಿಥ್ಯವನ್ನು ಸ್ವೀಕರಿಸಬೇಕೆಂದು ಉತ್ಕಟೇಚ್ಛೆ.

ರಣರಸಿಕನಿಗೆ ಏನು ತೋಚದಂತಾಗಿ ತುಸು ಗೊಂದಲದಲ್ಲಿಬಿದ್ದನು ಅವನು ಏನೋಮಾತಾಡಬೇಕೆಂದು ವಿಚಾರ ಮಾಡುತ್ತಿದ್ದನು. ಇಷ್ಟರಲ್ಲಿ ಅವಳಹಿಂದೆ ನಿಂತಿದ್ದ ಓರ್ವ ದಿನಹೋದ ಸೇವಕನು ಮುಂದೆಬಂದು ತಲೆವಾಗಿ ಮುಜುರೆಮಾಡಿ "ದೇವರೇ! ಹೊತ್ತು ಬಹಳಾಗಿದೆ ಹಸಿವೆ ನೀರಡಿಕೆಯಾಗಿರಬಹುದು. ನಮ್ಮ ಒಡತಿಯ ಕೇಳಿಕೆಯ ಮೇರೆಗೆ ತಾವು ಬರಲೇಬೇಕು.

ಮೋಹಿನಿಯು ಓರೆಗಣ್ಣಿನಿಂದ ನೋಡುತ್ತ "ಕುಮಾರ! ನಮ್ಮಲ್ಲಿ ಬರಲು ಇಷ್ಟುಸಂಕೋಚ ಗೊಳ್ಳಬಾರದು. ನನ್ನ ಪೂರ್ವಜರು ಪೂರ್ವದಲ್ಲಿ, ಚಾಲುಕ್ಯ ಸಾರ್ವಭೌಮರ ಪದರಿನಲ್ಲಿ ಓರ್ವ ನಾಮಾಂಕಿತಸೇನಾನಿಯಾಗಿ ಮೆರೆದವರೇ! ವೆಂಗೀರಾಯರ ಅನ್ನವನ್ನಾದರೂ ನಾವು ಉಂಡಿರುವೆವು" ಎಂದು ನುಡಿದಳು.

ರಸಿಕ— ಏನು? ನಿನ್ನ ಜನ್ಮದಾತೃಗಳು ಸಾರ್ವಭೌಮರ ಪ್ರಸಿದ್ಧ ಸೇನಾನಿಗಳೇ?

ಮೋಹಿನಿ— ಅಹುದು, ಸಧ್ಯಕ್ಕೆಮಾತ್ರ ರಾಜಕಾರಣದಿಂದ ಮುಕ್ತರಾಗಿ, ಆಧ್ಯಾತ್ಮಿಕ ಸಾಧನದಲ್ಲಿ ಕಾಲಕಳೆಯುತ್ತಿದ್ದಾರೆ.

ರಸಿಕ— ಹಾಗಾದರೆ ಅವರು ನಮ್ಮ ರಾಜಧಾನಿಯಿಂದ ಹೊರಹೊರಡಲು ಕಾರಣವೇನು ?

ಮೋಹಿನಿ— ಇದೆಲ್ಲವೂ ನನಗೆ ತಿಳಿಯದು. ನಾನು ಹುಟ್ಟುವ ಮೊದಲೇ ವರ್ತಿಸಿದಸಂಗತಿ, ಪುಲಕೇಶಿ ಸಾರ್ವಭೌಮರನಿಧನ ದನಂತರ, ಸಿಂಹಾಸನವನ್ನೇರಿದ ಸಾರ್ವಭೌಮರೇ ನನ್ನತಂದೆಯನ್ನು ಮನೆಯಲ್ಲಿ ಕುಳಿತುಕೊಳ್ಳುವಂತೆ ಮಾಡಿದರು.

ರಣರಸಿಕನು ಸಂಶಯ ಚಕಿತನಾಗಿ “ ಏಕೆ? ಹೀಗೇಕೆಮಾಡಿದರು; ಆರೋಪವನ್ನೇನಾದರೂ ಹೊರಿಸಿದರೇ? ”

ಮೋಹಿನಿ— ಇಲ್ಲ. ಯಾವಬಗೆಯ ಆರೋಪವೂ ಇಲ್ಲ, ಸಾವಾರಾಗೆ ನನ್ನ ತಂದೆಯು ಬೇಡಾಗಿದ್ದಂತೆ ತೋರುತ್ತದೆ; ಯಾವಕಾರಣದಿಂದಲೋ ಅದನ್ನು ನಾನರಿಯೆ. ಆದುದರಿಂದಲೇ— ರಸಿಕ—ಅಲ್ಲಿದ್ದ ಮನೆಮಾರು ಬಿಟ್ಟು ನೀವು ಇಲ್ಲಿವಸತಿ ಮಾಡಲು ಕಾರಣವೇನು?

ಮೋಹಿನಿ— ನನ್ನತಂಡೆಯು ಸಭಾಸ್ಥಾನದಿಂದ ಹೊರಬೀಳುತಲೇ ಸಿಟ್ಟಿನಿಂದ ಇತ್ತಕಡೆಗೆಯೇಬಂದನು. ಈಗ್ರಾಮವು ನನ್ನ ಅಜ್ಜಂದಿರ ಜಾಹಗೀರಿಯ ಗ್ರಾಮವು. ನನ್ನ ಅಜ್ಜಂದಿರಿಗೆ ನನ್ನತಾಯಿಯು ಓರ್ವಳೇ ಮಗಳು, ಆದುದರಿಂದ ನನ್ನತಂದೆಯು ಅಜ್ಜಂದಿರ ಒತ್ತಾಯದ ಮೇರೆಗೆ ಇಲ್ಲಿಯೇ ಕಾಲೂರಿದರು.

ರಣರಸಿಕನು, ನಿರಾಶಾ ಜನಕಸ್ವರದಿಂದ “ ಇಲ್ಲಿ ಇರಹತ್ತಿದಮೇಲೆ ನಂದರಾಜರ ಚಾಕರಿಯನ್ನು ಪತ್ಕರಿಸಿರಬಹುದು. ”

ಮೋಹಿನಿ— ಇಲ್ಲ! ನಿಜವಾಗಿಇಲ್ಲ!! ಅಜ್ಜಂದಿರ ನಿಧನದನಂತರ ಈ ದುರ್ಗದ ದುರ್ಗಾಧಿಪತ್ಯವು ನನ್ನತಂದೆಗೆ ದೊರೆತದ್ದೇನೂ ನಿಜ, ಆದರೆ ಆಧಿಪತ್ಯವನ್ನು ಪತ್ಕರಿಸಲು ಒಪ್ಪಿಗೆಯನ್ನೀಯಲಿಲ್ಲ.

ರಸಿಕ— ಒಪ್ಪಿಗೆಯನ್ನೀಯದಿರಲು ಕಾರಣವೇನು?

ಮೋಹಿನಿ— ಕಾರಣವನ್ನು ಹೇಳಲೋ ? ನನ್ನತಂದೆಯು ತಮ್ಮ ಪೂರ್ವಜರ ಅನ್ನವನ್ನುಂಡು, ಅವರಿಂದ ಸಂರಕ್ಷಿತ ರಾದುದರಿಂದ, ಎದ್ರು ರಾಳಿಗಳ ಸೇವೆಯನ್ನು ಪತ್ಕರಿಸಿ, ಪ್ರಸಂಗವಶಾತ್ ಅನ್ನದಾತೃವಿನ ಮೇಲೆ ಶಸ್ತ್ರಸಾಗಿಸುವದು ಹೇಗಾಗಬೇಕು; ಅವರು ಸಹಸಾ ಒಡಂಬಡಲಿಲ್ಲ.

ರಸಿಕನು— ದುಃಖೋದ್ಗಾರದಿಂದ "ಕುಬ್ಜರಾಯರು ರಾಜ್ಯದೊಳಗಣ ಇಂಥಪ್ರಾಮಾಣಿಕ ಸ್ವಾಮಿಭಕ್ತರನ್ನು ದೇಶಭ್ರಷ್ಟಮಾಡಿದರೇ?"

ಮೋಹಿನಿಯು ಕುಮಾರನ ಮಾತುಗಳನ್ನು, ಕೇಳದಿದ್ದಂತೆ ನಟಿಸಿ "ರಾಜಪುತ್ರರೇ! ನನ್ನತಂದೆಯು ಚಾಕರಿಯವಿಷಯಕ್ಕೆ ಕಠೋರ ಮಾತುಗಳನಾಡುತಲೆ, ನಂದರಾಜರಿಗೆ ಸಿಟ್ಟುಬಂದಿತು. ಸಿಟ್ಟಿನಭರದಲ್ಲಿ ನನ್ನ ಅಜ್ಜಂದಿರ ಜಾಹಗೀರಿಯನ್ನೂ, ಅವರ ಸ್ಥಾವರ ಜಂಗಮ ಆಸ್ತಿಯನ್ನೂ ಶೆಳೆದುಕೊಂಡರು. ತಮ್ಮಕಡೆಯಿಂದೋರ್ವ ಹೊಸದುರ್ಗಾಧಿಪತಿಯನ್ನು ಕಳುಹಿದರು. ಅವನೇ ಮುಂದೆ ಕುಬ್ಜರಾಯರವಶದಲ್ಲಿದ್ದ ಈ ಭಾಗದಮೇಲೆ ದಾಳೀಮಾಡಿ ಸೆಳೆದುಕೊಂಡನಂತೆ. ಮುಂದೆ ನನ್ನತಾಯಿಯೂ ತೀರಿದಳು; ಅಂದಿನಿಂದ ನನ್ನ ತಂದೆಯ ಪ್ರಕೃತಿಯು ಪೂರ್ಣಬದಲಾಯಿತು. ಐಹಿಕಸುಖ ಸಾದನದ ಎಲ್ಲವಿಷಯವನ್ನೂ ಬಿಟ್ಟುಕೊಟ್ಟರು. ಇಗ್ಗೆ ಯಾವಾಗಲೂ ಏಕಾಂತವಾಸದಲ್ಲಿಯೇ ಕಾಲ ಕಳೆಯುತ್ತಾರೆ "

ರಸಿಕ— ಮೋಹಿನಿದೇವಿ! ನಿಮ್ಮ ಪೂರ್ವವೃತ್ತಾಂತವು ಬಹು ಹೃದಯಸ್ಪರ್ಶವಾಗಿದೆ. ನಡೆಯಿರಿ, ಈಹೊತ್ತುನಾನು ನಿಮ್ಮಲ್ಲಿಯೇ ಉಣ್ಣುವೆನು. ಆದರೆ ನನ್ನನ್ನು ಕೋಪಿಸಕೂಡದು. ಮತ್ತು ನನ್ನಪೂರ್ವಜ್ಞರು ಮಾಡಿದ ಘನ ಘೋರ ಅಪರಾಧಕ್ಕಾಗಿ ನನ್ನನ್ನು ಕ್ಷಮಿಸಬೇಕು. ಗತಿಸಿದ ಅಪರಾಧದ ಪರಿಮಾರ್ಜನೆ ಯಾಗುವಹಾಗಿದ್ದರೆ. ನನ್ನನ್ನು ನಾನುಭಾಗ್ಯಶಾಲಿಎಂದು ತಿಳಿಯುವೆನು. ನಡೆಯಿರಿ. ಇನ್ನುವಿಲಂಬವೇಕೆ ?

ನೇತ್ರಸಂಕೇನ್ನು ಮಾಡುತಲಿ ಓರ್ವಕಾಲಾಳು ಮುಂದೆಬಂದು, ಅವನೇರಿದ ಕುದುರೆಯ ಕಡಿವಾಣವನ್ನು ಹಿಡಿದುಕೊಂಡು ಮುಂದೆ ಸಾಗಿದನು. ಉಳಿದರಾಹುತರು ಇವರನ್ನು ಹಿಂಬಾಲಿಸಿ ನಡೆದರು. ಮುಂದೆ ತುಸುಹೊತ್ತಿನಲ್ಲಿಯೇ ಮೋಹಿನಿಯ ನಿವಾಸಸ್ಥಾನಕ್ಕೆ ಬಂದುತಲುಪಿದರು

✣ ✣ ✣ ✣ ✣ ✣ ✣ ✣

ಮನ ಮೋಹಿನಿಯ ನಿವಾಸಸ್ಥಾನವು ನಿಜವಾಗಿ ಓರ್ವ ರಾಜಪುತ್ರಿಯ, ಅರಮನೆಯನ್ನು ಹೋಲುತ್ತಿತ್ತು. ನಾಲ್ಕೂಕಡೆಗೆ ನಾನಾವಿಧ ಸುಗಂಧಮಯ ಹೂಗಳಿಂದ ಸುಶೋಭಿತವಾದ, ಸುಂದರಉಪವನದ ನಡುವೆ ಎತ್ತರದ ಮೇಲೆ, ಸಣ್ಣದಿದ್ದರೂ, ಅಚ್ಚುಕಟ್ಟಾದ ಅವಳ ಮಂದಿರವಿತ್ತು. ಉಪವನದ ನಾಲ್ಕುಕಡೆಗೆ ಅದರ ರಕ್ಷಕರ ಸಣ್ಣಸಣ್ಣ ಗುಡಿಸಲುಗಳು ಕಾಣಬರುತ್ತಿದ್ದವು. ಗ್ರಾಮದ ತುಸು ಅಂತರದಮೇಲೆ, ಮೋಹಿನಿಯ ಈ ಮಂದಿರವು ಒಂದು ಮೂಲೆಯಲ್ಲಿತ್ತು. ಮಂದಿರದ ಪಶ್ಚಿಮಭಾಗವು ಕೋಟೆಯ ಗೋಡೆಯ ಒಂದುಭಾಗಕ್ಕೆ ಹೊಂದಿದ್ದು, ಹತ್ತಿರದಲ್ಲಿಯೇ ದುರ್ಗದೊಳಗೆ ಪ್ರವೇಶಿಸಲು, ದೊಡ್ಡ ಅಗಸೆಯ ಬಾಗಿಲು ಇದ್ದಿತು. ಈಮೇಲಣ ಪಶ್ಚಿಮ ದಿಕ್ಕಿನ ಕೋಟೆಯ ಕೆಳಭಾಗದಲ್ಲಿ ಗ್ರಾಮರಕ್ಷಕರು,ದುರ್ಗನಾಯಿಕನು ಕೆಲವುಕಾಲಾಳುಗಳು ಇರುತ್ತಿದ್ದು,ಮೇಲಣಕೋಟೆಯ ಭಾಗದಲ್ಲಿರುವ ಮನೆಯು ದುರ್ಗಾಧಿಪತಿಯು ಇರಲು ಕಟ್ಟಿಸಿರಬಹುದೆಂದು ತೋರುತ್ತಿತ್ತು ಮಂದಿರವು ಸಣ್ಣದಾಗಿದ್ದರೂ, ನೋಡುವವರ ಚಿತ್ತಾಕರ್ಷ ಮಾಡುವಂತಿದ್ದಿತು. ವನಗಾಳಿಯು ಚೆನ್ನಾಗಿ ಬೀಸುತ್ತಿದ್ದುದರಿಂದ, ಅಲ್ಲಿಸಂಚರಿಸುವ ಪ್ರತಿಯೊಬ್ಬನ ಮನಸ್ಸಿಗೂ ಒಂದು ಪ್ರಕಾರದ ಮನಃಶಾಂತಿ ಯಾಗುತ್ತಿತ್ತು. ರಣರಸಿಕನು ಕುಳತಿದ್ದ ರಂಗಮಂಟಪವು ನೋಡುವಂತಿತ್ತು. ನೆಲದ ಮೇಲೆ ಜಮಕಾನೆಯನ್ನುಹಾಸಿ ಅದರಮೇಲೆ ರತ್ನಗಂಬಳಿಯನ್ನು ಹಾಸಿದ್ದರು. ರತ್ನಗಂಬಳಿಯಮೇಲೆ ಬೆಳ್ಳಗಿನ ಮಲಮಲಿಯ ಹೊದಿಕೆಇದ್ದು, ಮೆತ್ತಗಿನ ಗಾದಿಯನ್ನುಹಾಸಿ ಗೋಡೆಗೆ ಲೋಡು ದಿಂಬುಗಳನ್ನಿಟ್ಟದ್ದರು. ಗಾದಿಯಮೇಲೆ ಲೋಡಿಗೆ ಆತುಕೊಂದು ರಣರಸಿಕನು ಗೋಡೆಗೆ ತಗಲಿಸಿರುವ, ಭವ್ಯವಾದ ಚಿತ್ರಪಟಗಳನ್ನು ನೋಡುತ್ತ ಸುಮ್ಮನೆ ಕುಳಿತುಕೊಂ

ಡಿದ್ದನು, ಹತ್ತಿರದಲ್ಲಿಯೇ ತುಸುದೂರದಮೇಲೆ ಮೋಹಿನಿಯು ಮರ್ಯಾದೆಯಿಂದ ಕುಳಿತುಕೊಂಡಿದ್ದಳು. ಅತ್ತಿತ್ತನೋಡುತ್ತ ಮೌನವ್ರತದಿಂದ ರಾಜಪುತ್ರನು ಕುಳಿತಿರುವದನ್ನು ನೋಡಿ, ಮೋಹಿನಿಯು ''ತಾಸರ್ಧತಾಸಿನಲ್ಲಿ ಭೋಜನದ ಸಿದ್ಧತೆಯಾಗಬಹುದು, ಅನುವರೆಗೆ ತಮ್ಮ ಮನಸ್ಸಿಗೆಬಂದರೆ, ಕೋಟೆಕೊತ್ತಳಗಳನ್ನು ನೋಡಲು ಬರುವಂತಿದೆ'' ಎಂದು ಮೃದುಸ್ವರದಿಂದ ನುಡಿದಳು.

ರಣರಸಿಕನು ಮನಮೋಹಿನಿಯು ಮನಚಲಿಸುವ ಸವಿನುಡಿಗಳಿಂದಲೂ ಅವಳ ಮಾಡುವ ಒನಪು ಒಯ್ಯಾರಗಳಿಂದಲೂ ತುಸು ಸಂಚಲನೇ ಆಗಿದ್ದನು. ಅವನ ಮನಸ್ಥಿತಿಯನ್ನು ಚಾಣಾಕ್ಷಳಾದ ಇವಳು ಈಮೊದಲೇ ಅರಿತಿದ್ದಳು. ಅವಳ ಅಚ್ಚುಕಟ್ಟಾದ ಅವಯವಗಳನ್ನು ಕದ್ದು ನೋಡುತ್ತ ''ಮೋಹಿನಿದೇವಿ! ನಿನ್ನಂತೆಯೇ ನೀನಿರುವ ಈ ನಿವಾಸಸ್ಥಾನವನ್ನೂ ನಿನ್ನ ಈ ರಂಗಮಂಟವನ್ನೂ ನೋಟುತಲಿ ಹಸಿವೆ ನೀರಡಕೆಗಳು ಹರೆದುಹೋಗುತ್ತವೆ ನಿಜವಾಗಿ ಈ ಸ್ಥಳವು ಮನಸ್ಸಿಗೆ ಆಲ್ಹಾದವನ್ನುಂಟು ಮಾಡುವಂತಿದೆ. ಕೋಟೆ ಕೊತ್ತಳಗಳನ್ನು ತೋರಿಸುವನೆಂದೆ ಎಲ್ಲಿ? ನಡೆಹೋಗುವ ಈ ಅಲ್ಪಾವಧಿಯಲ್ಲಿಯೇ ನಿನ್ನ ಈ ಸಹವಾಸದಿಂದ ಮನಸ್ಸಗೆ ಒಂದುಬಗೆಯ ಸಮಾಧಾನಸಿಕ್ಕಂತಾಗಿದೆ. ಇಷ್ಟರಲ್ಲಿ ಧಿಪ್ಪಾಡ ಅವಯವದ, ಇಳಿಕೆಯ ಅಂಗದ ಐವತ್ತರ ಒಳಹೊರ ವಯಸ್ಸಿನ ಓರ್ವ ಸಶಸ್ತ್ರ ಮನುಷ್ಯನು ನೆಟ್ಟಗೆ ಇವರೀರ್ವರಿದ್ದಲ್ಲಿಬಂದು, ವಿನಯದಿಂದ ಮುಜುರೆಮಾಡಿ, ನಮ್ರತೆಯಿಂದ ತಲೆಬಾಗಿ ನಿಂತುಕೊಂಡನು.

ರಾಜಪುತ್ರನು, ಅವನ ಮುಜುರೆಯನ್ನು ಸ್ವೀಕರಿಸಿ, ಮೋಹಿನಿಯ ಕಡೆಗೆ ಮೋರೆದಿರುವಿ ದೇವಿ! ಇವನು ಆವನಿರುವನು?

ಮೋಹಿನಿ— ಇವರಾದರೂ ನನ್ನ ಮುತ್ತಜ್ಜನ ಕಾಲದೊಳಗೆ ನಂದರ ಕೈವಶದಲ್ಲಿದ್ದ ಈ ಪ್ರಾಂತದೊಳಗಣ ಸೈನ್ಯದ ದಳವಾಯಿ ಯಾಗಿದ್ದರು ಪ್ರಸ್ತುತ ಇವರೂ ಸುಮ್ಮನೆ ಕುಳಿತುಕೊಂಡಿರುವರು. ನನ್ನತಂದೆಗೂ ಇವರಿಗೂ ನಿಕಟಸ್ನೇಹವಿದ್ದು, ಯಾವಾಗಾದರೊಮ್ಮೆ ನಾನಿದ್ದೆಡೆಗೆ ಬಂದು ಹೋಗುವರು.

ಅಪರಿಚಿತ— ಹೌದು; ಈ ಹೊತ್ತಿಂತೂ ಹೆಚ್ಚಿನ ಕಾರಣ ದಿಂದಲೇ ಬರಬೇಕಾಯಿತು. ಏಕಂದರೆ ಚಾಲುಕ್ಯ ವಂಶದ ಓರ್ವ ರಾಜಪುತ್ರನು ಶೌರ್ಯದಿಂದ ನಂದೀದುರ್ಗ, ವಿಜಯದುರ್ಗ, ಹಾಗೂ ಅವುಗಳ ಸುತ್ತು ಮುತ್ತಲಿನ ಬೆಳೆಯುಳ್ಳ ಪ್ರದೇಶವನ್ನು, ಪಾದಾಕ್ರಾಂತಮಾಡಿ, ಅಲ್ಲಿತನ್ನ ನಾಡಗುಡಿ ಮೆರೆಯುವಂತೆ ಮಾಡಿರುವನಂತೆ. ಆಹೆಚ್ಚು ಕಡಿಮೆಯವೇಳೆ ಯಲ್ಲಿ, ಬಾಲಿಕೆಯ ಸ್ಥಿತಿ ಏನಾಗಿರುವದೆಂದು ತಿಳಿದು ಧಾವಿಸಿ ಅವಸರದಿಂ ದ ಇಲ್ಲಿಗೆಬಂದೆನು ಎಂದು ಕರ್ಕಶಧ್ವನಿಯಿಂದ ನುಡಿದನು.

ರಣರಸಿಕ— ಆದರೆ ನಿರಾಪರಾಧಿ ನಿಶ:ಸ್ತ್ರಗಳಾದ ಪ್ರಜರಿಗೂ, ಸ್ತ್ರೀ ಯರಿಗೂ ಹುಡುಗರಿಗೂ ಸಣ್ಣ ಸಣ್ಣ ಮಕ್ಕಳಿಗೂ ಯಾವಬಗೆಯ ತೊಂ ದರೆಯನ್ನೂ ಕೊಡಬಾರ ದೆಂಬಗಾಗಿ ಪ್ರತಿಯೊಬ್ಬ ವೆಂಗೀಯ ಸೈನಿಕನಿಗೆ ಕಟ್ಟಪ್ಪಣೆ ಮಾಡಿರುತ್ತದೆ ಎಂದು ತುಸು ಅಧಿಕಾರಯುಕ್ತ ಸ್ವರದಿಂದನುಡಿ ದನು.

ಒಪ್ಪಿಗೆಯ ಸ್ವರದಿಂದ ಬಂದವ್ಯಕ್ತಿಯು, “ ಹೌದು ! ಸೈನಿಕರಿಗೆ ಇದರಂತೆ ಕಟ್ಟಪ್ಪಣೆ ಇದ್ದರೆ ತೀರಿತು. ಬಹಳ ಹೇಳುವದೇನು ನಿಜವಾಗಿ ಆರಾಜಕುಮಾರನಾದರೂ ಬಹಳ ಸಜ್ಜನನೂ, ಉದಾರಿಯೂ, ನ್ಯಾಯ ಪಕ್ಷಪಾತಿಯೂ ಇರುವನಂತೆ, ಹೇಗೇಇರಲಿ, ಇದುಕದನವಿದೆ; ಈ ನನ್ನ ಪ್ರಿಯಮಿತ್ರನಮಗಳು, ನನ್ನ ಮಗಳೆಂದರೂ ಸರಿ; ಇವಳಸ್ಥಿತಿ ಏನಾಗಿರ ಬಹುದು ಎಂದು ತಿಳಿದುಕೊಳ್ಳಲು ಬಂದೆನು.

ನಾಚಿಕೆಯಿಂದ ನೆಲವನ್ನುನೋಡುತ್ತ ಮುದುಕನನ್ನುದ್ದೇಶಿಸಿ ಮೋ ಹಿನಿಯು “ ಅವರೇ ಈ ರಾಜಪುತ್ರರು. ನಮ್ಮ ಅತಿಥ್ಯಕ್ಕೆ ಆನಂದದಿಂದ ಒಪ್ಪಿಗೆಯನಿತ್ತು ಇಲ್ಲಿಯವರೆಗೆ ಬಂದಿರುವರು. ” ಎಂದು ನುಡಿದಳು.

ಮೋಹಿನಿಯ ಶಬ್ದಗಳು ಆ ಮುದುಕನ ಕಿವಿಗಳನ್ನು ಪ್ರವೇಶಿಸುತಲೆ ಅವನು ತುಸು ದಿಗುಲು ಗೊಂಡವನಂತೆ ಹಿಂದಕ್ಕೆ ಸರಿದುನಿಂತು, ಮೈ ರ್ಯಾದೆಯಿಂದ ಕೈಜೋಡಿಸಿ, “ ಯುವರಾಜರೇ! ಅತುಲ ಪರಾಕ್ರಮವ ನ್ನುಕೇಳಿ ಒಂದುಸಾರೆ ತಮ್ಮನ್ನು ಕಣ್ಣುಟ್ಟನೋಡಬೇಕೆಂಬ ಇಚ್ಛೆಯು ಪ್ರಬಲವಾಗಿದ್ದಿತು, ದೇವರು ನನ್ನಮನೀಷೆಯನ್ನು ಪೂರ್ಣಗೊಳಿಸಿದನು.

“ ಮನಮೋಹಿನಿಯು ನಡುವೆ ಬಾಯಿಹಾಕಿ ” ಚಿಕ್ಕಪ್ಪನವರೇ ! ಕುಮಾರರು ಈಹೊತ್ತು ಇಲ್ಲಿಯೇಇರುವರು. ಸಂಜೆಯಮುಂದೆ ಕೋಟೆ ಕೊತ್ತಳಗಳನ್ನು ತೋರಿಸುತ್ತೇನೆ; ಆದುದರಿಂದ ಹೆಗ್ಗಡೆಗೆ ಅಗಸೆಯಹಾಗೂ ದಿಡ್ಡಿಯಬಾಗಿಲಗಳನ್ನು ತೆರೆಯಬೇಕೆಂಬದಾಗಿ ಹೇಳಬೇಕು. ”

ಕುಮಾರ— ಏನು ? ಸರದಾರರೇ! ದೇವಿಯವರ ತಂದೆಯು ಈಗ ಬರಬಹುದಲ್ಲವೇ ? ಅವರಬೆಟ್ಟಿಯ ಉತ್ಸುಕತೆಯು ಪ್ರಬಲವಾಗಿರುವದು ಎಂದುಕೇಳಿದನು.

ಅವನು ಕಣ್ಣುಗಳನ್ನು ತೆರೆದು ಮೋಹಿನಿಯ ಕಡೆಗೆ ನೋಡುತ್ತ, ನನ್ನಕೈಲಾದಮಟ್ಟಿಗೆ ಪ್ರಯತ್ನಮಾಡಿ ನೋಡುವೆನು; ಏಕೆಂದರೆ ಇತ್ತಿತ್ತಲಾಗಿ ಅವರು ಪ್ರಾಪಂಚಿಕ ವಿಷಯದ ಹಂಬಲವನ್ನು ಬಿಟ್ಟು. ಯತಿ, ವೃತ್ತಿಯುಳ್ಳವರಾಗಿದ್ದಾರೆ. ಸಾಂಸಾರಿಕ ವಿಷಯದ ಮಾತು ಕತೆಗಳು ಅವರಿಗೆ ಸ್ವಲ್ಪಾದರೂ ರುಚಿಸವು. ಪ್ರಯತ್ನವಂತೂ ಮನಃಪೂರ್ವಕ ಮಾಡಿ ನೋಡುವೆನು. ಎಂದು ಹೇಳಿ ಹೊರಗೆ ಹೊರಟನು.

ರಾಜಪುತ್ರನ ದೃಷ್ಟಿಯಾದರೂ ಅವನಕಡೆಗೆಯೇ ಇತ್ತು. ಅವನು ಹೋಗಹೋಗುತ್ತ ಒಂದೆರಡುಸಾರೆ ಹೊರಳಿ ತನ್ನ ಹದ್ದಿನಂತಹ ತೀಕ್ಷ್ಣದೃಷ್ಟಿಯಿಂದ ರಾಜಪುತ್ರನನ್ನು ನೋಡಿದನು. ಅವನು ಕಾಣದಹಾಗಾದಮೇಲೆ ರಸಿಕನು ಮೋಹಿನಿಯನ್ನುದ್ದೇಶಿಸಿ “ ಮುದುಕನು ತುಸು ನಿಷ್ಠುರನು ದರ್ಪೋಕ್ತಿಯುಳ್ಳವನು ಇದ್ದಂತೆ ತೋರುತ್ತದೆ ” ಎಂದನು.

ಮೋಹಿನಿ— ರಾಜಪುತ್ರರೇ! ನೋಡುವವರಿಗೆ ಅವನು ನಿಷ್ಠುರನಂತೆ ಕಾಣುತ್ತಾನೆ. ಅವನಂಥ ಅಂತಃಕರುಣ ಪ್ರಾಣಿಯನ್ನು ನಾನು ಇದುವರೆಗೆ ಕಾಣೆ. ನನ್ನಮೇಲಂತೂ ಅವನ ಪ್ರೇಮ ಬಹಳ. ನನ್ನವಿಷಯಕ್ಕೆ ಜೀವಕ್ಕೆ ಜೀವಕೊಡಲು ಸಹ ಸಿದ್ಧನಿರುವನು.

ರಸಿಕ— ಇದ್ದರೂ ಇರಬಹುದು ಅವರಹೆಸರೇನು?

ಮೋಹಿನಿ— ಅವನಿಗೆ ದುಷ್ಟಬುದ್ಧಿ ಎನ್ನುವರು. ಅವನು ಬಹಳ ಶೂರನೂ ಸಾಹಸಿಯೂ, ಪ್ರಸಂಗಬಿದ್ದಲ್ಲಿ ಜೀವಕ್ಕೆ ಜೀವಕೊಡುವ ಎದೆಗಾರನಿರುವನು. ಇಲ್ಲಿಯ ಸಮೀಪದ ಹಳ್ಳಿಯೇ ಆತನ ವಸತಿಸ್ಥಾನ.

ಕುಮಾರ— ಹಾಗಾದರೆ ಅವರಿಗೆ ಈಪ್ರಾಂತದ ಎಲ್ಲ ಮಾಹಿತಿಯು ಇರಬಹುದು.

ಮೋಹಿನಿ— ಇರದೇ ಏನು? ನಂದರಾಜರ ವಶದಲ್ಲಿ ಇರುವ ಪ್ರಾಂತದ ಮಾಹಿತಿಯಾದರೂ ಚೆನ್ನಾಗಿಇರುವದು. ಇಲ್ಲಿಹರಿಯುವ ನದಿಹೊಳೆ ಹಳ್ಳಗಳೂ, ಇಲ್ಲಿಯ ಕೆರೆಕಾಲುವೆಗಳೂ, ಕೊಳ್ಳಗವಿಗಳೂ, ಅಡಿಗಿಕೊಳ್ಳುವ ಸ್ಥಳಗಳು ಇವೆಲ್ಲವನ್ನು ಅವನು ನೋಡಿರುವನು.

ಕುಮಾರನು— ಆನಂದಾತಿಶಯದಿಂದ, ತನ್ನಷ್ಟಕ್ಕೆತಾನೆ ಭಲೆ! ಭಲೇ!! ಎಂಬ ಉದ್ಗಾರ ತೆಗೆದನು. ಇನ್ನು ತನ್ನ ಪ್ರತಿಜ್ಞೆಯು ಕ್ಷಿಪ್ರದಲ್ಲಿಯೇ ಈಡೇರುವ ದೆಂಬುದಲ್ಲಿ ಸಂದೇಹವಿಲ್ಲ. ಈಶ್ವರನ ಕೃಪೆಯಿಂದ ಶೂರಪುರುಷರ ಸಹಾಯ ದೊರೆತಿತೆಂದು ಮನಸ್ಸಿನಲ್ಲಿ ಹಿಗ್ಗಿದನು.

ಮೋಹಿನಿಯು ತನ್ನ ವಕ್ರದೃಷ್ಟಿಯಿಂದಮೆಲ್ಲಗೆ ನಡುನಡುವೆ ಅವನನ್ನು ನೋಡುತ್ತಿದ್ದಳು, ಅವಳಿಗೆ ಇವನ ಮನೋಗತವು ತಿಳಿದಂತಾಗಿತ್ತು. ಇದುವರೆಗೆ ತೀಕ್ಷ್ಣದೃಷ್ಟಿಯಿಂದ ನೋಡುತ್ತ ಕುಳಿತಿದ್ದ ಅವಳು ಒಮ್ಮಿಂದೊಮ್ಮೆ ಗಟ್ಟಿಯಾಗಿ " ಅರಸುಮಕ್ಕಳಿಗೆ ಹಸಿವೆ ನೀರಡಿಕೆ ಯಾಗಿರಬಹುದು " ಎಂದು ಕೇಳಿದಳು. ಉತಾವಳಿಯಾಗಿದ್ದ ರಣರಸಿಕನು ಮೈಮರೆತು " ಛೇ! ಎಲ್ಲಿಯ ಹಸಿವೆ ನೀರಡಿಕೆ ನಿನ್ನನ್ನು ನೋಡುತಲೆ ಎಲ್ಲವೂ ಇಲ್ಲದಂತಾಗಿವೆ, ನಿನ್ನಂಥ ಅಪ್ರತಿಮ ಸುಂದರ ರತ್ನವು ಯಾರಕೈಸೇರುವದೋ ಅವರು ನಿಜವಾಗಿ ಧನ್ಯರು! ಪರಮಧನ್ಯರು.!!

ಮೋಹಿನಿ— ಇದೇನು? ರಾಜಪುತ್ರರು ಕಣ್ಣಿಗೆಕಂಡ ಬಾಲೆಯರನ್ನು, ಅವರು ಎಂಥವರೇ ಇರಲಿ, ಇಲ್ಲದವರ್ಣನೆಯನ್ನುಮಾಡಿ ಅವರನ್ನು ಒಲಿಸಿಕೊಳ್ಳುವ, ಸುಲಭೋಪಾಯವನ್ನು ಚೆನ್ನಾಗಿ ಸಾಧಿಸಿ ಕಲೆತಂ

ತೆ ತೋರುತ್ತದೆ. ಆವುದೋಹಳ್ಳಿ ಪಳ್ಳಿಗಳಲ್ಲಿಯ ಓರ್ವ ಬಡದುರ್ಗನಾಯಕನಿಂದ ಹುಟ್ಟಬೆಳೆದ ನನ್ನ, ರೂಪಲಾವಣ್ಯಗಳ ವರ್ಣನೆಯನ್ನು ಮಾಡುವಿರೆಂದರೆ ಏನನ್ನಬೇಕ್ಕು ನಾನೇನು ಅಂಥಚಲುವೆಯು.

ರಸಿಕ— ಅಲ್ಲ! ಮೋಹಿನಿ ಹೀಗೆನ್ನಬೇಡ. ರತ್ನವನ್ನು ತಿಪ್ಪಿಯ ಮೇಲೆ ಬೀಸುಟೆದರೂ ಅಗಕ್ಕೆ ರತ್ನವೇಎನ್ನುವರು. ತಿಪ್ಪಿಯಮೇಲೆ ಬಿಸುಟೆದ ಮಾತ್ರಕ್ಕೆ ಅದರ ಪ್ರಕಾಶತೆಗೇನು ಕುಂದುಬರಬಹುದೇ? ಕಿಂಚಿತ್ ಆಶ್ಚರ್ಯದಿಂದ ಮೋಹಿನಿಯು " ಇದೇನು ? ಮತ್ತೆಯಾರಾದರೋರ್ವ ಸರದಾರಕನ್ಯಯು ಕಾಣಬಂದಳೋ ಹೇಗೆ? " ಎಂದು ಕೇಳಿದಳು.

ಒಮ್ಮಿಂದೊಮ್ಮೆ ವಿಚಾರಿಸಿದ ಮೋಹಿನಿಯ ಪ್ರಶ್ನಕ್ಕೆ ರಸಿಕನು ತುಸು ಗೊಂದಲದಲ್ಲಿ ಬಿದ್ದಂತಾದನು. ಅವನು ಬಾಯಿಸವರುತ್ತ " ಇಲ್ಲ ! ನಿಜವಾಗಿ ಇಲ್ಲ !! ನಿನ್ನಂತಹ ಯೌವನ ಬಾಲೆಯರು ಈ ಪ್ರಾಂತದಲ್ಲಿ ಕಾಣಬರಬಹುದು. " ಎಂದನು. ಮೊದಲಣ ವಿಷಯವನ್ನು ಮರೆಯಿಸುವ ಉದ್ದೇಶದಿಂದ ರಸಿಕನು " ನಿನ್ನತಂದೆಯವರು ಸಂಜೆಯ ಊಟಕ್ಕಾದರೂ ಬರಬಹುದಲ್ಲವೇ " ಎಂದು ಕೇಳಿದನು.

ಮೋಹಿನಿ— ತೊಂಬತ್ತೊಂಬತ್ತು ಪಾಲಿಗೆ ಅವರು ಬರುವದು ಅಸಂಭವನೀಯವಾಗಿ ಕಾಣುತ್ತದೆ. ಇತ್ತೀಚಿಗೆ ಅವರು ಸದಾ ಈಶ್ವರಚಿಂತನೆಯಲ್ಲಿಯೇ ಕಾಲ ಕಳೆಯುತ್ತಾರೆ.

ರಸಿಕ— ನಿನ್ನತಂದೆಗೆ ವೀರಸೇನ ರೆನ್ನುವರೇನು? ನಾನಗೆನಿನ್ನಅಲ್ಪ ವಯಸಿನಲ್ಲಿ ವಾತಾಪಿ ನಗರಿಯಲಿದ್ದುದು ನೆನಪಿರಬಹುದಲ್ಲವೇ ? ಎಂಬುದಾಗಿ ಮೆಲ್ಲಗೆ ವಿಚಾರಿಸಿದನು.

ವೀರಸೇನನೆನ್ನುವ ಹೆಸರನ್ನು ಕೇಳುತ್ತಲೆ, ಮೋಹಿನಿಯ ಸ್ಥಿತಿಯೇ ಬೇರೆಯಾಯಿತು. ಕಣ್ಣುಗುಡ್ಡೆಗಳು ಅರಳಿದವು. ತನ್ನಕಡೆ ಗಣ್ಣಿನಿಂದ ಮೂರುನಾಲ್ಕುಸಾರಿ ರಣರಸಿಕನನ್ನು ನೋಡಿದಳು. ಅವಳಿಗೆ ಅವನಾಡಿದ

ಮಾತಿಗೆ ಉತ್ತರಕೊಡಲು ಅನುಮಾನ ವೆನಿಸಹತ್ತಿತು. ಆದರೂಸ್ಥೈರ್ಯ ದಿಂದ “ ಇದ್ದರೂ ಇರಬಹುದು; ಅದು ನನಗೆ ಚೆನ್ನಾಗಿ ನೆನಪಿಲ್ಲ. ನನ್ನ ತಂದೆಯು ಪ್ರಸಂಗಾನುಸಾರ ಮೂರು ನಾಲ್ಕು ಹೆಸರು ಇಟ್ಟುಕೊಂಡಿದ್ದ ನಂತೆ. ಬಾಲ್ಯತನ ದೊಳಗಣ ಮಾತುಗಳು, ಇದುವರೆಗೆ ಹೇಗೆನೆನಪು ಇದ್ದಾವು ?

ಯಾವ ಉದ್ದೇಶದಿಂದ ನನ್ನತಂದೆಯು, ವೆಂಗೀಅರಸರ ಪದರಿನಲ್ಲಿ ದ್ದನೋ, ಅದೇಉದ್ದೇಶದಿಂದ ನನ್ನ ಸಣ್ಣತನವಾದರೂ ವಾತಾಪಿನಗರಿ ಯಲ್ಲಿ ಜರುಗಿರಬಹುದು. ಇಷ್ಟರಲ್ಲಿ ಊಟದ ಸಿದ್ಧತೆ ಯಾಗಿರುವದೆಂದು ಸೂಚನೆಯುಬಂದಿತು.

ಮೋಹಿನಿ— ಏನುಮಾಡಬೇಕು, ಇದುವರೆಗೂ ದುಷ್ಟಬುದ್ಧಿಯವ ರು ಬಂದವರಾಗಲಿಲ್ಲ. ತಾಸೆರಡುತಾಸು ಆಗುತ್ತಬಂದಿತು. ನನಗಂತೂ ತಾವು ಓರ್ವರೇ ಕುಳಿತುಕೊಳ್ಳುವದು ನೆಟ್ಟಗ ಕಾಣುತ್ತದೆ. ಎಷ್ಟುಹೊತ್ತಿ ನವರೆಗೆ ಅವರ ದಾರೀ ನೋಡಬೇಕು?

ಕುಮಾರ— ಹಾಗಲ್ಲ! ಮೋಹಿನೀದೇವಿ, ನೀನನ್ನುವದು ಶಿಷ್ಟಸಾಂ ಪ್ರದಾಯಕ್ಕೆ ಸರಿಹೊಂದುವದಿಲ್ಲ. ಸಲ್ಪಹೊತ್ತಿನವರೆಗೆ ದಾರೀನೋಡೋ ಣ ಅಷ್ಟರಲ್ಲಿ ಅವರುಬಂದರೆ ಸರಿ, ಇಲ್ಲದಿದ್ದರೆ ಕುಳಿತುಕೊಳ್ಳಬಹುದು.

ಮುಂದೆ ಅರ್ಧತಾಸಿ ನೊಳಗಾಗಿಯೇ ದುಷ್ಟಬುದ್ಧಿಯು, ಜೆವೆತು ರಾಡಿಯಾಗಿ, ಧಾವಿಸಿ ಬರುತ್ತಿರುವದು. ದೂರದಿಂದಲೇ ಕಾಣಬಂದಿತು. ಹ ತ್ತಿರಬಂದನಂತರ, ದುಷ್ಟಬುದ್ಧಿಯು ಉಸ್ಸೆಂದು ಕುಳಿತು, ಮೋಹಿನಿಯ ನ್ನುದ್ದೇಶಿಸಿ, “ ಮಗೂ ! ಕುಮಾರರ ಆದರಾತಿಥ್ಯವನ್ನು, ಅವರಯೋ ಗ್ಯತೆಗನುಸರಿಸಿ ಚೆನ್ನಾಗಿಮಾಡು. ಅವರ ಪ್ರತಿಜ್ಞೆಪೂರ್ತಿಗೆ ನಾನೂ ನನ್ನ ಕೈಲಾದಮಟ್ಟಿಗೆ ಸಹಾಯ ಮಾಡುವೆನು; ಆದರೆ ಕುಮಾರರು ದಿವಂಗತ ರಾಯರಿಂದುಂಟಾದ ತಪ್ಪನ್ನುಮಾತ್ರ ತಿದ್ದಿಕೊಳ್ಳಲೇಬೇಕು. ಅಂದರೆ ನಾ ರು ಅವರನ್ನು ಕೆಲೆಯುವವನು. ಇಲ್ಲವಾದರೆ ಇಲ್ಲಿಯೇ ಇರುವದು ವಿಹಿತ ಕಾಣುತ್ತದೆ. ಈ ವಿಷಯುವನ್ನು ನನ್ನ ಮಗಳಿಗೆ ತಿಳುಹಿಸು, ಎಂಬದಾಗಿ ನಿನ್ನ ತಂದೆಯು ಹೇಳಿರುವನು. ” ಎಂದನು.

ಕುಮಾರ— ಅವಶ್ಯವಾಗಿ, ಅಗತ್ಯವಾಗಿ ನನ್ನ ಪೂರ್ವಜರಿಂದುಂಟಾದ ತಪ್ಪನ್ನು ತಿದ್ದಿ, ಅವರಿಗೆ ಹತ್ತಿದ ಕಲಂಕವನ್ನು ಹೋಗಲಾಡಿಸುವೆನು, ಎಂದು ಆವೇಶದಿಂದ ನುಡಿದನು.

✣ ✣ ✣ ✣ ✣ ✣ ✣ ✣

ಇಷ್ಟರಲ್ಲಿ ಪುನಃಊಟದ ಸೂಚನೆಯು ಬಂದಿತು. ದುಷ್ಟಬುದ್ಧಿಯು ಅವರೀರ್ವರಿಗೆ ಉಣ್ಣಲು, ಒಪ್ಪಿಗೆಯನ್ನಿತ್ತು ತನಗೆ ಹೊಟ್ಟೆ ಹಸಿದಿರುವದಿಲ್ಲೆಂಬದಾಗಿ ಹೇಳಿ ಹೊರಟುಹೋದನು. ತಿರುಗಿ ಅವರು ಊಟಮಾಡಿ, ವಿಳ್ಯವನ್ನು ಮೆದ್ದು, ಮಲಗಲು ಹೋಗುವವರೆಗೆ ಬರಲೇ ಇಲ್ಲ. ಅವಳ ಅಗಲುವಿಕೆಯ ಅಸದಳವಾದ ವ್ಯಥೆಯಿಂದ ಅವಳನ್ನು ತನ್ನ ಕಾಮುಕ ದೃಷ್ಟಿಯಿಂದ ನೋಡುತ್ತನೋಡುತ್ತ ಮಲಗಲು ಹೋಗುವದಕ್ಕೆ, ಅವಳನಿರೋಪವನ್ನು ತೆಗೆದುಕೊಂಡನು.

ಅವನಿಗೆ ಆರಾತ್ರಿ ಮನಮೋಹಿನಿಯ ಸುಂದರರೂಪವು ಕಣ್ಣಿಗೆ ಕಟ್ಟಿದಂತಾಗಿತ್ತು. ತುಸು ಕಣ್ಣುಮುಚ್ಚುತಲೆ ಅವಳ ಸಹಾಸ್ಯವದನವು ಕಣ್ಣೆದುರಿಗೆ ಬಂದು ನಿಂತಂತಾಗುತ್ತಿತ್ತು. ಅವನಿಗೆ ಹೊರಳಾಡಲುದೊಡ್ಡ ಹಾಸಿಗೆಯು ಸಾಲದಾಯಿತು. ಇತ್ತಿಂದತ್ತ ಅತ್ತಿಂದಿತ್ತ ಹೊರಳಾಡಿ ಕಡೆಗೆ ಬೇಸತ್ತನು. ಏನುಮಾಡಿದರೂ ನಿದ್ರೆಯು ಬಾರದಾಯಿತು. ಮುಂದೊದಗುವ ಅನರ್ಥ ಸಂಕಟ ಪರಂಪರೆಗಳು ಅವನನ್ನು ಕಾರ್ಯಚ್ಯುತ ಮಾಡಲು ಹವಣಿಸುತ್ತಿದ್ದವು. ಅಂತೂ ಇಂತೂ ಒಂದುಯುಗದಂತೆ ಆರಾತ್ರಿಯನ್ನು ಕಳೆದನು.

ಮಾರನೇದಿವಸ ಅರುಣೋದಯಕ್ಕಿಂತ ಮೊದಲೇ ಎದ್ದು ಮುಖಮಾರ್ಜನಾದಿ, ಪ್ರಾತರ್ವಿಧಿಗಳನ್ನು ತೀರಿಸಿಕೊಂಡು, ಅವಳಹಾದಿಯನ್ನೇ ನೋಡುತ್ತ ಕುಳಿತುಕೊಂಡಿದ್ದನು. ಇಷ್ಟರಲ್ಲಿ ಮನಮೋಹಿನಿಯಕಡೆಯಿಂದ ಪರಿಚಾರಕನುಬಂದನು, ಇವನಿಗಾದರೂ ಅದೇಬೇಕಾಗಿತ್ತು. ಕೂಡಲೆ ಉಗುಬಗೆಯಿಂದ ಬಟ್ಟೆಗಳನ್ನು ಧರಿಸಿ ಅವಳ ಮಂದಿರದ ಕಡೆಗೆ ಸಾಗಿದನು.

ಮೊದಲನೆಯ ದಿವಸ ಕೋಟೆಯ ಒಳಗಣ ಎಲ್ಲಭಾಗವನ್ನು ನೋಡಬೇಕೆಂದು ನಿರ್ಧರಿಸಿದ ಮೇರೆಗೆ, ಇಷ್ಟು ತೀವ್ರ ಅವನನ್ನು ಕರೆಕಳುಹಿದ್ದಳು

ರಸಿಕನು ಮುಟ್ಟುವ ದೊಂದೇತಡ. ಉಪಹಾರದ ಸಿದ್ಧತೆ ಯಾಗಿರುವದೆಂದು ಸೂಚನೆಯು ಬಂದಿತು. ಒಳಕ್ಕೆ ಪ್ರವೇಶಿಸುತಲೆ, ನಾನಾಪ್ರಕಾರದ ಹಣ್ಣು ಹಂಪಲಗಳನ್ನು ಸಿದ್ಧಪಡಿಸಿ ಇವನ ಬರುವಿಕೆಯನ್ನು ನೋಡುತ್ತ ಮೋಹಿನಿಯು ನಿಂತುಕೊಂಡಿದ್ದಳು. ಅವಳನ್ನು ನೋಡುತಲೆ ರಣರಸಿಕನು, " ಇದೇನು? ಮೋಹಿನಿದೇವಿ! ಇಷ್ಟು ಆತುರದಿಂದೇಕೆ ಕರೆಸಿದಿರಿ. ಇದನ್ನೇನು ಹೂಡಿರುವಿರಿ ಯಾವಾಗಾದರೊಮ್ಮೆ ಬಂದುಹೋಗುತ್ತಿದ್ದೆನು. "

ಮೋಹಿನಿ— ಇದರಲ್ಲೇನಿದೆ, ರೀತಿಯಮೇರೆಗ ದಿನಾಲು ಆಗತಕ್ಕದುದೇ ಆಗಿರುವದು. ತಾವು ಮಲಗಲು ಹೋದಮೇಲೆ, ನನ್ನ ತಂದೆಯವರ ಕಡೆಯಿಂದ ಪುನ: ನಿರೋಪವು ಬಂದಿತು. ತಾವು ಇಲ್ಲಿರುವವರೆಗೆ, ತಮಗೆ ಯಾವಬಗೆಯ ತೊಂದರೆ ಯಾಗದಂತೆಯೂ, ಸಮಯಬಿದ್ದರೆ, ಸಹಾಯ ಮಾಡೆಂಬದಾಗಿಯೂ, ಹೇಳಿಕಳುಹಿರುವರು. ಕಣ್ಣಿಗೆಕಾಣುವದುರ್ಗವು ಸಣ್ಣದು ಕಂಡರೂ, ಯುದ್ಧದ ವೇಳೆಯಲ್ಲಿ ಬಹು ಉಪಯೋಗವಾಗುವಂತಿದೆ.

ರಾಜಪುತ್ರ— ನಿಜವಾಗಿ ನನ್ನಂತಹ ಭಾಗ್ಯಶಾಲಿಯೂ ಈಭೂಮಿಯಲ್ಲಿಯಾರೂ ಇರಲಿಕ್ಕಿಲ್ಲ. ನಿನ್ನ ಸಹವಾಸದಿಂದ ನನಗೆ ಒಂದೊಂದುದಿನಗಳು ಒಂದೊಂದು ನಿಮಿಷಗಳಾಗಿ ಪರಿಣಮಿಸುತ್ತವೆ. ಪ್ರಿಯತಮೆ, ಮೋಹಿನಿ! ನಿನ್ನ ತಂದೆಯವರ ಬೆಟ್ಟಿಯು ಈಹೊತ್ತಾದರೂ ಆಗಬಹುದಲ್ಲವೇ?

ಮೋಹಿನಿ— ನನಗೆ ಹೇಳಲು ಬರುವಂತಿಲ್ಲ, ಎಂದಾದರೂ ಆಗಬಹುದು, ಇಷ್ಟೇಕೆ ಆತುರ? ಇರಲಿ ರಾಜಪುತ್ರರೇ! ಶತ್ರುಗಳನ್ನು ಚದರಿಸುವದಕ್ಕಾಗಿ ಪ್ರಸಂಗಬಿದ್ದಲ್ಲಿ, ಹುದಿಗಿಕೊಂಡು ಕುಳಿತುಕೊಳ್ಳಲು ಈ ದುರ್ಗವು ಬಹು ಉಪಯೋಗ ಬೀಳುವಂತಿದೆ; ಆದುದರಿಂದ ನನ್ನ ತಂದೆಯು ದುರ್ಗದಎಲ್ಲ ಆಯಕಟ್ಟಿನ ಸ್ಥಳಗಳನ್ನು ತಮಗೆ ತೋರಿಸಲು ಬಹುಪರಿ

ಯಿಂದ ಹೇಳಿರುವನು. ಇದೇಕಾರಣದಿಂದ ಸೂರ್ಯೋದಯ ವಾಗುತಲಿ ಇಷ್ಟು ಅವಸರದಿಂದ ಕರೆಕಳುಹಿದೆನು.

ಪಾಪ! ಇವರಒಳಸಂಚು ಹೇಗೆತಾನೇ ಗೊತ್ತಾಗಬೇಕು. ಇವನಾದರೂ ಇಂಥ ಕ್ಷುದ್ರವಿಷಯುವನ್ನರಿಯುದವನಿದ್ದಿಲ್ಲ. ಸದ್ಯದ ಸ್ತ್ರೀವ್ಯಾಮೋಹ ಬಲಿಯಲ್ಲಿ ಸಿಕ್ಕು ಇವನಿಗೆ ವಿಚಾರಶಕ್ತಿಯೇ ಇಲ್ಲದಂತಾಗಿತ್ತು.

ಕುಮಾರ— ಒಳ್ಳೇದು. ನೀನು ಕರಕೊಂಡು ಹೋದತ್ತ ಬರಲು ನಾನು ಸಿದ್ಧನಿರುವೆನು.

ಮೋಹಿನಿಯು ಓರೆನೋಟದಿಂದ ಅವನ್ನು ನೋಡುತ್ತ “ ಕುಮಾರ ತಮ್ಮ ಪಾಸಂಗವನ್ನು ಹೋಲದ ಈ ಕ್ಷುದ್ರಕನ್ಯೆಯಿಂದ ಚಾಲುಕ್ಯ ಯುವರಾಜರಿಗೆ ಏನು ತಾನೇ ಸಹಾಯವಾದೀತು. ರಾಜಪುತ್ರರಿಗೆ ವಿನೋದ ಚೇಷ್ಟೆಗಳಲ್ಲಿ ವಿಶೇಷ ಆಸಕ್ತಿ ಇದ್ದಂತೆ ತೋರುತ್ತದೆ” ಎಂದು ತಲೆಅಲ್ಲಾಡಿಸುತ್ತ ತನ್ನ ಮೃದುವಾದ ಹಾಸ್ಯಸ್ವರದಿಂದ ನುಡಿದಳು.

ರಾಜಪುತ್ರ— ಇರಲಿ! ನಿನ್ನಿನ ಆವೃದ್ಧನು ಕಾಣಬರುವದಿಲ್ಲವಲ್ಲ,

ಮೋಹಿನಿ— ಯಾರು? ದುಷ್ಟಬುದ್ಧಿಯುವರೇನು, ನೀವುಮಲಗಲು ಹೋಗುತಲೆ ಅವರೂ ಹೋದರು. ಹೋಗುವಕಾಲಕ್ಕೆ ತಾವು ಕರೆಕಳುಹುತಲೆ ಬರುವೆನೆಂದು ಹೇಳಿ ಹೋಗಿದ್ದಾರೆ.

ರಾಜಪುತ್ರ— ದೇವಿ! ಈನಿನ್ನ ಮಹದುಪಕಾರದನ್ನು ನಾನುಎಂದು ತೀರಿಸಬೇಕು. ಈಜನ್ಮದಲ್ಲೇನು ನನ್ನಿಂದ ಸಾಧ್ಯವಾದಂತೆ ಕಂಡುಬರುವದಿಲ್ಲ.

ಮೋಹಿನಿ— ರಾಜಪುತ್ರರೇ ! ಇದರಲ್ಲಿ ಉಪಕಾರವೇತರದು. ನಾನು ನನ್ನ ಕರ್ತವ್ಯಕರ್ಮವೆಂದರಿದು ಮಾಡಿರುವೆನು. ಈ ಆಬಲೆಯು ಅಲ್ಪ ಸೇವೆಯನ್ನು ಸ್ವೀಕರಿಸಿದುದಕ್ಕಾಗಿ, ಅವಳು ತನ್ನನ್ನು ಧನ್ಯಳೆಂದು ತಿಳಿದಿರುವಳು.

ರಾಜಪುತ್ರನು ಕಠೋರ ಸ್ವರದಿಂದ “ ಏನು ಮೋಹಿನಿ! ಏನನ್ನು ವಿ? ನೀನಾಡುವ ಮಾತುಗಳ ಅರ್ಥವೇ ತಿಳಿಯದಂತಾಗಿದೆ, “ ಮೋಹಿನಿ ಯು ತನ್ನ ಮಾತಿನ ಓಘವನ್ನು ಬೇರೆಕಡೆಗೆ ತಿರುಗಿಸಿ, ಅತಿವಿನಯದಿಂದ “ ರಾಜಪುತ್ರರೇ! ನನ್ನತಂದೆಯವರು ಮೊದಲು ವೆಂಗೀಅಧಿಪತಿಗಳ ಪದ ರಿನಲ್ಲಿ ಓರ್ವ ವಿಶ್ವಾಸಿಕರಾದ ಪ್ರಸಿದ್ಧ ಪುರುಷರಿದ್ದರು. ಅವರಿಂದಂತೂ ಯಾವಕಾರ್ಯಗಳೂ ಆಗಲಿಲ್ಲ ಅವರ ಈ ದುರ್ಭಾಗ್ಯಕನ್ಯೆಗೆ ವೆಂಗೀ ಅಧಿ ಪತಿಗಳ ಅಲ್ಪ ಸ್ವಲ್ಪ ಸೇವೆಯ ಸಮಯವು ದೊರೆತರೆ, ಅದರಿಂದಾದರೂ ಉಂಡ ಅನ್ನದ ಸಾರ್ಥಕ ವಾದಂತಾಗುತ್ತದೆ ” ಅವಳ ಮೋಹಜಾಲದಲ್ಲಿ ಸಂಪೂರ್ಣ ಶಿಲುಕಿಬಿದ್ದ ಅರಸುಮಗನು, ಹಿಂದುಮುಂದಿನ ವಿಚಾರವಿಲ್ಲದೆ ಮೈಮರೆತು ಧನ್ಯ! ದೇವೀ ಮೋಹಿನಿ ಧನ್ಯ!! ಏನು ? ಈ ನನ್ನ ವಿಚಾ ರಾರ್ಹ ಉದಾತ್ತಮಾತುಗಳು. ನೀನು ನಿನ್ನ ಬಾಹ್ಯಾಂಗದಿಂದ ಹೇಗೆ ಸುಂದರಳಿರುವಿಯೋ, ಹಾಗೇ ಅಂತರಂಗಿಕ ಗುಣಗಳಿಂದಾದರೂ ಸುಂದರ ಳಿರುವಿ ” ಅವನಾಡುವ ಮಾತುಗಳಕಡೆಗೆ ಲಕ್ಷಗೊಡದೆ, ಮೋಹಿನಿ “ ಇ ರಲಿ, ಕುಮಾರರು ವರ್ಣನೆಯನ್ನೂ ಶ್ಲಾಘನೆಯನ್ನೂ ಸಾಕುಮಾಡಬೇಕು ಏಳಿರಿ, ಉಪಹಾರದ ಸಿದ್ಧತೆ ಯಾಗಿರುವದು. ನಮಗೆ ಮುಂದೆ ಮಾಡತ ಕ್ಕ ಕಾರ್ಯಗಳು ಅನೇಕ ಉಂಟು.

ಕೂಡಲೆ ರಣರಸಿಕನು ಎದ್ದನು. ಈರ್ವರೂ ಉಪಹಾರವನ್ನು ತೀರಿ ಸಿಕೊಂಡು, ಕೋಟಿಕೊತ್ತಳಗಳನ್ನು ನೋಡುವ ಸಲುವಾಗಿ ಹೊರಟರು.

ಮೋಹಿನಿಯು ಇರುವಸ್ಥಳವು ರಾಜಪುತ್ರನ ಹಸ್ತಗತವಾಗಿದ್ದರೂ ಅದರಬದಿಯಲ್ಲಿರುವ ಕೋಟೆಯುಮಾತ್ರ ಕೈವಶವಾಗಿದ್ದಿಲ್ಲ ದುರ್ಗದಸುತ್ತ ಲೂ ಅಲ್ಲಿಯ ದುರ್ಗನಾಯಕನದೇ ಕಾವಲು ಇತ್ತು. ದುರ್ಗದವಿಷಯಕ್ಕೆ ರಸಿಕನಿಗೆ ವಿಶೇಷ ಜ್ಞಾನವಿದ್ದಿಲ್ಲ. ಮೋಹಿನಿಯ ಮೊಹಕ್ಕೊಳಗಾದ ಅವ ನಿಗೆ ಎಲ್ಲವೂ ವಿಸ್ಮರಣೆ ಯಾದಂತಾಗಿತ್ತು

ಮೋಹಿನಿಯ ಈ ಹೊತ್ತಿನ ಚಲನ ವಲನವೇ ಬೇರೆಯಾಗಿತ್ತು. ಅವಳುತನ್ನ ಮೃದು ಶರೀರಕೊಪ್ಪುವಂತೆ ತೆಳ್ಳಗಿನ ದೂಕುಲವನ್ನುಟ್ಟು

ಕೊಂಡು, ಮೈಮೇಲೆ ಆಭರಣಗಳನ್ನಿಟ್ಟು ಹಾವಭಾವದ ನಡಿಗೆಯಿಂದ, ಕುಮಾರನ ಮುಂಭಾಗದಲ್ಲಿ ಸಾಗಿದ್ದಳು.

ಮನಸೋತ ಅರಸುಮಗನು ಎಡಬಲವನ್ನು ನೋಡದೆ ಅವಳಅಂದ ವಾದ ಅವಯುವವನ್ನು ನೋಡುತ್ತ, ಹಿಂದಿಂದೆಮೆಲ್ಲಗೆ ನಡೆಯಹತ್ತಿದ್ದನು ಇಷ್ಟರಲ್ಲಿ, ಇಬ್ಬರೂ ದುರ್ಗದ ಮಹಾದ್ವಾರಕ್ಕೆ ಬಂದರು. ಕಾವಲುಗಾರ ನು ಇವರೀರ್ವರು ಬರುತಲೆ, ಮೊದಲು ಮೋಹಿನಿಗೂ, ಆಮೇಲೆ ರಾಜ ಪುತ್ರನಿಗೂ ವಿನಯದಿಂದ ಮುಜುರೆಮಾಡಿ ಅಗಸೆಯ ಬಾಗಿಲವನ್ನು ತೆರೆ ದನು. ಇಬ್ಬರೂ ಒಳಹೊಕ್ಕಮೇಲೆ, ಮೊದಲಿನಂತೆ ಗಟ್ಟಿಯಾಗಿ ಬಾಗಿಲು ಗಳನ್ನಿಕ್ಕಿಕೊಂಡನು.

ರಾಜಪುತ್ರ— ಈ ದುರ್ಗದ ಮೇಲ್ಕೆಳ ಭಾಗದಲ್ಲಿ ಯಾರಾರು ಇರು ವದು.

ಮೋಹಿನಿ— ಕೋಟೆಯ ಕೆಳಭಾಗದಲ್ಲಿ, ದುರ್ಗರಕ್ಷಕರೂ, ಕೆಳವು ಕಾಲಾಳುಗಳು ಇರುವರು. ಮೇಲ್ಭಾಗದಲ್ಲಿ ಧನುರ್ವಿದ್ಯೆವನ್ನರಿತ ಆರಿಸಿದ ಕೆಲವುಶೂರರು ಇರುವರು. ನಡಿಯರಿ ಒಂದೂ ಬಿಡದಂತೆ ಎಲ್ಲವನ್ನೂ ತೋರಿಸುತ್ತೇನೆ.

ರಸಿಕನು ಅವಳು ಒಯದತ್ತ ಮೌನದಿಂದ ನಡೆದಿದ್ದನು. ಹುಡೆಯ ಹತ್ತರಬಂದರು. ಮೋಹಿನಿಯು ಬೆರಳಿನಿಂದ ಎದುರಿಗಿರುವ ಹುಡೆಯನ್ನು ತೋರಿಸಿ “ ರಾಜಪುತ್ರನೇ! ಇಲ್ಲಿಕಾಣಬರುವ ಹುಡೆಯೊಳಗಿಂದ ಒಮ್ಮಿಂ ದೊಮ್ಮೆ ಮೇಲೆಹೋಗಲು ಕಳ್ಳದಾರಿ ಇರುವದು. ನಿರಾಯಾಸದಿಂದ ಹೋ ಗುವ ಸುಲಭದಾರಿಯು ಇದಲ್ಲ, ಒಳಗೆ ಎಲ್ಲಕಡೆಗೂ ಕತ್ತಲು ಕವಿದಿರುವ ದರಿಂದ ಬಲ್ಲವರಿಗೂಸಹ ಒಂದೊಂದು ವೇಳೆಯಲ್ಲಿ ಭಯುವು ಬರುವಂತಿದೆ

ರಸಿಕ— ಒಳ್ಳೆದು ನಡೆ, ನಿನ್ನಹಿಂದೆಯೇ ಬರುತ್ತೇನೆ.

ಮೋಹಿನಿಯು ಹುಡೆಯತೀರ ಸಮೀಪಕ್ಕೆ ಹೋದವಳು, ಹುಡೆಯ ಅಡಿಯಲ್ಲಿರುವ ದೊಡ್ಡದಾದ ಕಲ್ಲುಗಳೊಳಗೆ ಕೊರೆದ, ಮೂರ್ತಿಯು ಬಾ ಯಿಯೊಳಗೆ ತನಟೊಂಕದಲ್ಲಿ ಅಲೆದಾಡುವ, ಅಲಗನ್ನು ತೆಗೆದುಕೊಂಡು

ಒಳಿತಾಗಿ ತಿರುವಿದಳು. ಕೂಡಲೆ ಸರ್ರ‌ಎನ್ನುತ್ತ ಆಬಂಡೆಯು ಭೂಮಿಯೊಳಗೆ ಇಳಿದು ಇಬ್ಬರು ಪ್ರವೇಶಿಸುವಷ್ಟೇ ಮಾರ್ಗವಾಯಿತು. ಮೋಹಿನಿಯು ಒಳಹೊಕ್ಕಳು ರಣರಸಿಕನು ಕೆಳಗೆ ಇಳಿದನು. ಆಮೇಲೆ ಮೊದಲಿನಂತೆ ಬಂಡೆಯು ಬಂದುಬಾಗಲಿಗೆ ಕುಳಿತುಕೊಂಡಿತು. ಮೋಹಿನಿಯು ಹೇಳಿದಂತೆ ನಿಜವಾಗಿ ಮಾರ್ಗವು ಬಹುಭಯಂಕರವಾಗಿತ್ತು ರಣರಸಿಕನು ಎಡವುತ್ತ ಮುಗ್ಗುತ್ತ ಅವಳಬೆನ್ನುಹಿಂದೆ ನಡೆದನು.

ಮೋಹಿನಿ— ತಮಗೆ ತೀವ್ರವಾಗಿ ನಡೆಯಲು ತೊಂದರೆಯಾಗಬಹುದು ಈ ದಾರಿಯುತಮಗೆ ಅಪರಿಚಿತವಿರುವದು.. ಬೇಕಾದರೆ ನನ್ನಕೈ ಹಿಡಿಯಿರಿ ನಿಮಗೆ ತ್ರಾಸವಾಗಲಿಕ್ಕಿಲ್ಲ.

ಮೋಹಿನಿಯ ಕೋಮಲಹಸ್ತ ಸ್ಪರ್ಶವಾಗುತಲೆ ರಣರಸಿಕನ ಮೈಗೂದಲುಗಳು ಸೆಟ್ಟಗಾದವು. ಅವನಮೈಯಲ್ಲಿ ವಿದ್ಯುಲ್ಲತೆ ಸಂಚರಿಸಿದಂತಾಯಿತು. ತಲೆಯು ಒಮ್ಮಿಂದೊಮ್ಮೆ ತಿರುಗಹತ್ತಿದ್ದರಿಂದ ಹಿಡಿದ ಕೈಯನ್ನು ಬಿಡಲು,ಜೋಲಿಹೋಗಿ ಅವನಕೈಯು, ಅವಳ ಹೆಗಲಮೇಲೆಬಿದ್ದಿತು. ಏನನ್ನುವಳೆಂಬ ಭಯದಿಂದ ರಾಜಪುತ್ರನು ನಡುಗಿದನು. ಆದರೆ ಅವಳಿಂದ ಪ್ರತಿಕಾರದ ಯಾವಶಬ್ದಗಳೂ ಬರಲಿಲ್ಲ.

ಅವಳು ಸಾವಕಾಶವಾಗಿ ಹಾಗೆಯೇ ಸಾಗಿದ್ದಳು. ಮೇಲೆ ಹತ್ತುತ್ತ ಕೆಳಗೆ ಇಳಿಯುತ್ತ, ಕಡೆಗೆ ಇಬ್ಬರೂ ಒಂದುಸಣ್ಣದಾದ ಬಾಗಿಲಿಗೆಬಂದರು

ಬಾಗಿಲದ ಸಂದಿನಲ್ಲ ಮೊದಲಿನಂತೆ ಅಲುಗಿನಿಂದ ತಿವಿಯುತಲೆ ಖಡ್ ಎಂದು ಬಾಗಿಲವುತೆರೆಯಿತು.. ರಣರಸಿಕನು ಬಾಗಿಲಹೊರಗೆ ಬಂದು, ತಾನುನಿಂತಿದ್ದ ಎತ್ತರದ ಸ್ಥಳದಮೇಲಿಂದ ಸುತ್ತುಮುತ್ತಲಿನ ಎಲ್ಲಪ್ರದೇಶವನ್ನೂ ಒಂದುಸಾರೆ ಚೆನ್ನಾಗಿ ನೋಡಿದನು. ಅವನು ನಿಂತಿದ್ದ ಸ್ಥಳವು ಎಲ್ಲಭಾಗದಕಿಂತಲೂ ಎತ್ತರವಾಗಿದ್ದಿತು. ಸುತ್ತಲೂ ಇರುವ ಗಟ್ಟಿಯಾದ ಕೋಟೆಯನ್ನೂ, ಗುರಿಹೊಡೆಯಲು ಹೆಚ್ಚು ಉಪಯೋಗಕರವಾದ ಕೊತ್ತಳಗಳನ್ನೂ ನೋಡಿ ಅವನು ಕೌತುಕಬಟ್ಟನು. ಹಿಂದಕ್ಕೆ ತಿರುಗಿನೋಡುತಲೆ ದೂರವಲ್ಲ, ತಾನು ಮೊದಲು ಇಳಿದಿದ್ದದಿನ್ನೆಯೂ, ದಿನ್ನೆಯಕೆಳಗೆ ಜುಳು ಜುಳು ಹರಿಯುವ ಸಣ್ಣಹಳ್ಳವೂ ದೃಷ್ಟಿಗೆ ಬಿದ್ದಿತು. ಇಷ್ಟರಲ್ಲಿ ಹಿಂದಿ

ನಿಂದ ಮೋಹಿನಿಯು ಬಂದು ನಟಿಸುತ್ತ, ಅವನ ಕೈಯನ್ನು ಹಿಡಿದು “ ಕುಮಾರ! ಇತ್ತನೋಡಿರಿ ಉತ್ತರದಿಕ್ಕಿಗೆ ಕಾಣಬರುವ ಗುಡ್ಡದಮೇಲೆ ಬಾಣಹೊಡೆಯಲು, ಇಲ್ಲಿಂದಚೆನ್ನಾಗಿ ಸಾಧಿಸುವಂತಿದೆ. ಈಶಾನ್ಯದಿಕ್ಕಿಗೆ ಕಾಣಬರುವದೇ ದುಷ್ಟಬುದ್ಧಿಯವರು ಇರುವಗ್ರಾಮವು. ಸುತ್ತುಲೂಕೋಟೆಯ ಗೋಡೆಯಿರುವದು. ಕಣ್ಣಿಗೆತೀರ ಸಮೀಪಕಂಡರೂ ಅರ್ಧ,ಮುಕ್ಕಾಲು ಗಾವುದ ಅಂತರದ ಮೇಲಿರುವದು. ಅದರ ಆಚೆಯಲ್ಲಿರುವದೇ ಚಿನ್ನದ ದುರ್ಗವು. ಈ ಹುಡೆಯಮೇಲೆನಿಂತು ನೋಡಿರಿ. ಎಲ್ಲವೂ ಅಂಗೈಯಲ್ಲಿರುವಂತೆ ಕಾಣಬರುವದು.

ರಣರಸಿಕ— ಇತ್ತಕಡೆಗೆಕಾಣುವ ಗಿಡದಗುಂಪು ಏತರದು? ಬಹುರಮಣೀಯವಾದ, ಪ್ರೇಕ್ಷಣೀಯ ಸ್ಥಳವಿದ್ದಂತೆ ಕಾಣುತ್ತದೆ.

ಅವನನ್ನು ಮುಂದೆ ಮಾತಾಡಗೊಡದೆ, ಮೋಹಿನಿಯು “ ಅತ್ತೇನಿರುವದು, ಅದೇದಿನ್ನಿಯಲ್ಲವೇ? ಒಂದುಸಾರೆ ತಾವುಅದನ್ನು ನೋಡಿದುದಾಗಿ ಕಾಣುತ್ತದೆ ”

ಗೊಂದಲದಲ್ಲಿ ಬಿದ್ದವನಾಗಿ ರಣರಸಿಕನು “ ಛೇ! ನಿಜವಾಗಿ ನಾನು ಅತ್ತಕಡೆಗೆ ಹೋಗಿರುವದಿಲ್ಲ. ಅಲ್ಲಿಗುಡಿಸಲು ಕಂಡಂತಾಗಲು ಸಹಜವಾಗಿ ವಿಚಾರಿಸಿದೆನು. ”

ಮೋಹಿನಿ— ಅಲ್ಲಿಯಾವನೋ ಓರ್ವತುಂಟನು ಇರುವನೆಂಬದಾಗಿ ಕೇಳುತ್ತೇನೆ.

ರಸಿಕ— ಯಾರು! ಯಾರು!! ಅಲ್ಲಿ ಇರುವವನು ತುಂಟನೇ.

ರಾಜಪುತ್ರನ ಗರ್ಭಗಳಿತ ಧ್ವನಿಯಿಂದ ಮೋಹಿನಿಯು ಅಂಜಿದವಳಾಗಿಎರಡು ಹೆಜ್ಜೆ ಹಿಂದಕ್ಕೆ ಸರಿದು ನಿಂತಳು.

ರಸಿಕ— ಹೇಳು, ಮೋಹಿನಿ ಮೊದಲುಹೇಳು, ಆವತುಂಟನಿರುವನು ಎಂದು ಸಂತಾಪಯುಕ್ತ ಸ್ವರದಿಂದ ನುಡಿದನು.

ಮೋಹಿನಿಯು ಕಂಪಿತಸ್ವರದಿಂದ, ತಮಗೆ ಈರೀತಿ ಸಿಟ್ಟುಬರುವದೆಂದು ತಿಳಿದಿದ್ದರೆ ನಾನು ಅವನ ಹೆಸರನ್ನೇ ಎತ್ತುತ್ತಿದ್ದಿಲ್ಲ.

ವಾಚಕರೇ! ಮೇಲೆ ಕಾಣದ ದಿನ್ನೆಯೂ ಅದರಮೇಲಿಸಿವ ಗುಡಿಸಲುಗಳೂ ನಮ್ಮ ರಾಜಪುತ್ರನ ಪೂರ್ವ ಪರಿಚಯದ, ಮುದುಕನವಿದ್ದು, ಅವನು ನಂದೀದುರ್ಗ, ವಿಜಯದುರ್ಗಗಳನ್ನು, ಕೈವಶಮಾಡಿ ಕೊಳ್ಳುವ ಕಾಲಕ್ಕೆ ರಾಜಪುತ್ರನಿಗೆ ಚನ್ನಾಗಿ ಸಹಾಯಮಾಡಿದ್ದನು. ಅವನಿಗೆ ಮೋಹಿನಿಯು ತುಂಟನೆಂದು ಸಂಬೋಧಿಸಿದುದನ್ನು ರಣರಸಿಕಸಿಂದ ಕೇಳುವದಾಗಲಿಲ್ಲ. ಆದುದರಂದಲೇ ನ್ಯಾಯ ಪಕ್ಷಪಾತಿಯಾದ ರಾಜಪುತ್ರನು ಸಂತಾಪ ಯುಕ್ತಸ್ವರದಿಂದ ಮಾತಾಡಿದನು.

ರಾಜಪುತ್ರನು ಸಮಯವನ್ನರಿತು, ಕೂಡಲೇ ಬಂದಸಿಟ್ಟನ್ನುನುಂಗಿ ಮೋಹಿನಿ! ನೀನು ಇಷ್ಟೇಕೆ ವಿಷಾದ ಗೊಳ್ಳುವೆ, ಆಮನುಷ್ಯನ ವಿಷಯಕ್ಕೆ ತುಸುಗೊತ್ತಿದ್ದುದರಿಂದ, ಹೆಚ್ಚಿನಸಂಗತಿಯನ್ನು ತಿಳಿದುಕೊಳ್ಳಲು ಇಷ್ಟು ವಿಚಾರಿಸಿದೆನು.

ಮೋಹಿನಿ— ಅವನನ್ನು ಈ ಪೂರ್ವದಲ್ಲಿ ನೋಡಿರುವಿರೇನು?

ರಾಜಪುತ್ರ— ಇಲ್ಲ! ನೋಡಿರುವದಿಲ್ಲ !! ಅವನುಯಾರು? ಅವನ ವಿಷಯಕ್ಕೆ ಹೆಚ್ಚಿಗೆ ಗೊತ್ತಿದ್ದರೆ ಮರೆಮಾಚದೆ ಹೇಳು.

ಮೋಹಿನಿ— ನನಗಾದರೂ ನಿಜವಾಗಿ ಯಾವಸಂಗತಿಯೂ ಗೊತ್ತಿಲ್ಲ. ಆಸ್ಥಳಕ್ಕೆ ಬರಹೋಗುತಲಿದ್ದ ಆ ಸರದಾರನು ನಂದರ ಕಡೆಯುವನೆಂದು ಕೇಳಿದ್ದೇನೆ. ಇದಲ್ಲದೆ ಯಾರಿಗೂ ಗೊತ್ತಾಗದಂತೆ ಅವನು ನೆರೆಹೊರೆಯ ಹಳ್ಳಿಗಳನ್ನು ಪ್ರವೇಶಿಸಿ ಕೊಲೆ ಸುಲಿಗೆ ಗಳನ್ನುಸಹ ಮಾಡಿಸುತ್ತಿರುವನೆಂದು ದಟ್ಟಾದ ವರ್ತಮಾನ.

ರಸಿಕನು ದೊಡ್ಡದೊಂದು ನಿಟ್ಟುಸಿರು ಬಿಟ್ಟು, ಹೀಗಿರುವದೇ? ಅಲ್ಲಿ ಬೇಡರುವಸತಿ ಮಾಡಿರಬಹುದೆಂದು ನಾನು ಊಹಿಸಿದ್ದೆನು.

ಮೋಹಿನಿ— ಅವರಾದರೂ ಅವನ ಆರಣ್ಯವಾಸಿ ಸೇವಕರೇ ಇರಬಹುದು.

ಅವಳಮಾತನ್ನು ಅಷ್ಟಕ್ಕೆ ನಿಲ್ಲಿಸಿ ರಾಜಪುತ್ರನು, ಉತ್ಸುಕತೆಯಿಂದ '' ಮೋಹಿನಿ! ಅವನನ್ನು ನೀನು ಎಂದಾದರೂ ನೋಡಿರುವಿ ಏನು ?

ಮೋಹಿನಿ— ಇಲ್ಲ. ಎಂದೂ ನೋಡಿರುವದಿಲ್ಲ. ಜನರಾಡುವ ಮಾತುಗಳನ್ನೇ ಯುವರಾಜರಿಗೆ ಅರುಹಿದೆನು

ರಾಜಪುತ್ರ— ಹೆಂಡರು, ಮಕ್ಕಳು ಮರಿಗಳು ಅಲ್ಲಿಗೆ ಹೋಗ ಬರ ಹತ್ತಿರಬಹುದಲ್ಲವೇ?

ರಾಜಪುತ್ರನನ್ನು ಮಾರ್ಮಿಕದೃಷ್ಟಿಯಿಂದ ನೋಡುತ್ತ, ಮೋಹಿನಿಯು ‹‹ ಇದೇನು ನಿಮ್ಮ ಸೋಜಗದ ಪ್ರಶ್ನೆ? ಸ್ಥಳವನ್ನೇ ನೋಡಿಲ್ಲ ಎಂದವಳಿಗೆ, ಅವನಹೆಂಡರು ಮಕ್ಕಳಸಂಗತಿ ಹೇಗೆತಾನೆ ಗೊತ್ತಿರಬೇಕು. ನಡೆಯಿರಿ ಮುಂದಕ್ಕೆ. ಆಮಾತನ್ನು ಅಲ್ಲಿಗೆನಿಲ್ಲಿಸಿಬಿಡಿರಿ. ಕೋಟೆಕೊತ್ತಳಗಳ ಸಂಬಂಧವಾಗಿ ನಿಮಗೆಇನ್ನೂಎಷ್ಟೋಸಂಗತಿಯನ್ನು ಹೇಳತಕ್ಕದ್ದಿದೆ

ರಾಜಪುತ್ರ ರಣರಸಿಕನು ಮೋಹಿನಿಯ ನಿರ್ಭಯದ ನಡಿಗೆಯನ್ನೂ ಅವಳು ಧೈರ್ಯದಿಂದ ನಾನಾಬಗೆಯಾಗಿ ಕೋಟೆ ಕೊತ್ತಳಗಳನ್ನೂ, ಅವುಗಳ ಗಂಡು ಮೆಟ್ಟಿನಸ್ಥಳಗಳನ್ನು ತೋರಿಸುವರೀತಿಯನ್ನೂ ನೋಡಿ ವಿಸ್ಮಯಭರಿತನಾದನು. ಅವಳು ನಿಜವಾಗಿ ಓರ್ವಶೂರ ಸಾಹಸಿ ತರುಣಿ ಇರುವಳೆಂಬದನ್ನು ಚೆನ್ನಾಗಿ ಮನಗಂಡನು.

ಇಷ್ಟಾಗುವದರೊಳಗಾಗಿ ಬಿಸಿಲಿನ ತಾಪವು ಹೆಚ್ಚಾಗಹತ್ತಿತು, ಆದುದರಿಂದ ಈರ್ವರೂ ಮರುಳಿ ಮೋಹಿನಿಯ ಮಂದಿರಕ್ಕೆ ಬಂದರು.

✣ ✣ ✣ ✣ ✣ ✣ ✣ ✣ ✣

ಒಂದು ದಿವಸವಾಯಿತು, ಎರಡುದಿವಸಗಳು ಹೋದವು, ವಾರವು ಮುಗಿಯಿತು, ಹದಿನೈದು ದಿವಸಗಳು ಜರುಗಿದವು; ಆದರೂ ಮೋಹಿನಿಯ ಮೋಹ ಪಾಶದಲ್ಲಿ ಸಿಲುಕಿ ಬಿದ್ದ ರಣರಸಿಕನು ಮಾಲತಿಯ ಮನೆಯ ಕಡೆಗೆಸಹ ಸುಳಿಯಲಿಲ್ಲ. ರಾಜಪುತ್ರನನ್ನು ಅತ್ತಕಡೆಗೆ ಹೋಗ ಗೊಡಬಾರದೆಂಬ ಮೋಹಿನಿಯ ವಿಶ್ವಪ್ರಯತ್ನವು ಒಂದೇಸವನೆ ನಡೆದಿತ್ತು. ಈ ಹೊತ್ತು ಈ ಸ್ಥಳವನ್ನು ನೋಡೋಣ, ನಾಳೆ ಮತ್ತೊಂದು ದುರ್ಗವನ್ನು ನೋಡೋಣ, ನಾಡದು ಮತ್ತೊಂದು ಗ್ರಾಮವನ್ನು ನೋಡೋಣವೆಂದು

ತನ್ನಿಂದ ದೂರಾಗದಂತೆ ಏನಾದರೊಂದು ಯುಕ್ತಿಯನ್ನು ತೆಗೆದು, ಅವನನ್ನು ಅಗಲದಂತೆ ಪ್ರಯತ್ನ ನಡೆಸಿದ್ದಳು. ರಾಜಪುತ್ರನು ಆನವಯುವತಿಯ ಬೆಡಗಿಗೆ ಭ್ರಾಂತನಾಗಿ ಎಲ್ಲವನ್ನೂ ಮರೆತು ಕುಳಿತುಕೊಂಡಿದ್ದನು. ಸೇನಾನಿ ಕೃಷ್ಣಕಾಂತರು ಎರಡು ಮೂರುಸಾರೆ ಯಾರಿಗೂ ತಿಳಿಯಗೊಡದಂತೆ ಸ್ವತಃ ಬಂದುನೋಡಿದರು. ಲೇಖವನ್ನು ಕಳುಹಿದರು; ಆದರೂ ಅದರಿಂದೇನೂ ಪ್ರಯೋಜನವಾದಂತೆ ಕಂಡುಬರಲಿಲ್ಲ.

ಕಾಗದ ಕೈಯೊಳಗೆ ಇರುವವರೆಗೆ ಮಾತ್ರ ತುಸು ಸ್ಮರಣೆಬಂದಂತಾಗುತ್ತಿತ್ತು. ಕೈಯೊಳಗಿನ ಕಾಗದ ಕೆಳಗೆಬೀಳುತಲೆ. ಪುನಃ ವಿಸ್ಮರಣೆ. ಅವನಿಗೆ ಮೋಹಿನಿಯ ಮೋಹಕ ಸ್ವರೂಪದಹೊರ್ತು ಯಾವುದೂ ಕಾಣಬರುತ್ತಿದ್ದಿಲ್ಲ.

ಹಾಯ್! ಅವನ ಈ ಕೃತಿಯಮೇಲಿಂದ ಸರ್ವೇಶ್ವರನ ಸಾಕ್ಷಿಯಾಗಿ ಮಾಲತಿಗೆ ಕೊಟ್ಟವಚನದ ವಿಸ್ಮರಣೆಯು ಅವನನ್ನು ಪೂರ್ಣ ಆವರಿಸಿತ್ತೆಂದು ನಿಃಸಂಶಯವಾಗಿ ಹೇಳಬಹುದು.

ರಾತ್ರಿಯಾಗುತಲೆ ಶಯನಗೃಹಕ್ಕೆ ತೆರಳಿದನು. ಪರ್ಯಂಕದ ಮೇಲೆ ಪವಡಿಸಿದನು. ಮೋಹಿನಿಯ ಮೆಲಣ, ಮೋಹಪರವಶತೆಯಿಂದ, ಅವನಿಗೆ ನಿದ್ರೆಯೇಬರಲಿಲ್ಲ. ಆಮುಗ್ಗಲಿಂದ ಈಮುಗ್ಗಲಿಗೆ ಈಮುಗ್ಗಲಿಂದ ಆಮುಗ್ಗಲಿಗೆ ಹೊರಳಾಡಿ ಬೇಸತ್ತನು. ಕಟ್ಟಕಡೆಗೆ ತುಸುನಿದ್ರೆಯು ಹತ್ತಿತು.

ಹತ್ತುವದೊಂದೇತಡ, ಮ್ಲಾನ ಮುಖವುಳ್ಳವಳಾದ ಮಾಲತಿಯು ಅಧೋವದನಳಾಗಿ ಎದುರಿನಲ್ಲಿ ನಿಂತಿರುವದನ್ನು ಕಂಡನು. ಅವಳನ್ನು ಮಾತಾಡುವವಾಗಿ ನಾನಾಬಗೆಯಿಂದ ಕೇಳಿಕೊಂಡನು. ಬಗೆಬಗೆಯಾಗಿ ಸಂತೈಸಿದನು. ಆದರೆ ಅವಳೇನು ಇವನನ್ನು ಕಣ್ಣೆತ್ತಿ ನೊಡಲಿಲ್ಲ. ಇಷ್ಟರಲ್ಲಿ ಅವಳ ಪಾಲಕ ವೃದ್ಧನೂ ಕಾಣಹತ್ತಿದನು.

ಅವನಾದರೂ ಮೊಗನೆಗುಹಿ ಇವನನ್ನು ನೊಡಿದವನಾಗಲಿಲ್ಲ ರಸಿಕನು ಮುಂದಡಿ ಇಟ್ಟು ನೋಡಹೋಗಲು ತಿರಸ್ಕಾರ ಮುದ್ರೆಯಿಂದ ಮೊಗದಿರುವಿದನು.

ರಾಜಪುತ್ರನು ತನ್ನಿಂದಾದ ಅಕ್ಷಮ್ಯ ತಪ್ಪಿನ ಕ್ಷಮೆಬೇಡಿಕೊಂಡು, ನಮಸ್ಕರಿಸಹೋದನು. ಅವನ ಕೈಯನ್ನು ಹಿಂದಕ್ಕೆ ಸರಿಸಿ ಮುದುಕನು ಮುಂದಕ್ಕೆನಡೆದನು.

ಇಷ್ಟರಲ್ಲಿ ಎಚ್ಚರವಾಯಿತು. ಮಾಲತಿಯೂ ಇಲ್ಲ ಆವಳಪಾಲಕಮುದುಕನೂ ಇಲ್ಲ. ಮಂಚದಿಂದ ಕೆಳಗೆಬಿದ್ದ ತಾನೂ ತನ್ನಹೊರ್ತು ಅನ್ಯರು ಯಾರೂ ಅಲ್ಲಿ ಇರಲಿಲ್ಲ.

ಪೂರ್ಣ ಎಚ್ಚರವಾಗುತಲೆ, ನಿಜಸ್ಥಿತಿಯು ಕಣ್ಣಿಗೆಕಟ್ಟಿದಂತಾಗಿ, ಅವನು ಮನಸ್ಸಿನಲ್ಲಿ ವಿಚಾರಮಾಡಹತ್ತಿದನು. ಮಾಲತಿಯ ನಿರ್ಮಲಪ್ರೇಮ ಶೌರ್ಯಸಹಾಸಾದಿ ಗುಣಗಳು, ವಿಶ್ವೇಶ್ವರನೆದುರಿಗೆ ಮಾಡಿದ ಅವಳ ನಿಷ್ಕಲಂಕ ಪ್ರೇಮದ ಯಾಚನೆಯೂ, ಇವೆಮುಂತಾ ಸುಗುಣಗಳೂ, ಅದಕ್ಕನುಗುಣವಾದ ಅವಳಸೌಂದರ್ಯವೂ, ದೃಷ್ಟಿಪಥಕ್ಕೆ ಬಂದಂತಾಗಿ, ಅವನ ಮನಸ್ಸು ಒಂದೆಡೆಯಲ್ಲಿ ನಿಲ್ಲದಾಯಿತು. ಅವನು ತನ್ನಷ್ಟಕ್ಕೆತಾನೇ ‟ ಅಯ್ಯೋ‌ನಾನು ಎಂಥ ಮೋಹಾಂಧನು, ಮೂರು ವಾರಗಳು ಕಳಿದು ಹೋದರೂ ನಾನು ಮಾಲತಿಯ ನೆನಪನ್ನು ಸಹ ತೆಗೆಯದೇ ಇರುವೆನಲ್ಲ. ಅವಳಸಂರಕ್ಷಕ ಆ ಮುದುಕನು, ವಿಜಯದುರ್ಗವನ್ನು ತೆಗೆದುಕೊಳ್ಳುವ ಕಾಲದಲ್ಲಿ ಮಾಡಿದ ಸಹಾಯವಾದರೂ ಎಷ್ಟಿದು? ನಿಜವಾಗಿ ನಾನು ಕೃತಘ್ನನು ವಿಶ್ವಾಸಘಾತಕಿಯು.

ಇಷ್ಟರಲ್ಲಿ ಮೋಹಿನಿಯ ಮೋಹಪಾಶವು ಪುನಃ ಇವನನ್ನು ಗಟ್ಟಿಯಾಗಿ ಬಿಗಿದುಬಿಟ್ಟಿತು. ‟ ಒಳ್ಳೇದು, ಈ ದುಷ್ಟಬುದ್ಧಿಯಾದರೂ ಯಾರು? ಎಂಬದಾಗಿ ವಿಚಾರ ಮಾಡಹತ್ತಿದನು. ಒಂದೂ ವಿಚಾರವು ಬಗೆಹರಿಯದಂತೆಯಾಯಿತು. ನಾನಾಬಗೆಯ ವಿಚಾರತರಂಗಗಳು ಒಂದರಮೇಲೊಂದು ಬರತೊಡಗಿದವು. ಮನಸ್ಸಿಗೆ ಸಮಾಧಾನ ವಿಲ್ಲದೆ ಹೋದುದರಿಂದ, ಕುದುರೆಗೆ ಥಡಿಹಾಕಲುಹೇಳಿ ತಾನೂ ಸೈನ್ಯದ ಉಡುಪು ತೊಡಪನ್ನು ರಿಸಿ, ಮಾಲತಿಯ ವಸತಿಸ್ಥಾನದ ಕಡೆಗೆ ಒತ್ತರದಿಂದ ಸಾಗಿದನು.

ಒಡೆಯನ ಸನ್ನೆಯ ಮೇರೆಗೆ ಅಶ್ವವು ವಾಯುವೇಗದಿಂದ ನಡೆದು ತಾಸೆರಡು ತಾಸಿನಲ್ಲಿ ದಿನ್ನೆಯಬುಡವನ್ನು ಸೇರಿತು.

ದಿನ್ನೆಯ ಮೇಲೇರಿ ಹೋಗಿ ನೋಡುತ್ತಾನೆ! ಏನು ಇರುವದಲ್ಲಿ ? ಬೈಲುಪ್ರದೇಶವು ವಿಶಾಲವಾಗಿ ಪಸರಿಸಿದ್ದು, ಚಪ್ಪರ ಗುಡಿಸಲುಗಳಾವೂ ಇದ್ದಿಲ್ಲ. ಇದಲ್ಲದೆ ಎಡಬಲದಲ್ಲಿ, ಜನವಸ್ತಿಯ ಚಿನ್ಹವೂಸಹ ಕಾಣಬರು ವಂತಿದ್ದಿಲ್ಲ. ಎಲ! ಇದೇನು!! ದಾರಿತಪ್ಪಿರಲಿಕ್ಕಿಲ್ಲವಷ್ಟೇ ? ಎಂದು ಮನದ ಲ್ಲಿಯೇ ಗುಣಗುಟ್ಟಿದನು. “ಮಾಲತಿಯ ಗುಡಿಸಲೆದುರಿಗೆ ಇದ್ದ ಗಿಡವು ಮಾತ್ರ ಇದೇಇರುವದು ನಿಜ, ಆದರೆ ಗುಡಿಸಲವೂ ಇಲ್ಲ. ಮಾಲತಿಯೂ ಇಲ್ಲ, ಎತ್ತಹೋಗಿರಬಹುದು,” ಎಂದು ವಿಚಾರ ಮಾಡುತ್ತ ಕುದುರೆಯ ನ್ನು ಕೈಯಲ್ಲಿ ಹಿಡಿದುಕೊಂಡು, ಹಾಗೆಯೇ ತುಸುಮುಂದಕ್ಕೆ ಸಾಗಿದನು;

ಆದರೆ ಅಲ್ಲಲ್ಲಿಬಿದ್ದಿದ್ದ ನೆತ್ತರದ ಕಣಗಳುಮಾತ್ರ ಕಾಣದೆ ಹೋಗ ಲಿಲ್ಲ. ಅವನು ಸ್ತಂಭಿತನಾಗಿ “ಇದು ಇರುವದಾದರೂ ಏನು? ಮಾಲತಿ ಯನ್ನು ಪಾಪಕರ್ಮಿಗಳು ಜೇರೆ ಅಪಹರಿಸಿರಲಿಕ್ಕಿಲ್ಲ ವಷ್ಟೇ? ಅಲ್ಲದೆ ಕ್ರೂರ ಶ್ವಾಪದಗಳಿಗಾದರೂ ತುತ್ತಾಗಿರಲಿಕ್ಕಿಲ್ಲವಷ್ಟೇ? ಛೆ! ಇಂಥ ಕ್ಷುದ್ರ ಸ್ಥಿತಿಗೆ ಬರುವಬಾಲೆಯು ಅವಳಲ್ಲ. ಸಮಯಬಂದರೆ, ಕ್ರೂರಕರ್ಮಿಗಳನ್ನು ಕ್ರೂರಶ್ವಾಪದಗಳನ್ನೂ ಹೊಡೆದೋಡಿಸುವ ಅಕ್ಷತ್ರಕುವರಿಯು, ಇಂಥ ಅಲ್ಪ ವಿಷಯಕ್ಕೆ ಹಿಂಜರಿಯುವಳೇ ? ಇಲ್ಲ! ಇದರಭೇದವೆ ತಿಳಿಯದಂ ತಾಯಿತು” ಇವೇ ಮೊದಲಾದ ಕಲ್ಪನಾತರಂಗದಿಂದ ಅವನಿಗೆ ಏನೂ ತಿ ಳಿಯದಂತಾಯಿತು. ಅವನು ಮೇಲಣಭಾಗವನ್ನು ಎರಡು ಮೂರುಸಾರೆ ಸುತ್ತು ಹಾಕಿದನು. ಕೆಳಗಣಭಾಗಕ್ಕೆ ಮೂರು ನಾಲ್ಕುಸಾರೆ ಪ್ರದಕ್ಷಿಣೆ ಹಾಕಿದನು. ಏನುಮಾಡಿದರು ಆ ಉಭಯರ ಸುಳುವೇ ಹತ್ತದಂತಾಯಿತು.

ಕೊನೆಗೆ ವಿಶ್ವೇಶ್ವರನ ದೇವಾಲಯದ ಕಡೆಗೆ ಹೊರಟನು. ಅಲ್ಲಿಯಾ ದರೂ ಅದೇಪ್ರಕಾರವೇ. ಭಗಿವಾನ್ ಸ್ವಾಮಿಯ ಎದುರಿನ ಸುಂದರವಾದ ಉಪವನವು ಹಾಳಾಗಿ, ಅಲ್ಲಿಯ ಶೋಭಾಯಮಾನವಾದ ಸುವಾಸನೆಯ ಹೂಗಳ ಬಳ್ಳಿಗಳು ಹೇಳಹೆಸರಿಲ್ಲದಂತಾಗಿ ಹೋಗಿದ್ದವು. ವಿಶಾಲವಾ

ದ ವಟವೃಕ್ಷದ ಅಡೆಯಲ್ಲಿದ್ದ ಸಂಗಮುರವರಿಯು ಕಟ್ಟೆಯೂ ಅದರ ಸುತ್ತಲಿನ ನಾನಾಬಗೆಯ ಬಳ್ಳಿಗಳೂ ಅಲ್ಲೊಂದು ಇಲ್ಲೊಂದು ಹರಿದು ಬಿದ್ದಿದ್ದವು. ಅಲ್ಲಿಜರುಗಿದರೀತಿಯನ್ನು ನೋಡುತಲೆ, ಅವನ ಅಂತಃಕರಣ ಕರಿಗಿ ನೀರಾಯಿತು. "ಆಯ್ಯೋ! ಇದರನಾಶನ್ನು ಯಾರು ಮಾಡಿರಬಹುದು? ಆ ಬಡಬಾಲೆಯ ಅವಸ್ಥೆ ಏನಾಗಿರಬದು? ಹಾಯ್ ಪರಮೇಶ್ವರ! ನಿನ್ನ ಲೀಲೆಯು ಆಗಾಧವಾದದ್ದು, ನೀನು ಭಯಕದ್ ಭಯನಾಶನನಿರುವಿ. ಎರಳಿತಗಳು ನಿನ್ನಹೊರ್ತು ಯಾರಿಗೂ ತಿಳಿಯಬರುವಂತಿಲ್ಲ." ಹೀಗೆ ಬಗೆ ಬಗೆಯಾಗಿ ವಿಚಾರಮಾಡುತ್ತ ನಿಂತಿದ್ದನು.

ಇಷ್ಟರಲ್ಲಿ ಭಾಣಗಳು ಸೂ ಸೂ ಎನ್ನುತ್ತ ಬರಲು ಪ್ರಾರಂಭಿಸಿದವು. ಅವನು ಮೆಟ್ಟಬಿದ್ದು ತಿರುಗಿನೋಡಲು ಆಯುಧಪಾಣಿಗಳಾದ ನಾಲ್ವತ್ತು ಐವತ್ತು ಜನ ರಾಹುತರು ತನ್ನ ಕಡೆಗೆ ಸಮಿಾಪದಲ್ಲಿ ಬರುತ್ತಿರುವದು ಕಂಡುಬಂದಿತು. ಈ ಹೊತ್ತಿನಲ್ಲಿ ರಾಜಪುತ್ರನ ಕೈಯಲ್ಲಿ ಢಾಲು ಭಾಲೆಗಳಾಗಲೀ, ಹೆಗಲಮೇಲೆ ಬಾಣಬತ್ತಳಿಕೆಗ ಳಾಗಲೀ, ಯಾವೂಇದ್ದಿಲ್ಲ. ಟೊಂಕದಲ್ಲಿ ಕತ್ತಿಯೊಂದು ಮಾತ್ರ ನೇತಾಡುತ್ತ ಲಿದ್ದಿತು, ಇದಲ್ಲದೆ ಪಾದಚಾರಿಯಾಗಿ ನಡೆದಿದ್ದುದರಿಂದ, ಪ್ರೀತಿಯ ಅಶ್ವವು ಎಲ್ಲಿಯೋಹಿಂದುಳಿದಿತ್ತು.

ಅವನು ತುಸು ಗೊಂದಲದಲ್ಲಿಯೇ ಬಿದ್ದನು. ಇಂಥಕಠಿಣಮಯ ಪರಿಸ್ಥಿತಿಯಲ್ಲಿ, ಕೈಕಾಲುಬಿಟ್ಟು, ಸುಮ್ಮನೆ ಕುಳಿತುಕೊಳ್ಳುವ ತರುಣನು ಅವನಿದ್ದಿಲ್ಲ. ಆವನು ಕೂಡಲೇ ಟೊಂಕದಲ್ಲಿ ಅಲೆದಾಡುವ ಕತ್ತಿಯನ್ನು ಒರೆಯಿಂದ ಹಿರಿದು, ಮೈಮೇಲೆ ಬರುವ ಎದುರಾಳಿಗಳನ್ನು ಎದುರಿಸಿ, ನಿಂತುಗೊಂಡನು. ನಿಮಿಷಾರ್ಧದಲ್ಲಿ ರಾವುತರು ಇವನ ಸುತ್ತಲೂ ಪಸರಿಸಿದರು. ಐವತ್ತುಜನ ರಾಹುತರೊಳಗೆ ಓರ್ವಕಾಲಾಳುವಿನ ಕೊನೆಸಾಗುವಬಗೆ ಹೇಗೆ; ಆದರೆ ನಮ್ಮ ಕನ್ನಡ ಕೆಚ್ಚೆದಯವೀರನು, ಸಾಮಾನ್ಯನಿದ್ದಿಲ್ಲ. ತನ್ನ ಹರತಾದ ನಾಗಗತ್ತಿಯನ್ನು ಸಿಲ್ಲಲು ಅನುವುಗೊಡದಂತೆ, ತಿರಿಗಿಸುತ್ತ, ಎದುರುಬರುವ ಎದುರಾಳಿಗಳ ಬಾಣವನ್ನು ಮೈಗೆತಗಲದಂತೆ ಖಂಡಿಸುತ್ತ, ಸಾಗಿಹೋಗಿ, ಮೂವರು ನಾಲ್ವರು ಸೈನಿಕರನ್ನು ನೆಲಕ್ಕುರಿಳಿಸಿದನು

ಕತ್ತಿಯಾದರೂ ಒಂದೇ ಇದ್ದುದರಿಂದ ಎಷ್ಟು ಎಚ್ಚರದಿಂದ ತಿರುವುತ್ತಿದ್ದರೂ, ಮೂರುನಾಲ್ಕು ಬಾಣಗಳು ಯಾವ ಮಾಯದಿಂದಲೋ ಮೈಯಲ್ಲಿ ಬಂದುನಟ್ಟಿದ್ದವು. ರಕ್ತಪ್ರವಾಹವೂ ಝರಿಯಂತೆ ನಡೆದಿತ್ತು. ರಕ್ತಪಾತದ ಹೆಚ್ಚುವಿಕೆಯಿಂದ ಮೈಯಲ್ಲಿಯ ಶಕ್ತಿಯು ಕಡಿಮೆಯಾಗಿ ಹಸ್ತಲಾಘವು ಮಂದಗತಿಯನ್ನು ಹೊಂದ ಹತ್ತಿತು. ಇಷ್ಟರಲ್ಲಿ ಯಾವನೋ ರಾಹುತನು ಖಡ್ಗವನ್ನು ನೆಗುಹಿ ಕುತ್ತಿಗೆಗೆ ಹಾಕುವನು, ಅಷ್ಟರಲ್ಲಿ ಎದುರಿಗಿರುವ ಗಿಡಗಳ ಗುಂಪಿನೊಳಗಿಂದ ಸರ್‌ಎನ್ನುತ್ತ ಒಂದು ಬಾಣವುಬಂದು ಅವನ ಹೃದಯವನ್ನು ಪ್ರವೇಶಿಸಿ ಎತ್ತಿದ ಕೈಯನ್ನು ಕೆಳಗಿಳಿಸಿತು. ಒಂದರಹಿಂದೊಂದು ಮೇಲಿಂದ ಮೇಲೆ ಬಾಣಗಳು ಬರಹತ್ತಿದ್ದರಿಂದಿ ಏಳೆಂಟು ರಾಹುತರು ಭೂಮಿಗೆ ಬಿದ್ದರು. ಉಳಿದವರು ಮರುಳಿ ಗಿಡಗಳಕಡೆಗೆ ಬಂದು ನೋಡುತಲೆ ಬಾಣಬತ್ತಳಿಕೆಗಳಿಂದ ಸಜ್ಜಾದ ಹತ್ತುಹನ್ನೆರಡು ಜನಬೇಡರು, ಎದುರಿಗೆ ಬರುತ್ತಿದ್ದು, ರಸಿಕನನ್ನುಬಿಟ್ಟು ರಾಹುತರು ಅವರಿಗೆ ಎದುರಾಗಿ ಕಾದಹತ್ತಿದರು.

ರಸಿಕನು ಆವೇಶದಿಂದ, ಖಡ್ಗವನ್ನು ತಿರುಗುತ್ತ ಅವರನ್ನು ಹಿಂಬಾಲಿಸಿದನು. ಆದರೆರಾಹುತರೆದುರಿಗೆ ಕಾಲಾಳುಗಳ ಆಟವು ಹೇಗೆ ಸಾಗಬೇಕು, ಬೇಡರು ನಿಮಿಷಾರ್ಧದಲ್ಲಿ ಹೊರಗೆಬಂದು ಹೊಡೆಯುತ್ತ, ಪುನಃ ಗಿಡಗಳ ಹೊದರುಗಳಲ್ಲಿ ಅಡಿಗಿಕೊಳ್ಳುತ್ತ ಅಂತೂ ಅರ್ಧಸೈನಿಕರನ್ನೂ ಭೂಮಿಗೆ ಉರುಳಿಸಿದರು.

ಇದೆಲ್ಲವನ್ನು ನೋಡುತಲಿದ್ದ, ರಣರಸಿಕನು, ಚಕಿತನಾಗಿ ಹೋಗಿದ್ದನು. ಇಷ್ಟರಲ್ಲಿ ಹಿಂದಿನಿಂದ ಓರ್ವ ಸೈನಿಕನು ಸದ್ದಿಲ್ಲದೆ ಬಂದು ತನ್ನ ಬರ್ಚಿಯಿಂದ ರಸಿಕನ ಖಡ್ಗಹಿಡಿದ ಕೈಗೆ ಬಲವಾಗಿ ತಿವಿದನು. ಕೂಡಲೆ ರಸಿಕನಿಗೆ ಬಲವಾದ ಘಾಯವಾಗಿ ಮೂರ್ಛೆಯಿಂದ ನೆಲಕ್ಕೆ ಬಿದ್ದನು. ಬಹಳಹೊತ್ತಿನಮೇಲೆ ಎಚ್ಚರವಾಯಿತು. ಎದ್ದುಕುಳಿತು ಹಿಂದು ಮುಂದೆ ನೋಡುತ್ತಾನೆ, ತನ್ನಮೇಲೆ ಕೈಮಾಡಿದ ರಾಹುತನು ಗತಪ್ರಾಣನಾಗಿ ಸಮೀಪದಲ್ಲಿಯೇ ಬಿದ್ದಿದ್ದನು. ಅವನನ್ನುಳಿದು ತನ್ನಮೇಲೇರಿಬಂದ ರಾಹುತರಲೋರ್ವನೂ ಅಲ್ಲಿ ಇರಲಿಲ್ಲ.

ಇಷ್ಟರಲ್ಲಿ ಕುದುರೆಯ ಖುರುಗಳ ಸಪ್ಪಳವು ತೀರಸಮೀಪದಲ್ಲಿ ಕೇಳ ಬರಹತ್ತಿದವು, ರಸಿಕನು ಜೋಲಿಯನ್ನಾವರಿಸುತ್ತ ಮೆಲ್ಲಗೆ ಮೇಲಕ್ಕೆದ್ದನು. ಅವನಿಗೆ ಗಾಯವಾದರೂ ಬಹಳವಾಗಿದ್ದಿತು. ಎದುರಿಗೆ ನೋಡುತ್ತಲೆ ಹತ್ತು ಹದಿನೈದುಜನ ತನ್ನ ಅನುನಾಯಿಗಳೊಂದಿಗೆ ಮೋಹಿನಿಯು ಅಶ್ವಾರೂಢಳಾಗಿ ಒತ್ತರದಿಂದ ಬರುತ್ತಿರುವದು ಕಂಡಿತು.

ಕ್ಷಣಾರ್ಧದಲ್ಲಿ ಸಮೀಪಕ್ಕೆ ಬಂದಳು, ಕುದುರೆಯನ್ನಿಳಿ ಇಳಿಯುತ್ತ ಮೋಹಿನಿಯು "ಯುವರಾಜರೇ ! ಈ ಮೈಮೇಲಣ ಗಾಯಗಳೇನು ? ನಾನಾದರೂ ತಮ್ಮಹಿಂದೆಯೇ ಹೊರಟೆನು. ಬರಲುಮಾತ್ರ ತುಸುತಡವಾಯಿತು." ಎಂದು ಅಂಜಿದವಳಂತೆ ನಟಿಸಿ, ಈ ಗಿಡಗಂಟೆಗಳಹಿಂದೆ ಯಾರೋ ಅರಣ್ಯವಾಸಿಗಳಾದ ಅಡವಿಯ ಚಂಚರು, ಹುದಿಗಿಕೊಂಡು ಕುಳಿತಿರುವಂತೆ ಕಾಣುತ್ತದೆ. ಇವರೇಕೆ ಜಗಳಾಡಿರಬಹುದು?"

ಮೋಹಿನಿಯ ಮಾತು ಕೇಳುತಲೆ ರಾಜಪುತ್ರನು ಹೊರಳಿನೋಡಿದನು. ನೋಡುತಲೆ ಗಿಡದಮರೆಯಲ್ಲಿ, ಮೋರೆಯನ್ನಷ್ಟೇ ಹೊರಗೆ ತೆಗೆದುಕೊಂಡು, ದಯಾರ್ದ್ರ ದೃಷ್ಟಿಯಿಂದ, ತನ್ನನ್ನೇ ನೋಡುವ, ಮಾಲತಿಯ ಸುಂದರವಾದ ಮುಖವು, ಕಾಣಬಂದಿತು. ಅವನು ಮೈಮರೆತು ಒಮ್ಮಿಂದೊಮ್ಮೆ "ಮಾಲತೀ! ಇತ್ತಕಡೆಗೇಕೆ ಬಂದಿರುವಿ?" ಎಂದು ಗಾಯಗಳಪರವೇ ಇಲ್ಲದೆ ಅವಳೆಡೆಗೆ ಒತ್ತರದಿಂದ ಹೋಗಲುಪಕ್ರಮಿಸಿದನು. ಹೆಜ್ಜೆ ಇಡುತಲೆ ಗಾಯಗಳಗಲಾಗಿ ಅವರೊಳಗಿಂದ ನೆತ್ತರವು ಧಾರಗಟ್ಟಿ ಸೋರಹತ್ತಿತು.

ಆಗಲೇ ಮೋಹನಿಯು ತಾನುಹೊದೆದ ಅಚ್ಚರೇಶಿಮಿಯ ಶಾಲನ್ನು ಹರಿದು ಗಾಯಗಳನ್ನು ಕಟ್ಟುತ್ತ "ಕುಮಾರ, ಇದನ್ನೇ ನುಪಕ್ರಮಿಸಿರುವಿರಿ! ನಿಮ್ಮಲ್ಲಿ ಈತರದ ಹುಚ್ಚೇಕೆ ಸೇರಿತು? ಯಾವದುಷ್ಟಿಯವಳು ಮಾಲತಿ ಯನ್ನುವವಳು? ಓರ್ವ ಕಂಗಾಲ ಬೇಡನ ಕನ್ಯೆಯು ಇರಬಹುದು ! ನಿಲ್ಲಿರಿ, ಬೇಕಾದರೆ ಈಗಲೆ ಅವಳನ್ನು ಹಿಡಿದು ನಿಮ್ಮಬಳಿಗೆತರುವೆನು. ಅವಳೇಒಡ್ಡಿರಬಹುದು. ಈತರದಬಲೆಯನ್ನು! ರಾಜಪುತ್ರನು ಅವಳಾಡಿ

ದವಾತಿಗೆ ಪ್ರತ್ಯುತ್ತರವನ್ನೀಯಲಿಲ್ಲ. ಅವನು ಒಂದುಸಾರಿ ಮೋಹಿನಿಯ ಆವೇಳೆಯುಮೋಹಕ-ಅಲ್ಲ, ತಿರಸ್ಕಾರದರ್ಶಕ ಮೊಗವನ್ನು ನೋಡಿ **ಮಾಲತಿ** ಯ ಮುಖವನ್ನು ನೋಡಬೇಕೆಂದು ಆಕಡೆಗೆ ಮೊರೆದಿರುವಿ ‘‘ **ಮಾಲತಿ!** ಹೃದಯೇಶ್ವರಿ!! ಎಂಬ ಅಸ್ಪಷ್ಟ ಬಾಯೊಳಗಿನ ಶಬ್ದವು ಬಾಯಿಯೊಳಗೆ ಇದ್ದಿತು. ಇಷ್ಟರಲ್ಲಿ ಮಾಲತಿಯು ಹೃದಯ ವಿದೀರ್ಣಸ್ವರದಿಂದ ‘‘ಕುಮಾರ! ತಮಗೆ ಬಲವಾದ ಗಾಯಗಳಾಗಿವೆ, ಹೆಚ್ಚಿಗೆ ಮಾತಾಡುವ ಹವ್ಯಾಸಕ್ಕೆ ಹೋಗಬೇಡಿರಿ, ನನ್ನಸಲುವಾಗಿತಾವು ಇಷ್ಟೊಂದುವ್ಯಾಕುಲಚಿತ್ತರಾಗಬೇಡಿರಿ. ನಾನು ತಮಗೆ ಕೊಟ್ಟವಚನದ ಸತ್ಯತೆಗಾಗಿ ಇಲ್ಲಿಯವರೆಗೆ ಬಂದು, ತಮ್ಮನ್ನು ಸಂಕಟದೊಳಗಣಿಂದ ಪಾರುಮಾಡಲು, ಹೆಣಗಾಡಬೇಕಾಯಿತು. ತಮ್ಮ ನಿಷ್ಕಲುಷಪ್ರೇಮವು, ಎಷ್ಟುದೂರವಲ್ಲಿದ್ದರೂ ಕಡಿಮೆಯಾಗುವಂತಿಲ್ಲ. ತಾವು ಸುಖರೂಪದಿಂದಿರುದದನ್ನು ನೋಡಿ, ನನಗೂ ಸಮಾಧಾನವಾಗಿದೆ. ಇಲ್ಲಿಯ ಎಲ್ಲ ನಿಜಾಂಶವನ್ನೂ ನಾನೂ ತಿಳಿದಿರುವೆನು

ಹಿಂದಿನಿಂದಬರುವ ಸ್ಪಷ್ಟೋಕ್ತಿಗಳನ್ನು ಕೇಳಿ, ಮೋಹಿನಿಯು, ತನ್ನ ಕೈಕೆಳಗಿನ ಜನರಿಗೆ? ‘‘ ಎಲೋ ಹಿಂದೆಗಿಡದ ಮೊರೆಯಲ್ಲಿ ಯಾವಳೋ ಮಾನವೀಯ ರಾಕ್ಷಸಿಯು. ಮಾತಾಡುವಂತೆ ಕಾಣುತ್ತದೆ. ಹಿಡಿಯಿರಿ ಅವಳನ್ನು! ಹೆಡಮುರಿಗೆ ಕಟ್ಟಿರಿ ’’

ರಸಿಕ! ‘‘ಪ್ರಿಯೇ, ಬೇಡ! ಹಾಗೆಮಾಡಬೇಡ ನನ್ನಾಣೆಯಾಗಿದೆ.’’ ಎಂದು ನುಡಿದನು. ಪುನಃ- ಮಾಲತಿ! ಮಾಲತಿ!! ಎಂದು ಹಂಬಲಿಸತೊಡಗಿದನು. ಆದರೆ ಅಲ್ಲೇನಿದೆ, ಮಾಲತಿಯೂಇಲ್ಲ ಪುಷ್ಪವೂಇಲ್ಲ. ಅವಳು ಯಾವಾಗಲೋ ಆಗಿಡಗಂಟೆಗಳಲ್ಲಿ ಮಾಯವಾಗಿ ಹೋಗಿದ್ದಳು. ರಸಿಕನಿಗಂತೂ ಹುಚ್ಚು ಹಿಡಿದಂತೆ ಯಾಯಿತು. ಅವನು ಮತ್ತು ‘‘ ಮಾಲತಿ! ಮಾಲತಿ!! ಎಂದು ಗಟ್ಟಿಯಾಗಿ ಒಂದೇಸವನೆ ಕೂಗತೊಡಗಿದನು. ಆದರೆ ಏನಿದೆ? ಸುತ್ತಲೂ ದಿನ್ನೆಗಳಿದ್ದು, ತೆಗ್ಗಾದ ಆಪ್ರದೇಶದಲ್ಲಿ, ತನ್ನ ಶಬ್ದದ ಪ್ರತಿಧ್ವನಿಯೇ ನಾಲ್ಕೂಕಡೆಯಿಂದ ಕೇಳಬರಹತ್ತಿತು.

ಮಂದಹಾಸದಿಂದ ಮೋಹಿನಿಯು ‘‘ ರಾಜಪುತ್ರರೇ ಇದೇನುಚಮತ್ಕಾರ! ಹೀಗೇಕೆಮಾಡುವಿರಿ? ಯಾರನ್ನು ಕರೆಯುತ್ತಿರುವಿರಿ? ಯಾವಳವ

ಳು ಮಾಲತಿಎನ್ನುವಳು? ಅವಳ ವಸತಿ ಸ್ಥಾನವಾದರೂ ಎಲ್ಲಿರುವದು? ಅವಳು ಎಂದೋ ಓಡಿಹೋಗಿರುವಳು. ಅವಳಿಗೂ ನಿಮಗೂ ಎಲ್ಲಿಯ ಪರಿಚಯ? '' ಎಂಬದಾಗಿ ನುಡಿದಳು.

ರಣರಸಿಕ— " ನೀನನ್ನುವದೇನು? ಅವಳಗುರುತು ಇರುವದೇ ನಿನಗೆ? '' ಎಂದು ಮೆಲ್ಲಗೆ ಕೇಳಿದನು. ಆಶ್ಚರ್ಯತೆಯಿಂದ ಮೋಹಿನಿಯು, ಗೊತ್ತಿರದೆ ಏನು? ಅವಳ ವಿಷಯಕ್ಕೆ ಎಲ್ಲವೂಗೊತ್ತಿದೆ, ಅವಳನ್ನು ಕಣ್ಣಿಂದಮಾತ್ರ ನೋಡಿರುವದಿಲ್ಲ. ಅವಳು ಓರ್ವದಾಸಿಯ ಪುತ್ರಿಯು ಇರುವಳು ಕುಳಿತವನು ಮೇಲಕ್ಕೆದ್ದು ಆವೇಶದಿಂದ " ಏನು? ಏನನ್ನುವಿ? ಅವಳು ದಾಸಿಯ ಮಗಳೋ? ಆವದಾಸಿಯಮಗಳು? ನಿಜಾಂಶವನ್ನು ಮರೆಮಾಚದೆಹೇಳು.

ತನ್ನಸುಂದರ ಮೊಗದಮೇಲೆ ಮಂದಸ್ಮಿತವನ್ನುತಂದು, ಮೋಹಿನಿಯು " ಇಶ್! ರಾಜಕುಮಾರ!! ಇಷ್ಟೊಂದು ಆವೇಶವೇಕೆ? ಇತ್ತನೋಡಿರಿ ಪುನಃ ಗಾಯದಿಂದ ರಕ್ತ ಸೋರಹತ್ತಿತು. !! ಎಂದು ತಾನು ಉಟ್ಟುಕೊಂಡ ರೇಶಿಮೆಯ ಸೀರೆಯ ಶೆರಗನ್ನು ಹಿಂದುಮುಂದು ನೋಡದೆ ಹರಿದು, ಹತ್ತಿದ ನೆತ್ತರವನ್ನು ಒರೆಯಿಸಿ ಮತ್ತೊಂದು ತುಣಕನ್ನು ಹರಿದು ಗಾಯಗಳನ್ನು ಗಟ್ಟಿಯಾಗಿಕಟ್ಟಿ, ಕನಿಕರಸ್ವರದಿಂದ " ಕುಮಾರ! ಇಲ್ಲತಾವು ಇನ್ನು ಹೆಚ್ಚು ನಿಲ್ಲುವದು ವಿಹಿತ ಕಾಣಿಸುವದಿಲ್ಲ ಮಂದಿರದಕಡೆಗೆ ಹೋಗುವದೇ ನೆಟ್ಟಗೆ, ಹತ್ತಿರಿ ಈನನ್ನ ಕರಿಕುದುರೆಯನ್ನು ''

ಅವಳನ್ನು ಮುಂದೆ ಮಾತಾಡಗೊಡದೆ ರಸಿಕನು, ಹಾಗಾದರೆ ನೀನು ಪಾದಚಾರಿಯಾಗಿಯೇ ಬರುವಿ ಏನು?

ಮೋಹಿನಿ— ಛೆ! ಛೆ!! ಪಾದಚಾರಿಏಕೆ? ಯಾವನಾದರೊಬ್ಬ ರಾಹುತನ ಕುದುರೆಯನ್ನೇರಿ ತಮ್ಮನ್ನು ಹಿಂಬಾಲಿಸುವೆನು, ಪ್ರಿಯನೆ! ಬೇಗ ಕುಳಿತುಕೊಳ್ಳಿರಿ. ಗಾಯಗಳಿಗೆ ಗಾಳಿತಗಲುವದು ನೆಟ್ಟಗಲ್ಲ ತುಸುಗಾಳಿ ಹತ್ತಿದರೆ ತೀರಿತು. ಗಾಯವು ಬೇಗನೆ ಮಾಯುವದಿಲ್ಲ ವೇದನೆಯು ಹೆಚ್ಚಾಗ ಹತ್ತುತ್ತದೆ. ತ್ರಾಸಕ್ಕೊಳಗಾಗುವದಕ್ಕಿಂತ ಮೊದಲೇ ಎಚ್ಚರದಿಂ

ದಿರುವದು ನೆಟ್ಟಗಲ್ಲವೇ? ಏಳಿರಿ! ಎಂದು ಕಮಲದ ಪಕಳೆಗಳಂತಿರುವ ತನ್ನ ಕೋಮಲವಾದ ಹಸ್ತಗಳಿಂದ, ಅವನ ಕೈಯನ್ನುಹಿಡಿದು ಎಬ್ಬಿಸಿ ಕುದುರೆಯಮೇಲೇರಿ ಕುಳಿತುಕೊಳ್ಳಲು ಸಹಾಯ ಮಾಡಿದಳು. ಅವಳ ಹಸ್ತಸ್ಪರ್ಶದಿಂದ ಪೂರ್ವದ ಸ್ಥಿತಿಗೆಬಂದ ರಸಿಕನು, ಪ್ರೇಮಾತಿಶಯದಿಂದ ಇಂಥರತ್ನದ ಸಹವಾಸದಿಂದ ಇಷ್ಟೇಗಾಯಗಳೇಕೆ ? ಇಂಥನೂರಾರು ಗಾಯಗಳನ್ನಾದರೂ ಸಹನಮಾಡಬಹುದು, ಎಂದು ಮನದಲ್ಲಿಯೇನುಡಿದನು

ಇರಲಿ, ಪ್ರಿಯತಮೆ! ಇಲ್ಲಿಗೆ ನೀನು ಹೇಗೆಬಂದೆ?

ಮೋಹಿನಿ— ತಾವು ಮುಂಜಾವಿನಲ್ಲಿ ಅಶ್ವಾರೂಢರಾಗಿ ಹೊರ ಹೊರಟಿದುದನ್ನು ನೋಡಿದೆನು. ನನಗೆ ತಮ್ಮ ಸಾಹಸವು ಗೊತ್ತಿದ್ದುದರಿಂದ ಕೂಡಲೇ ತಮ್ಮನ್ನು ಹಿಂಬಾಲಿಸಲು ಏಳೆಂಟುಜನ ರಾಹುತರನ್ನು ಕಳುಹಿದೆನು. ಐವತ್ತು ಅರವತ್ತು ಜನಯೊದ್ಧಾಹರು, ತಮ್ಮನ್ನು ಮುತ್ತುತಲೆ ನಾನು ಕಳುಹಿದವರ ಬ್ಲೋರ್ವನು, ನಾನಿದ್ದೆಡೆಗೆ ಓಡಿಬಂದು ನಡೆದಸಂಗತಿಯನ್ನು ತಿಳಿಸಿದನು. ಆಸುದ್ದಿಯನ್ನು ಕೇಳುತಲೆ, ಹಾಗೆಯೇನಾನು ಕುದುರೆ ಏರಿ ಹೊರಟೆನು. ನನಗೆ ಈಮೊದಲೇ ಸಂಶಯವಿತ್ತು ಆದರೆ—

ರಸಿಕ— ಆದರೆ ಏಕೆ? ಯಾವವಿಷಯವಾಗಿ ನಿನಗೆ ಸಂಶಯಬಂದಿತ್ತು, ಒಂದೂಬಿಡದೆಹೇಳು ಬಚ್ಚಿಡಬೇಡ.

ಮೋಹಿನಿ— “ ಅವನೋ ಇರುವನಲ್ಲ! ಆತುಂಟನು. ಅವನಕೃಷ್ಣ ಕಾರಸ್ಥಾನದ ಸ್ಥಳವೇಇದು. ಅವನು ಓರ್ವ ಸುಂದರದಾಸಿಯ ಪುತ್ರಿಯೊಡನೆ ಇಲ್ಲಿಯೇ ಇರುವನಂತೆ. ” ಎಂಗು ಕೆಳಮೊಗವನ್ನುಮಾಡಿ ನಸುನಗುತ್ತ ಹೇಳಿದಳು.

ಕಣ್ಣು ಕೆಂಪಗೆಮಾಡಿ ಬಾಯಿಅವಡಗಚ್ಚಿ, ರಸಿಕನು- “ ಆ ! ಇದು ಇರುವದಾದರೂ ಏನು? ಇದರಮರ್ಮ ತಿಳಿದುಕೊಳ್ಳಬೇಕೆಂದರೆ, ಒಂದೂ ತಿಳಿಯದಂತಾಗಿದೆ. ” ಎಂದು ದೀರ್ಘಶ್ವಾಸಬಿಡುತ್ತ ಅಡವಿ ಪ್ರತಿಧ್ವನಿಗೊಡುವಂತೆ ಗರ್ಜಿಸಿದನು. ರಸಿಕನಮಾತನ್ನು ದುರ್ಲಕ್ಷಿಸಿ ಮೋಹಿನಿಯು “ ರಾಜಕುಮಾರ! ಅದರಿಲಿ ಇತ್ತನೋಡಿರಿ! ತಾವು ಈದಾರಿ ಹಿಡಿಯುವ

ದೊಂದೇತಡ, ತಮ್ಮಮೇಲೆ ಯಾವುದಾದರೊಂದು, ಅನಿಷ್ಟ ಪ್ರಸಂಗ ಬರಬಹುದೆಂದು ತಿಳಿದು, ಕೂಡಲೇ ತಮ್ಮನ್ನು ಹಿಂಬಾಲಿಸಿದೆನು.

ರಸಿಕ— ಒಳ್ಳೇದು ಬಹಳನೆಟ್ಟಗೆ ಮಾಡಿದೆ. ಸಧ್ಯಕ್ಕೆ ನನ್ನಮನಸ್ಸು ಸ್ಥಿರದಲ್ಲಿಲ್ಲ. ನನಗೆ ವಿಶ್ರಾಂತಿಯು ಅತ್ಯಾವಶ್ಯಕವಿದೆ, ಕೂಡಲೆ ಮೋಹಿನಿಯು ಮುಂದೆಹೋಗಲು ತನ್ನ ಶೇವಕನಿಗೆ ಸಂಕೇತಮಾಡಿ ತಾನೂ ಸುಮ್ಮನೆ ಹಿಂದೆ ನಡೆದಳು.

ರಣರಸಿಕನು ಮೋಹಿನಿಯ ಸಹವಾಸದಲ್ಲಿ ಇಂಹತ್ತಿ ಸುಮಾರು ಒಂದುತಿಂಗಳಾಗುತ್ತ ಬಂದಿತು. ಗಾಯಾಳುವಾಗಿ ಬಂದದಿವಸ ದಿಂದಂತೂ, ಮಲಗಲುಸಹ ಅವಳ ಮಂದಿರದಲ್ಲಿಯೇ ಏರ್ಪಾಟಾಗಿತ್ತು. ಮೋಹಿನಿಯು ಅವನ ಶುಶ್ರೂಷೆಯಬಗ್ಗೆಯೂ, ಆದರಾತಿಥ್ಯದಬಗ್ಗೆಯೂ, ಹೆಚ್ಚಿನ ಶ್ರಮ ತೆಗದುಕೊಳ್ಳುತ್ತಿದ್ದಳು. ಅವಳಿಂದ ಕೈಕೊಂಬುವ ಆದರಾತಿಥ್ಯದಿಂದ ರಸಿಕನು ಅತ್ಯಂತ ಸಂತುಷ್ಟನಾಗಿದ್ದನು.

ಗಾಯಾಳುವಾಗಿ ಮನೆಗೆ ಬಂದನಂತರ ಮೋಹಿನಿಯು ತನ್ನ ಕರಪಲ್ಲವಗಳಿಂದ ಗಾಯುಗಳನ್ನು ಸ್ವಚ್ಛವಾಗಿ ತೊಳೆದು ವನೌಷಧಿಯನ್ನು ಹಾಕಿ ಕಟ್ಟಿ ಅರಸಂಚಿಯ ತುಪ್ಪಳದಂತಹ ಮೃದುವಾದ ಗಾದೆಯಮೇಲೆ ಮಾತಾಡದೆ ಮಲಗಲುಹೇಳಿ ಹೊರಗೆಹೋದಳು. ದೈಹಿಕ ಮಾನಸಿಕ ವ್ಯಥೆಯಿಂದ ಬಳಲಿದ ರಸಿಕನಿಗೆ, ಮುಂದೆ ತುಸು ಹೊತ್ತಿನಲ್ಲಿಯೇ ಗಾಢನಿದ್ರೆಯು ಹತ್ತಿತು. ಮಲಗಿ ಸ್ವಲ್ಪೇಹೊತ್ತು ಆಗಿದ್ದರೂ ನಿದ್ರೆಯು ಚನ್ನಾಗಿ ಹತ್ತಿದ್ದರಿಂದ, ಮನಸ್ಸಿಗೆ ಒಂದುಬಗೆಯ ಸಮಾಧಾನವಾಗಿತ್ತು.

ಐದಾರು ದಿವಸಗಳಲ್ಲಿ ಗಾಯಗಳೂ ಮಾಯುತ್ತ ಬಂದಿದ್ದವು, ಆ ಹೊತ್ತಂತೂ ಮೋಹಿನಿಯು, ತಂದೆ ತಂದೆಯ ಸ್ನೇಹಿತರು ಬರುವರೆಂದು ಹೇಳಿ, ಅವನನ್ನು ಹೊರಗೆಸಹ ಹೋಗಗೊಡದೆ ನಿಲ್ಲಿಸಿಕೊಂಡಿದ್ದಳು. ಊಟದವೇಳೆಯು ಸಮಿಾಪಿಸಿತು. ನಾನಾಬಗೆಯ ಪಕ್ವಾನ್ನಗಳನ್ನು ಸಿದ್ಧಮಾಡಿಸಿದ್ದಳು. ಆರುತಾಸಾಯಿತು. ಏಳುತಾಸಾಯಿತು: ಆದರೂ ದುಷ್ಟಬುದ್ಧಿಯು ತಂದೆಯೊಂದಿಗೆ ಬರುವ ಲಕ್ಷಣವೇ ತೋರಲಿಲ್ಲ. ತಾಟುಗಳ

ನ್ನು ಬಡಿಸಲುಹೇಳಿದಳು, ಇನ್ನು ಈರ್ವರೂ ತುತ್ತು ತೆಗೆದುಕೊಳ್ಳತಕ್ಕವರು

ಇಷ್ಟರಲ್ಲಿ ಚಾರನುಬಂದ ವರ್ತಮಾನ ತಿಳಿಯಿತು. ಒಳಗೆಬರಲು ಆಜ್ಞಾಪಿಸಿದಳು. ತೇಕುತ್ತ ಬಂದಿದ್ದ ಚಾರನು ವಿನಯದಿಂದ ಮುಜುರೆಮಾಡಿ "ದೇವರು ದುಷ್ಟಬುದ್ಧಿಯವರು ಹಿರಿಯರುಬರದ ಹೊರ್ತು ಬರುವದಿಲ್ಲೆಂದು ಕುಳಿತಿದ್ದಾರೆ, ಹಿರಿಯರು ಬರುವದಿಲ್ಲೆಂಬದಾಗಿ ಹೇಳಹತ್ತಿದ್ದಾರೆ"

ಮೋಹಿನಿ— ನೆಟ್ಟಗಾಯಿತು ಖಿನ್ನಮುಖ ಮುದ್ರೆಯನ್ನುಮಾಡಿ, "ಈ ಜಗತ್ತಿನೊಳಗೆ ಈಶ್ವರನಹೊರ್ತು ನನಗೆ ಯಾರೂಇಲ್ಲ. ನಡುವೆ ಬಾಯಿಹಾಕಿ ಚಾರನು ದೇವರು ಧನಿಯರು ಪತ್ರವನ್ನು ಕೊಟ್ಟಿರುವರು, ತೆಗೆದುಕೊಳ್ಳಿ, ಎಂದು ಪತ್ರವನ್ನು ಅವಳಮುಂದಿಟ್ಟು, ಅಪ್ಪಣೆಯ ಪ್ರತೀಕ್ಷೆಮಾಡದೆ ಬಂದದಾರಿಯಿಂದ ಹಿಂದಿರುಗಿದನು.

ಮೋಹಿನಿಯು ಪತ್ರವನ್ನು ಕೈಯಲ್ಲಿ ತೆಗೆದುಕೊಂಡಳು. ಪತ್ರವು ಒಂದು ದೊಡ್ಡ ಅಡವಿಯ ಎಲಿಯಮೇಲೆ ವನಸ್ಪತಿಯ ರಸದಿಂದ ಬರೆಯಲ್ಪಟ್ಟಿತ್ತು. ಓದಲುಪಕ್ರಮಿಸಿದಳು! ಓದುತ್ತ ಓದುತ್ತ ಅವಳ ಚಿತ್ತ ವೃತ್ತಿಯೇ ಬೇರೆಯಾಯಿತು. ಮುಖವು ಕೆಂಪೇರಿತು. ಕೈಗಳು ನಡುಗಹತ್ತಿದವು ಶ್ವಾಸೋಚ್ಛ್ವಾಸವು ಒತ್ತರದಿಂದ ಸಾಗಹತ್ತಿತು. ಇದೆಲ್ಲವನ್ನು ರಣರಸಿಕನ ಮನಸ್ಸು ಗೊಟ್ಟುನೋಡುತ್ತ ಕುಳಿತಿದ್ದನು. ಪತ್ರವು ಮುಗಿಯುತಲೆ, ಅದನ್ನೊಂದು ಕಡೆಗೆ ಒಗೆದು, ನಸುನಗೆಯಿಂದ ತನ್ನಷ್ಟಕ್ಕೆತಾನೇ ಅಸ್ಪಷ್ಟ ಸ್ವರದಿಂದ "ಅಪ್ಪನು ಒಮ್ಮಿಂದೊಮ್ಮೆ ಆಕಾಶಕ್ಕೆ ಕೈನೀಡಿರುವನೆಂಬುದು ಯಾರಿಗೆ ಗೊತ್ತು." ಎಂದು ನುಡಿದಳು.

ರಸಿಕ— ದೇವಿ ಯಾರಪತ್ರವಿದು? ಏನಿರುವದು ಇದರಲ್ಲಿ? ಆನಂದ ಸಂಗತಿ ಏನಾದರೂ ಇರುವದೋ ಹೇಗೆ? ಎಲ್ಲಿಂದಬಂದಿತು.

ಮೋಹಿನಿ— ಛೇ! ಏನೂ ಇಲ್ಲ ಕೆಳಮೊಗವನ್ನು ಮಾಡಿ ನೆಲ ವಗಿಯುತ್ತ "ಕುಮಾರ! ಯಾರಾದರು ಬಿಸಿಲುಗುದುರೆಯ ಮೇಲೆ ವಿಶ್ವಾಸ ಇಡಬಹುದೇನು? "

ರಸಿಕ— ನೀನು ಏನನ್ನುವಿಯೋ ತಿಳಿಯದಂತಾಗಿದೆ. ತಾ ಇಲ್ಲಿ, ಆಪತ್ರವನ್ನು ನಾನೂ ತುಸು ನೋಡುವೆನು.

ಮೋಹಿನಿ— ರಾಜಪುತ್ರ ತಾವು ಅದನ್ನು ನೋಡಬಾರದು. ಅಪ್ಪನು ಏನೂ ತಿಳಿಯಲಾರದವರಂತೆ ಬರೆದಿರುವನು. ಅವಳ ಕೃತಿಗಳಿಗೆ ಮನಸೋತ, ರಣರಸಿಕನು ಆತುರದಿಂದ ಮುಂದಕ್ಕೆಬಂದು ಕೈಯ-ಲ್ಲಿ ಪತ್ರತೆಗೆದುಕೊಂಡು ಓದತೊಡಗಿದನು. ಪತ್ರದಲ್ಲಿಯ ಮತಿತಾರ್ಥವು ಕೆಳಗೆ ಬರೆದ ಪ್ರಕಾರವಿತ್ತು.

**ಚಿ. ಸೌ. ಕಾ. ನೋಹಿನಿದೇವಿಗೆ,**

ಅನೇಕ ಆಶೀರ್ವಾದಗಳು. ದುಷ್ಟಬುದ್ಧಿಯಿಂದ ಎಲ್ಲ ಸುದ್ದಿಯೂ ತಿಳಿಯಿತು. ಉಣ್ಣುವದಕ್ಕೆ ಬರುವದು ನನ್ನಿಂದಾಗುವದಿಲ್ಲ. ನನಗೆ ಈ ನನ್ನ ನಶ್ವರದೇಹದಿಂದಲೂ, ಜಗತ್ತಿನೊಳಗಣ ಎಲ್ಲಸ್ಥಾವರ ಜಂಗಮ ವಸ್ತುಗಳಿಂದಲೂ, ಬೆಸರಿಕೆಯುಂಟಾಗಿದೆ. ಆಪತ್ಯಪ್ರೇಮವು, ಏನುಮಾಡಿದರೂ ಕಡಿದು ಹೋಗದಂತಾಗಿದೆ, ಒಂದೊಂದುಸಾರೆ ಈಶಚಿಂತನೆಯಲ್ಲಿಯೂ ಸಹ ವ್ಯತ್ಯಯ ಬರಹತ್ತಿದೆ. ಇರಲಿ ರಾಜಕುಮಾರರು ನಿನ್ನನ್ನು ಅಂಗೀಕರಿಸಿದರೆ, ಅಥವಾ ಅಂಗೀಕರಿಸಲು ಒಡಂಬಟ್ಟರೆ, ಇಷ್ಟು ದಿವಸಗಳವರೆಗೆ ಕೆಳಗಿಟ್ಟ ನನ್ನ ಶಸ್ತ್ರಗಳನ್ನು, ಪುನಃ ಹಿಡಿದು ಅವರಕೈಕೊಂಡ ಕಾರ್ಯಕ್ಕೆ ನಿಃಸಂಶಯವಾಗಿ ಸಹಾಯಮಾಡಿ ಆವರು ಮಾಡಿದ ಪ್ರತಿಜ್ಞೆಯನ್ನು ಈಡೇರಿಸುವಂತೆ ಮಾಡುವೆನು. ಏನನ್ನುವದನ್ನು ಕೇಳಿಕೊಂಡು ತಿಳುಹಬೇಕು. ದುಷ್ಟಬುದ್ಧಿಯು ನನ್ನ ಆಗೃಹದಮೂಲಕ ಇಲ್ಲಿಯೇ ಇರುವನು.

ಇತಿ ಆಶೀರ್ವಾದ,

**ಯಾವಾಗಲೂ ಕಲ್ಯಾಣವನ್ನಿಚ್ಛಿಸುವ ನಿನ್ನತಂದೆ**

ಪತ್ರ ಓದೋದುತ್ತ ರಸಿಕನು ಮೋಹಿನಿಯನ್ನು ನೋಡಿದನು. ಪರ ಸ್ಪರರಕಣ್ಣುಗಳೊಂದಾದವು. ಕೂಡಲೆ ಅವಳುತಲೆಯನ್ನು ಬಗ್ಗಿಸಿದಳು ಅವಳಸನಿಯಕ್ಕೆ ಹೋಗಿ ರಸಿಕನು "ಪ್ರಿಯೇ ಮೋಹಿನಿ! ಈಪತ್ರದ ಉ ತ್ತರ ವೇನೆಂದು ಕೊಡುವಿ?" ಕೆಳವೊಗವನ್ನು ಮಾಡಿದ ಮೋಹಿನಿಯು ನೆಲವನ್ನು ಗೀರುತ್ತ "ಉತ್ತರವೇನಂದುಕೊಡಲಿ!"

ರಾಜಪುತ್ರ— ಪ್ರಿಯೇ ರಸಿಕನು ನಿನಗೆ ತಕ್ಕವನಾಗಿ ಕಾಣಬರುವ ದಿಲ್ಲವೇ?

ಮೋಹಿನಿ— ಏನ್ನುವಿರಿ? ತಕ್ಕವರಾಗಿ! ಆಹಹ!! ಮೋಹಿನಿಯಭಾ ಗ್ಯಕ್ಕೆ ಈಡೇ ಇಲ್ಲ. ಎಂದು ವ್ಯೆಮರತವಳಾಗಿ ಮಾತಾಡದಳು.

✤ ✤ ✤ ✤ ✤ ✤ ✤ ✤ ✤

ಮುಗಿಯಿತು ರಣರಸಿಕನ ಭಾವಿಭಾಗ್ಯೋದಯದ ಆಶೆಯು ನಿಂತಂ ತಾಯಿತು. ಸ್ತ್ರೀಮೋಹಪಾಶದಲ್ಲಿ ಶಿಲುಕಿಬಿದ್ದ ರಾಜಪುತ್ರನು ಹುಚ್ಚನಂ ತಾಗಿ ಹೋಗಿದ್ದನು. ಕುಳಿತವನು ಒಮ್ಮಿಂದೊಮ್ಮೆ ಎದ್ದು, ಹತ್ತಿರನಿಂತಿ ದ್ದ ಮೋಹಿನಿಯ ಕೈಯನ್ನು ಗಟ್ಟಿಯಾಗಿಹಿಡಿದು, "ಮೋಹಿನಿ! ಇಕೋ! ಇದೇಪಾಣಿಗ್ರಹಣವು!! ತಿಳಿಯಿತೇ ಇನ್ನುಮುಂದೆ ನಮ್ಮಿರ್ವರ ಅಯು ಷ್ಯಕ್ರಮವು ಆನಂದದಿಂದ ಜರುಗುವದೆಂಬದರಲ್ಲಿ ಸಂದೇಹವಿಲ್ಲ."

ಇಷ್ಟರಲ್ಲಿ ವಿಲಾಸಮಂದಿರದ ಹೊರಗಣಭಾಗದಲ್ಲಿ ಗದ್ದಲವಾಗಹತ್ತಿ ತು. ಬರಬರುತ್ತ ನಿಚ್ಚಳಾಗಿ ಒಳಗೆ ಕೇಳಬರಹತ್ತಿತು. ವ್ಯೆಮರತು ನಿಂತಿ ದ್ದ ಈರ್ವ ಪ್ರೇಮಿಯುಗಲವು ಹಿಂದುಮುಂದಾಗಿ ನಿಂತಿತು. ಕೂಡಲೆ ಕು ಮಾರನ ಮುಖ್ಯಗುಂಪಿನೊಳಗಣ ಒರ್ವನಾಯಕನು, ಜನರನ್ನು ಸರಿ ಸುತ್ತ ದಾರಿಮಾಡಿಕೊಂಡು ಕುಮಾರನಿದ್ದೆಡೆಗೆ ಬಂದು, ಮುಜುರೆಮಾಡಿ ನಿಂತುಕೊಂಡನು. ಅವನನ್ನುನೋಡುತಲೆ ರಣರಸಿಕನಿಗೆ ಸಿಟ್ಟುಬಂದಂತಾ ಯಿತು. ಅವನು ಕಣ್ದೆಗೆದು ಗೊಗ್ಗರಧ್ವನಿಯಿಂದ, ಬಂದ ಮನುಷ್ಯನನ್ನು ದ್ದೇಶಿಸಿ, "ಏನು? ನಾಯಕರೇ! ಏತಕ್ಕೆಬಂದಿರಿ ಇಲ್ಲಿಯವರೆಗೆ?" ಎಂ ದು ನುಡಿದನು.

ನಾಯಕನು ಕೈಜೋಡಿಸಿ ವಿನಯದಿಂದ, "ಧನಿಯರೇ ಸೇನಾನಿಗಳು ತಮ್ಮ ಬೆಟ್ಟಿಗೋಸುಗ ವಿಶ್ವಪ್ರಯತ್ನಮಾಡಿ ನಿರಾಶೆಬಟ್ಟರು. ಇದುವರೆಗೆ ಪ್ರಭುಗಳ ಬೆಟ್ಟಿಯ ಸುಯೋಗವೇ ಒದಗಲಿಲ್ಲ. ನಂದರ ದಳವಾಯಯು ಸಸೈನ್ಯತಮ್ಮಮೇಲೆ ದಾಳೀಮಾಡಲು ಹೊರಟಿರುವನು. ಇದಲ್ಲದೆ ಚಿನ್ನದ ದುರ್ಗದ ಸುತ್ತಿಲಿನ ಎಲ್ಲ ಆಯಕಟ್ಟಿನ ಸ್ಥಳಗಳನ್ನು ಹಿಡಿದುಕೊಂಡು ಕುಳಿತಿರುವನು. ಆದುದರಿಂದ ಪ್ರಭುಗಳು ಜಾಗ್ರತೆಯಾಗಿ ಹೊರಡಬೇಕು

ನಿಷ್ಠುರವಾಣಿಯಿಂದ ರಸಿಕನು, "ಸುಮ್ಮನೆ ಗಳುಹಬೇಡ, ನನಗೆ ಈಗ ಬರಲು ಬರುವಂತಿಲ್ಲ. ಹಿಂದುಗಡೆಯಿಂದ ಬರುವೆನಂತೆ" ನಮ್ರತೆಯಿಂದ ನಾಯಕನು "ಪ್ರಭುಗಳ ಇಚ್ಛೆಯು! ದಳವಾಯಿಗಳಂತೂ ಹತಾಶರಾಗಿ ಕುಳಿತಿರುವರು. ಹೆಚ್ಚಿಗೆ ಹೇಳುವದೇನಿದೆ" ರಸಿಕನನ್ನು ಕದ್ದು ನೋಡುತ್ತ ಓರೆನೋರೆಯನ್ನು ಮಾಡಿನಿಂತಿದ್ದ ಮೋಹಿನಿಯು, ತುಸು ಮುಂದಕ್ಕೆ ಬಂದು "ಯುವರಾಜರೇ! ಇಷ್ಟೇಕೆ ಹತಾಶರಾಗುವಿರಿ. ನನ್ನತಂದೆಯೂ, ದುಷ್ಟಬುದ್ಧಿಯುವರೂ, ಎಲ್ಲಬಗೆಯಿಂದಲೂ ನಿಮಗೆ ಸಹಾಯಮಾಡಲು ಸಿದ್ಧರಿರುವರು." ಎಂದು ನುಡಿದಳು. ರಸಿಕನು ನಾಯಕನನ್ನು ಮುಂದಕ್ಕೆ ಕರೆದು "ನಾಯಕರೇ ನಾನು ಯೋಗ್ಯವೇಳೆಗೆ ನಿಮ್ಮಲ್ಲಿಗೆ ಬರುವೆನು, ನನಗೆ ಎಲ್ಲವೂಗೊತ್ತಿದೆ ನಾನೇನು ಸುಮ್ಮನೆ ಕುಳಿತುಕೊಳ್ಳಲಿಕ್ಕೆ ಮೂರ್ಖನಲ್ಲ, ನೀವುನಿಮ್ಮಶಸ್ತ್ರಾಸ್ತ್ರಗಳೊಂದಿಗೆ ಜಾಗರೂಕತೆಯಿಂದ ಇರಬೇಕೆಂಬದಾಗಿ, ಆ ಸೇನಾನಿಗಳಿಗೆ ತಿಳಿಸು. ನಡೆ, ಇಲ್ಲಿನಿಲ್ಲಬೇಡ" ಎಂದು ಅವನನ್ನು ನಿಲ್ಲಗೊಡದೆ ಅಪ್ಪಣೆಕೊಟ್ಟನು. ಹೆಗ್ಗಡೆಯು ಬಂದದಾರಿಯಿಂದ ಹಿಂದಿರುಗಿದನು. ಆಹೊತ್ತು ರಸಿಕನು ಮೋಹಿನಿಯ ವಿಲಾಸ ಮಂದಿರದಲ್ಲಿಯೇ ಉಳಿದನು. ರಾತ್ರಿ ಅವನಿಗೆ ಚೆನ್ನಾಗಿ ನಿದ್ದಿಬಬರಲಿಲ್ಲ. ವಿವೇಕಬುದ್ಧಿಯು ಅವನನ್ನು ಅಲ್ಲಿ ಇರಗೊಡಲಿಲ್ಲ. ಸೂರ್ಯೋದಯ ವಾಗುವ ದೊಂದೇತಡ, ತನ್ನಜನರನ್ನು ಕಂಡುಕೊಳ್ಳಬೇಕೆಂದು ಮೋಹಿನಿಯು ಬೇಡೆಂದರೂ, ಕುದುರೆಯನ್ನೇರಿ ತನ್ನಸೈನಕರಿದ್ದೆಡೆಗೆ ನಡೆದನು. ಶಸ್ತ್ರಾಸ್ತ್ರಗಳಿಂದ ಸಜ್ಜಾದ ಸೈನಿಕರು ತನ್ನದಾರಯನ್ನೇನೋಡುತ್ತ ಕುಳಿತದ್ದನ್ನುಕಂಡನು.

ರಸಿಕ — “ ನಾಯಕ ಇದೇನು? ಎತ್ತಕಡೆಗೆ ಪ್ರಯಾಣ ”

ನಾಯಕ— ದೇವರು ಏನುಹೇಳಲಿ, ನಂದರರದಂಡು ಚಿನ್ನದದುರ್ಗದ ಸೀಮಾಂತರವನ್ನು ಸಮೀಪಿಸಿರುವದೆಂದು ಗುಪ್ತಚಾರರು ಹೇಳುತಲೆ, ಕೃಷ್ಣಕಾಂತ ಮಹಾರಾಜರು ಆರಿಸಿದ ಸೈನ್ಯದೊಡನೆ, ನಿನ್ನನರಾತ್ರಿಯೇ ತಳಕಿತ್ತಿದರು.

ಆಶ್ಚರ್ಯದಿಂದ ರಣರಸಿಕನು “ ಇದೇನು! ಕೃಷ್ಣಕಾಂತರು ಈ ಸುದ್ದಿಯನ್ನು ನನಗೇಕೆ ತಿಳುಹಲಿಲ್ಲ.” ಎಂದು ನಾಯಕನನ್ನು ಗದ್ದರಿಸಿದನು

ನಾಯಕ— ಧನಿಯರೆ! ಅವರು ಮೂರುನಾಲ್ಕುಸಾರೆ ತಮಗೆ ಹೇಳಿ ಕಳುಹಿದರೂ ಧನಿಯರು, ಆವಿಷಯದಬಗ್ಗೆ ಉತ್ತರವನ್ನೇ ಕೊಡಲಿಲ್ಲವಂತೆ! ಆದುದರಿಂದ ಅವರು ನಿರಾಶರಾಗಿ ದಿನಗಳೆಯದೆ, ನಿನ್ನನರಾತ್ರಿ ಹೊರಟುಹೋದರು.

ರಸಿಕ— ಇರಲಿ! ಹೋಗುವಕಾಲಕ್ಕೆ ನನಗೆ ಏನಾದರೂ ಹೇಳಲು ಆಜ್ಞಾಪಿಸಿದರೇನು?

ನಾಯಕ— ತಾವು ತಮ್ಮ ಸೈನ್ಯದೊಂದಿಗೆ ಅಲ್ಲಿಗೆ ಹೋಗಿ ಸೈನ್ಯದಲ್ಲಿ ಭಾಗಗಳನ್ನುಮಾಡಿ ಒಂದನ್ನು ಉತ್ತರಕ್ಕೂ, ಮತ್ತೊಂದುಭಾಗವನ್ನು ಪೂರ್ವಕ್ಕೂ, ಬಂದಸೈನ್ಯವನ್ನು ಎದುರಿಸುವದಕ್ಕಾಗಿ ತಾವು ಪಶ್ಚಿಮದ ಮುಖ್ಯ ಮಹಾದ್ವಾರ ದೆದುರಾಗಿ, ನಿಲ್ಲಬೇಕೆಂದು ಹೇಳಿರುವರು. ಆದಷ್ಟು ಮಟ್ಟಿಗೆ ತಾವು ತೀವ್ರ ತೆರಳುವದು ನೆಟ್ಟಗೆ.

ರಸಿಕ—ಆದರೆ, ನಾಯಕ ಈ ಆಚಾಟಸೈನ್ಯವು ಒಮ್ಮಿಂದೊಮ್ಮೆ ಇಲ್ಲಿಯವರೆಗೆ ಹೇಗೆಬಂದಿತು.

ನಾಯಕ— ನನಗಾದರೂ ಏನೂತಿಳಿಯದಂತಾಗಿದೆ. ಇದು ಯಾರದೋ ಮೋಸಗಾರರ ಮೋಸವಾಗಿದೆ, ಶತ್ರುಗಳು ಆಯ ಮೆಟ್ಟಿನಸ್ಥಳಗಳನ್ನು ಆಕ್ರಮಿಸಿದ್ದರಂದ, ಚಿನ್ನದದುರ್ಗವು ಕೈಸೇರುವ ದೊತ್ತಟ್ಟಿಗಿರಲಿ, ಗೆದೆದಪ್ರಾಂತವಾದರೂ ದಕ್ಕುವದೋ ಇಲ್ಲವೋ ಎಂಬದಾಗಿ, ಕೃಷ್ಣಕಾಂತರು ಅನ್ನುತ್ತಿದ್ದರು.

ರಣರಸಿಕನು ಆವೇಶದಿಂದ "ಹೀಗೆ ಎಂದಿಗೂ ಆಗದು, ನಾನಿರುವವರೆಗೆ ಆವಬಂಟನವ ಜಯಸಿದ ಪ್ರಾಂತವನ್ನು ಹಿಂತೆಗೆದು ಕೊಳ್ಳುವವನು? ನಡೆಯಿರಿ ಈಗಿಂದೀಗಲೆ ಅಲ್ಲಿಗೆ ತೆರಳೋಣ. ಆದರೆ, ನಾಯಕ ಅಗ್ರಹಾರದೊಳಗಣ ನಾನಿರುವ ಮಂದಿರವನ್ನು ನೀನು ನೋಡಿರುವಿಯಲ್ಲ! ಅಲ್ಲಿಯವರೆಗೆ ಹೋಗಿ ಮೋಹನೀ ದೇವಿಯಕೈಯಲ್ಲಿ ಈ ಪತ್ರವನ್ನು ಕೊಡು.

ನಾಯಕ— ದೇವರು ನನಗೆ ಅಲ್ಲಿಯೇ ಸಂಶಯಬಂದಂತಾಗುತ್ತದೆ.

ರಸಿಕ – ಇರಲಿ ಹೆಚ್ಚಿಗೆ ಮಾತಾಡಬೇಡ. ಮೊದಲು ಅವಳಿಗೆ ಪತ್ರ ಮುಟ್ಟಿಸಿಬಾ.

ನಾಯಿಕನು ನಿರುಪಾಯನಾಗಿ ಪತ್ರತೆಗೆದುಕೊಂಡು ಹೋದನು. ಮುಂದೆ ತಾಸೆರಡು ತಾಸುಗಳಲ್ಲಿಯೇ ತಿರುಗಿಬಂದು, "ಧನಿಯರೇ ನಿನ್ನಿನ ದಿವಸ ತುಂಬಿತುಳುಕುತ್ತಿದ್ದ ವಿಲಾಸ ಮಂದಿರದಲ್ಲಿ ಈ ಹೊತ್ತು ನೊಣ ಜಾಡಿಸಲು ಸಹಯಾರೂಇಲ್ಲ. ಕೋಟೆಯೊಳಗೆ ಹೋಗಬೇಕೆಂದು ಹೊರಟರೆ, ಅಲ್ಲಿನನಗೆ ಪ್ರವೇಶವೇ ದೊರೆಯಲಿಲ್ಲ ಬಹಳವಾಡಿ ಎಲ್ಲಸೈನ್ಯವು ಸಿದ್ಧತೆಯಲ್ಲಿರುವ ದೆಂಬದಾಗಿ ಕಾಣುತ್ತದೆ" ಎಂದು ಸಾಶಂಕ ಮುದ್ರೆಯಿಂದ ಹೇಳಿದನು.

ರಾಜಕುಮಾರನ ಅಪ್ಪಣೆಯಾಗುವ ದೊಂದೇತಡ, ರಣಭೇರಿಯು ಬಾರಿಸಹತ್ತಿತು, ಕಹಳೆ ಕೊಂಬುಗಳನ್ನೂದ ತೊಡಗಿದರು. ಸೈನ್ಯವು ಮುಂದೆ ತಾಸರ್ಧ ತಾಸಿನಲ್ಲಿ ತಳಕಿತ್ತಿ ಮುಂದೆಜ್ಜೆ ಇಡಹತ್ತಿತು. ಸೈನ್ಯದ ಮಧ್ಯದಲ್ಲಿ ಸೈನ್ಯದ ಮುಖ್ಯತ್ವವನ್ನು ಸ್ವತಃ ವಹಿಸಿದ ರಣರಸಿಕನು ತನ್ನ ಕರಿಪಂಚಕಲ್ಯಾಣ ಕುದುರೆಯನ್ನೇರಿ ಸಾಗಿದ್ದನು.

ಮೋಹಿನಿಯು ಅಗ್ರಹಾರದ ಸಮೀಪಕ್ಕೆ ಸೈನ್ಯವು ಬಂದಿತು ಅಗ್ರಹಾರವು ಇನ್ನೂರು ಮುನ್ನೂರು ಶೂರ ಸೈನ್ಯಕರಿಂದ ಕಾಯಲ್ಪಡುತ್ತಿದ್ದು, ಅವರು ಸಹ ಎದುರಾಗಲು ಸಿದ್ಧರಾಗಿ ಕೈಮಸೆಯುತ್ತ ಕುಳಿತುಕೊಂಡಿದ್ದರು. ಸೈನ್ಯವು ಅಗಸೆಯ ಬಾಗಿಲಿಗೆ ಬರುವದೊಂದೆತಡ, ಇಲ್ಲಿಂದಲೇ ರಣರಸಿಕನು ವೈರಿಗಳನ್ನು ಎದುರಿಸಬೇಕಾಯಿತು. ರಾಜಕುಮಾರನ ಹೊ

ಡತಕ್ಕೆ ಆಕೋಟೆಯು, ಅರ್ಧಘಳಿಗೆಸಹನಿಲ್ಲದೆ ಹಾಂ ಹಾಂ ಎನ್ನುವದರೊಳಗಾಗಿ ಕೈವಶವಾಯಿತು. ರಾಜಪುತ್ರನು ಮೋಹಿನಿಯು ಮಂದಿರದ ಕಡೆಗೆ ನಡೆದನು. ದೊಡ್ಡಬೆಲೆಯ ಎಲ್ಲಒಡವೆಗಳೂ ಇಲ್ಲವಾಗಿದ್ದು, ಕೆಲಸಕ್ಕೆಬಾರದ ಸಾಮಾನುಗಳುಮಾತ್ರ ಅಲ್ಲಲ್ಲಿ ಅಸ್ತವ್ಯಸ್ತ ವಾಗಿಬಿದ್ದಿದ್ದವು. ವಿಲಾಸ ಮಂದಿರದ ವಿಲಾಸವು ಅಳಿದುಹೋಗಿತ್ತು. ಅವಳು ಬಹುತರ ತನ್ನತಂದೆಯೊಂದಿಗೆ ಸಹಾಯಮಾಡಲು ಬರಬಹುದೆಂದು ಭಾವಿಸಿ, ಮುಂದೆ ನಡೆದನು. ದಾರಿಯಲ್ಲಿರುವ ಪ್ರತಿಯೊಂದು ಹಳ್ಳಿಗಳು ನಂದರ ಸೈನ್ಯದಿಂದ ತುಂಬಿ ಹೋಗಿದ್ದು, ಹೋಗೋಗುತ್ತ ಸಣ್ಣಪುಟ್ಟ ಸಂಗ್ರಾಮ ಮಾಡುತಲೆ, ಮುಂದೆಡೆ ಇಡಬೇಕಾಯಿತು. ಶೂರತನದಿಂದ ಹೋರಾಡಿ ತನ್ನ ಸಣ್ಣಸೈನ್ಯದಿಂದಲೆ ಹದಿನೈದು ಇಪ್ಪತ್ತು ಹಳ್ಳಿಗಳನ್ನು ಕೈವಶ ಮಾಡಿಕೊಂಡು ಅಲ್ಲಲ್ಲಿ ತನ್ನ ಜನರನ್ನಿಟ್ಟು, ಚಿನ್ನದದುರ್ಗದ ಪೂರ್ವಭಾಗಕ್ಕೆ ಲಗ್ಗೆ ಹತ್ತುವದಕ್ಕಾಗಿ ಮುಂದೆ ನಡೆದನು.

ಮುಂದೆ ತುಸು ಹೊತ್ತಿನಲ್ಲಿಯೇ, ನಂದರ ಪ್ರಚಂಡಸೈನ್ಯವು ಸಮುದ್ರದಂತೆ ದೂರದಿಂದಲೆ ಕಾಣಹತ್ತಿತು. ಒಮ್ಮಿಂದೊಮ್ಮೆ ಇಂಥ ದೊಡ್ಡ ಸೈನ್ಯವು ಸಜ್ಜಾಗಿ ಇಲ್ಲಿಯವರೆಗೆ ಹೇಗೆಬಂದಿತೆಂಬ, ವಿಚಾರವೇ ತೋಚದಂತಾಯಿತು. ರಾಜಪುತ್ರನು ಎಡಬಲ ಭಾಗವನ್ನುಸೂಕ್ಷ್ಮ ದೃಷ್ಟಿಯಿಂದ ಪರೀಕ್ಷಿಸಿದನು. ಯಾವಕಡೆಗೂ ದಳವಾಯಿಯ, ಅಥವ ಅವನ ದಂಡಾಳುಗಳ, ಸುಳುವೇ ಹತ್ತಲಿಲ್ಲ. ಇಷ್ಟುದೊಡ್ಡ ದಂಡಿನ ಎದುರಾಗಿ, ತನ್ನದಂಡು ಅರ್ಧತಾಸು ಸಹ ನಿಲ್ಲಲಾರದೆಂಬ ವಿಚಾರವೂ ಬಂದಿತು.

ಎದುರಿಗಿರುವ ಅರಿಸಮುದಾಯವನ್ನು ನೋಡಿ, ರಾಜಕುಮಾರನ ಬಾಹುಗಳು ಸ್ಫುರಣವಾಗ ಹತ್ತಿದವು, ಹಿಂಬಾಲಿಸಲು ಸೈನ್ಯಕ್ಕೆ ಆಜ್ಞಾಗಿಸಿ, ಕುದುರೆಯನ್ನು ಮುಂದಕ್ಕೆ ದೂಡಿ ಅನುಮಾನವಿಲ್ಲದೆ ಅರಿಪಡಿಯ ಮೇಲೆ ಬಿದ್ದನು. ಅವನ ಅಲ್ಲಿಯ ಪರಾಕ್ರಮವು ವರ್ಣಿಸಲು ಅಸಾಧ್ಯ. ಒಂದುಕೈಯಲ್ಲಿ ಬಾಣ ಮತ್ತೊಂದು ಕೈಯಲ್ಲಿ ಭಾಲೆಯನ್ನಿಡಿದು ಧನುಃಷ್ಟೇಂಕಾರವನ್ನು ಮಾಡಿ ಹಲ್ಲಿನಿಂದ ಬಾಣಬಿಡುತ್ತ ಮತ್ತೊಂದು ಕೈಯ

ಲ್ಲಿರುವ ಭಾಲೆಯಿಂದ ತಿವಿಯುತ್ತ ನಡೆದಿದ್ದನು. ಒಡೆಯನ ವೀರಾವೇಶವನ್ನು ನೋಡಿ, ಸೈನಿಕರೂ ಆವೇಶದಿಂದ ವೈರಿಗಳ ಗುಂಪನ್ನು ಹೊಕ್ಕು, ಕೈಗೆ ಸಿಕ್ಕವರನ್ನು ತುಂಡರಿಸಿ ಚಂಡಾಡುತ್ತ ಪಶ್ಚಿಮದಿಕ್ಕಿನ ಹೆಬ್ಬಾಲಿಗೆ ಬಂದರು.

ಇಷ್ಟಾಗುವದರೊಳಗೆ ರಾಜಕುಮಾರನ ನೂರಾರು ಸೈನಿಕರು ಧಾರಾತೀರ್ಥದಲ್ಲಿ ಪತನ ಹೊಂದಿದ್ದದ್ದರು. ಹೆಬ್ಬಾಗಿಲದ ಮುಂದೆಯೂ ಇರುವೆ ಸಹ ಸಂದಿಸಲು ಬಾರದಂತೆ ಜತ್ತಾಗಿ ಸೈನ್ಯವು ನಿಂತಿತ್ತು. ಜೀವದಹಂಗು ದೊರೆದು ಕಾದಲು ಸಿದ್ಧರಾದ, ರಾಜಕುಮಾರನ ಸೈನಿಕರು ಗುಂಪಿನೊಳಗೆ ಹೊಕ್ಕು ನಸುಳಿ, ಕೋಟೆಯಗೋಡೆಯನ್ನೇರಿ, ಮಹಾದ್ವಾರವನ್ನು ತೆರೆದರು. ಖಡಕನ್ ಬಾಗಿಲವು ತೆರೆಯುತಲೆ, ಒಳಗಣಸೈನ್ಯವು ಎದುರುಬಂದಿತು ಹೀಗೆ ಎಲ್ಲಕಡೆಯ ಸಾವಿರಾರು ಸೈನಿಕರು ಮೇಲೇರಿ ಬರುವದನ್ನು ನೋಡಿ ಮುನ್ನೂರು ನಾನೂರು ಅದರಲ್ಲಿ ಮಡೆದುಳಿದ ತುಸು ಸೈನಿಕರೊಂದಿಗೆ ಒಳಪ್ರವೇಶಿಸುವದಕ್ಕೆ ಪ್ರಯತ್ನಿಸುತ್ತಿರುವ ಇವನ ಅವಸ್ಥೆ ಏನಾಗಿರಬಹುದು,

ಆದರೂ ಆರಣಶಾರ್ದೂಲನು ಹಿಂಜರಿಯಲಿಲ್ಲ. ಉಳಿದ ತನ್ನ ಸ್ವಾಮಿನಿಷ್ಠಸೈನಿಕರೊಂದಿಗೆ “ **ಜಯ ಜಯ ಶಂಕರಿ** ” ಎಂದು ಗರ್ಜನೆ ಮಾಡುತ್ತ, ಒಳಹೋಗುವದಕ್ಕಾಗಿ ಸೈನಿಕರಮೇಲೆ ದುಮುಕಿದನು.

ಎದುರಿಗೆ ಬರುವ ಅಸಂಖ್ಯಬಾಣಗಳಿಂದ, ಇವನಕಡೆಯ ಜನರು ಪಟ ಪಟ ಆಹುತಿ ಯಾಗುತ್ತಿದ್ದರು. ಇವನಿಗೂ ಮೈತುಂಬ ಬಾಣಗಳು ನಟ್ಟಿದವು. ಕುದುರೆಯಂತೂ ನೆತ್ತರದಿಂದ ಮೈತೊಳದಂತೆ ಯಾಗಿತ್ತು. ಮಿತಿಮೀರಿದ ರಕ್ತಶ್ರಾವದಿಂದ ಶಕ್ತಿಯು ಕಡಿಮೆಯಾಗ ಹತ್ತಿತು. ಇಷ್ಟರಲ್ಲಿಯಾರೋ ಹಿಂದಿನಿಂದಬಂದು ಭಾಲೆಯನ್ನೆಶೆಯುವಂತೆ ಭಾಸವಾಯಿತು. ತಿರುಗಿ ನೋಡುತಲೆ ಓರ್ವ ಮುಖಾಚ್ಛಾದಿತ ವ್ಯಕ್ತಿಯು ಒರೆದೆಗದ ಕತ್ತಿಯನ್ನು ತೆಗೆದುಕೊಂಡು ತನ್ನನ್ನು ಎದುರಿಸಲು, ಹೊರಟುಬರುವಂತೆ ಕಂಡುಬಂದಿತು. ಕುಮಾರನಾದರೂ ಮೈಮರೆತು ಕುಳಿತಿದ್ದಿಲ್ಲ. ತನ್ನಬಾಣದ ಒಂದೇಗುರಿಯಿಂದ ಕತ್ತಿಹಿಡಿದ ಅವನಕೈಯನ್ನು ಮೇಲಕ್ಕೆತ್ತಿದಂತೆ

ಮಾಡಿದನು. ಕೂಡಲೆ ಅಪರಿಚಿತ ವ್ಯಕ್ತಿಯು ಹಿಂದಕ್ಕೆ ಸರಿಯಿತು. ಇಷ್ಟಾಗುವದರೊಳಗೆ ಚಾಲುಕ್ಯರ ಪತಾಕೆಯು ದೂರದಲ್ಲಿ ಕಾಣಬರಹತ್ತಿತು. ನಾಡಗುಡಿಯನ್ನು ನೋಡುತಲೆ ರಸಿಕನ ಆವೇಶವು ಪುನ: ಇಮ್ಮಡಿಸಿತು. ಅವನು ಮೋಸದಿಂದ ಕೊಲೆಮಾಡಲುಬಂದ ವ್ಯಕ್ತಿಯ ಬೆನ್ನಟ್ಟಹೋಗಿ ಖಡ್ಗದ ಒಂದೇ ಹೊಡತದಿಂದ ಅವನ ಕೈಯ್ಯನ್ನು ದೇಹದಿಂದ ಬೇರೆಮಾಡಿದನು.

ಇಷ್ಟರಲ್ಲಿ ಝುಂಯಿಗುಟ್ಟುತ್ತ ಒಂದು ಬಾಣವುಬಂದು ರಾಜಪುತ್ರನ ತಲೆಗೆ ಬಡೆಯಿತು. ಆದರಹಿಂದೆ ಮತ್ತೊಂದು ಬಾಣವುಬಂದಿತು. ಒಂದಾಗುತಲೆ ಮತ್ತೊಂದು ಬಾಣವು ಬರಹತ್ತಿದ್ದನ್ನು ನೋಡಿ, ರಾಜಪುತ್ರನು ಹೊರಳಿನೋಡಿದನು. ಹಿಂದಿನಿಂದ ಬಾಣ ಹೊಡೆಯುವವರು ಅನ್ಯರು ಯಾರೂ ಇರದೆ, ಯುವರಾಜನನ್ನು ಮೋಹಜಾಲದಲ್ಲಿ ಕೆಡುಹಿದ ಮನ ಮೋಹಿನಿಯೇ ಬಾಣಹೊಡೆಯುತ್ತಿದ್ದಳು. ಆವಳನ್ನು ನೋಡುತಲೆ ಎದುರಿಗಿದ್ದ ಕಾಲಾಳುಗಳನ್ನು ಚದುರಿಸಿ ಕುದುರೆಯನ್ನೋಡಿಸುತ್ತ ಅವಳಿದ್ದೆಡೆಗೆ ಬಂದು "ಪ್ರಿಯೇ! ಮೋಹಿನಿ!! ನೀನು ಯಾರಿಗೆ ಗುರಿಯಿಟ್ಟು ಬಾಣ ಹೊಡೆದಿ. ನನಗೆ ಸಹಾಯಮಾಡಲು ಯಾವಗಬಂದೆ'' ಎಂದು ಆತುರದಿಂದ ಕೇಳಿದನು. ಒಡೆಯನ ಅಪ್ಪಣೆಯಮೇರೆಗೆ ಹೊಡೆಯಲುಬಂದ ಮೋಹಿನಿಯು, ರಣರಂಗದಲ್ಲಿ ಇವನನ್ನು ಹೇಗೆತಾನೆ ಮಾತಾಡಿಸುವಳು? ಇವನು ಮುಂದಕ್ಕೆ ಬರುತ್ತಲೆ ಅವಳು ಹಿಂದಕ್ಕೆ ಸರೆದಳು.

ಕೇಳ ಕೇಳುವದರ ಒಳಗಾಗಿ ಬರ್ಚಿಯ ಬಲವಾದ ಏಟುಬಂದು ಎಡಕ್ಕೈಗೆ ತಗುಲಿತು. ತಿರುಗಿನೋಡುವಷ್ಟರಲ್ಲಿ, ತಾನೇರಿದ ಕುದುರೆಗೆ ಯಾರೋ ಬಲವಾಗಿ ಹೊಡೆದದ್ದರಿಂದ, ಅದೂನೆಲಕ್ಕೆ ಬಿದ್ದಿತು. ಕುಮಾರನೂ ನೆಲಕ್ಕೆಬಿದ್ದನು. ಆದರೂ ಧೈರ್ಯದಿಂದ ಜೋಲಿ ಸಾವರಿಸಿಕೊಂಡು ಮೇಲಕ್ಕೆದ್ದು, ಹೊಂಕದಲ್ಲಿ ಆಲಿದಾಡುತ್ತಿದ್ದ ಖಡ್ಗಕ್ಕೆ ಕೈನೀಡಿ ಒರೆಯಿಂದ ಕತ್ತಿಯನ್ನು ಹೊರಗೆ ತೆಗೆದು, ಉಪಾಯದಿಂದ ಹೊಡೆದು ಬರ್ಚಿಯ ಮನುಷ್ಯನ ರುಂಡವನ್ನು ದಂಡದಿಂದ ಬೇರೆಮಾಡಿದನು.

ಕೂಡಲೆ ಮತ್ತೊಂದುಬಾಣವು ಬಂದು ಹಣೆಗೆಬಡೆಯಿತು. ಬಾಣಬಿಡುವ ಮೋಹಿನಿಯನ್ನು ಮೊದಲೇ ನೋಡಿದ್ದ ರಣರಸಿಕನು, ಅವಳು ತನ್ನನ್ನು ಎದುರಿಸುತ್ತಿರುವದನ್ನೇ ತಿಳಿಯದಾದನು. ಅವನು ಅವಳ ಪಾರುಪತ್ಯವನ್ನು ಮಾಡುವವನು.

ಇಷ್ಟರಲ್ಲಿ ಮೋರೆಗೆ ಮುಸುಕುಹಾಕಿದ ಮೋಸಗಾರನು ತನ್ನ ಭಾಲೆಯ ಮೊನೆಯಿಂದ ಒಳತಾಗಿ ಇವನ ತೊಡೆಗೆ ತಿವಿದನು. ಬಾಲೆಯ ತಿವಿತವು ಒಳತಾಗಿತಗುಲಲು, ಮೊದಲೆ ಗಾಯಾಳುವಾದ ರಣರಸಿಕನಿಂದ ನಿಲ್ಲುವದಾಗಲಿಲ್ಲ. ಅವನು ಕೂಡಲೆ ನೆಲಕ್ಕೆ ಕುಳಿತನು.

ನೆಲದಮೇಲೆಕುಳಿತ ರಾಜಪುತ್ರನನ್ನು ಮೋಸಗಾರನು ಕತ್ತಿಯಿಂದ ತುಂಡರಿಸುವಷ್ಟರಲ್ಲಿ, ಹಿಂದಿನಿಂದ ಮತ್ತೊಂದುಬಾಣವು ಅವನ ವಕ್ಷಸ್ಥಲದಲ್ಲಿ ನಟ್ಟು, ಅವನನ್ನು ಭೂಮಿಗುರುಳಿಸಿತು. ನೆಲದಮೇಲೆ ಬೀಳುತಲೆ, ಮುಖದ ಮೇಲಣ ಆವರಣವು ಹಿಂದಕ್ಕೆ ಸರೆಯಿತು. ರಾಜಪುತ್ರನು ಇನ್ನೂ ಎಚ್ಚರದಲ್ಲಿಯೇ ಇದ್ದನು. ಬಟ್ಟೆಯು ಓರೆಯಾಗುತಲೆ, ಅಪರಿಚಿತ ವ್ಯಕ್ತಿಯ ಗುರುತುಹತ್ತಿತು. ‘ ದುಷ್ಟಬುದ್ಧಿ ’ ಎಂದು ಉಚ್ಚರಿಸುವದರೊಳಗಾಗಿ, ಅವನ ಹಿಂಭಾಗದಲ್ಲಿ ನಿಂತಿದ್ದ ಎದುರಾಳಿಗಳ ಓರ್ವ ಸೈನಿಕನು, ರಾಜಪುತ್ರನನ್ನು ಇರಿಯ ಬೇಕೆಂದು ತನ್ನ ತೀಕ್ಷ್ಣವಾದ ಅಲುಗನ್ನು ತೆಗೆದನು. ಕೂಡಲೆ ಹಿಂದಣ ಖಡ್ಗದ ಒಂದೇಹೊಡತದಿಂದ ಅವನ ಅಲುಗಿನ ಕೈಯು ಅಲ್ಲಿಂದಲ್ಲಿಯೇ ಬೇರೆಯಾಯಿತು.

ರಾಜಪುತ್ರನು ಮೋರೆದಿರುವಿದನು, ತನ್ನನ್ನು ಪ್ರಾಣಸಂಕಟ ದೊಳಗಿಂದ ಮುಕ್ತಮಾಡುವದಕ್ಕಾಗಿ ಮಾಲತಿಯು ಬಾಣಭತ್ತಳಿಕೆ ಢಾಲುಭಾಲೆಗಳಿಂದ ಸಜ್ಜಾಗಿ, ರಣರಂಗದೊಳಗೆ ವೀರಾವೇಶದಿಂದ ಕಾದಾಡುತ್ತಿರುವದನ್ನು ನೋಡಿದನು.

ಮೊದಲಿನಂತೆ ಒಂದರಮೆಲೊಂದು ಮತ್ತೂ ಬಾಣಗಳು ಬರಹತ್ತಿದವು. ಬಾಣಬಿಡುವ ಮೋಹಿನಿಯನ್ನು, ಚಾಲುಕ್ಯರ ದಂಡಾಳುಗಳು ಅವಳನ್ನು ಕುದುರೆಯಿಂದ ಕೆಳಗೆಳೆದು ಕೈಗಳನ್ನು ಗಟ್ಟಿಯಾಗಿ ಕಟ್ಟಿದರು. ಹಿಂ

ದಿದ್ದ ನಂದರದಂಡು, ಅಲ್ಲಿಂದಲ್ಲಿಯೇ ಕಾಲ್ದೆಗೆಯಿತು. ತನ್ನದಂಡಾಳುಗಳಿಗೆ ಹೇಳತಕ್ಕದುದನ್ನು ಹೇಳಿ ಮಾಲತಿಯು ರಾಜಪುತ್ರನಕಡೆಗೆ ಒತ್ತರದಿಂದ ಸಾಗಿದಳು. ಗಾಯಗಳಿಂದ ಅರ್ಧಮರ್ದ ಎಚ್ಚರಿದ್ದ ರಾಜಪುತ್ರನಿಗೆ ಇಷ್ಟಾಗುವದ ರೊಳಗೆ ಕಣ್ಣಿಗೆ ಕತ್ತಲು ಕವಿದಂತಾಗಿ ಭೋಳಿಯು ಬಂದಿತು. ಕೂಡಲೆ ಎಚ್ಚರದಪ್ಪಿ ಬಿದ್ದನು. ಎರಡು ಮೂರು ದಿವಸಗಳವರೆಗೆ ಮೈಮೇಲೆ ಸ್ಮೃತಿ ಇರಲಿಲ್ಲ.

✣ ✣ ✣ ✣ ✣ ✣ ✣ ✣

ರಣರಸಿಕನಿಗೆ ಎಚ್ಚರವಾಯಿತು. ಕಣ್ದೆರೆಯುತಲೆ ಬಾಲ್ಯಾವಸ್ಥೆಯಲ್ಲಿ ಅವನ ಅಂಗರಕ್ಷಕನಿದ್ದ ಗೋವಿಂದನೂ, ಮತ್ತು ವಾತಾಪಿಪುರದೊಳಗಣ, ಅವನಚಾಕರರು, ಅವನ ಎಚ್ಚರದಮಾರ್ಗ ಪ್ರತೀಕ್ಷೆಮಾಡುತ್ತ, ಕಣ್ಣೆವೆ ಇಕ್ಕದೆ ನೋಡುತ್ತ ನಿಂತಿದುದನ್ನು ಕಂಡನು. ರಾಜಕುಮಾರನು ಕ್ಷೀಣಸ್ವರದಿಂದ ‹‹ ಗೋವಿಂದ! ಅಹುದು. ನೀನುಗೋವಿಂದನೇ ಅಲ್ಲವೆ? ಇಲ್ಲ! ಈಪ್ರದೇಶದಲ್ಲಿ ನೀನು ಹೇಗೆಬಂದೆ? ನಾನು ಗಾಯಾಳುವಾದ ಸಂಗತಿ ನಿನಗೆ ಹೇಗೆತಾನೇ ತಿಳಿಯಿತು. ಸೇನಾನಿ ಕೃಷ್ಣಕಾಂತರು ಎಲ್ಲಿರುವರು? ›› ಎಂದು ನುಡಿದನು. ಗೋವಿಂದನು ತುಸು ಅಧಿಕಾರಯುಕ್ತ ವಾಣಿಯಿಂದ ‹‹ ರಾಜಕುಮಾರ! ಮನಬಂದಂತೆ ಬಡಬಡಿಸ ಬೇಡಿರಿ. ನಿಮಗೆ ಇನ್ನೂ ಪೂರ್ಣ ವಿಶ್ರಾಂತಿ ಇರುವದಿಲ್ಲ. ಸುಮ್ಮನೆ ಮಲಗಿಕೊಳ್ಳಿರಿ.

ಕುಮಾರ ‹‹ ಏನನ್ನುವಿ ಗೋವಿಂದ! ಸುಮ್ಮನೆ ಬಿದ್ದುಕೊಳ್ಳಲು ಹೇಳುವಿಯೋ? ಶತ್ರುಸೈನ್ಯವು ಇಷ್ಟರಲ್ಲಿ, ನಾನಿರುವ ಸ್ಥಳವನ್ನು ಪ್ರವೇಶಿಸಿರಬಹುದಲ್ಲವೆ ? ›› ಎಂದು ಗದ್ದರಿಸಿದನು.

ಗೋವಿಂದ ‹‹ ಯಾರೂ ಬರುವದಿಲ್ಲ, ಹೋಗುವದಿಲ್ಲ. ನಿಮ್ಮರಾಜಧಾನಿಯಲ್ಲಿ ಶತ್ರುಗಳೇಕೆ ಪ್ರವೇಶಿಸುವರು? ›› ಕುಮಾರನು ಒಮ್ಮಿಂದೊಮ್ಮೆ ಹಾಸಿಗೆ ಬಿಟ್ಟು ಮೇಲಕ್ಕೆದ್ದು ‹‹ ಗೋವಿಂದ! ನಾನು ವಾತಾಪಿನಗರಿಯಲ್ಲಿರುವೆನೇನು? ನಿಜವಾಗಿಹೇಳು ನಾನೆಲ್ಲಿರುವೆನು, ››

ಗೋವಿಂದ " ಯುವರಾಜ! ನೀವು ನಿಮ್ಮ ರಾಜಧಾನಿಯಾದ ವಾತಾಪಿನಗರದಲ್ಲಿಯೇ ಇರುವಿರಿ. ಉಪವನದೊಳಗಣ ' **ಶಂಕರಿವಿಲಾಸ** ' ಅರಮನೆಯೊಳಗೆ ಮಲಗಿರುವಿರಿ. ಮತ್ತೇನುಬೇಕು.

ಕುಮಾರನು ಕೆಳಗೆ ಮೇಲೆ ನಾಲ್ಕುಕಡೆಗೆ ನೋಡಿ, " ಇದೇನು? ನಾನು ನನ್ನ ಶಂಕರಿವಿಲಾಸ ಮಂದಿರ ದೊಳಗೆ ಇರುವೆನು! ನಾನು ಚಿನ್ನದ ದುಗುರ್ಗದಲ್ಲಿ ಇದ್ದೆ ನಲ್ಲವೇ? ಗೋವಿಂದ ನನ್ನನ್ನು ಇಲ್ಲಿಗೆ ಯಾರು ಕರೆದುಕೊಂಡು ಬಂದರು? "

ಗೋವಿಂದ— ನಿಮ್ಮ ಅಣ್ಣಂದಿರಾದ ಸಾವ್ರಾಟ ಚಂದ್ರಾದಿತ್ಯ ಮಹಾರಾಯರೇ ಕರೆದುಕೊಂಡು ಬಂದರು. ಕುಮಾರನು, ಹಣೆ ಹಣೆ ಬಡೆದುಕೊಂಡು ನಿರಾಶಾ ಜನಕಸ್ವರದಿಂದ " ಏನು! ಸಾವ್ರಾಟರೇ ಬಂದಿದ್ದರೇ? ರಣಸಂಗ್ರಾಮಕ್ಕೆ, ಥೂ ಹೇಡಿ ! ರಣರಸಿಕ !! ನಿಜವಾಗಿ ನೀನು ರಣಹೇಡಿಯು !!! ನಿನ್ನ ಕಡೆಯಿಂದ ಸಣ್ಣ ಚಿನ್ನದದುರ್ಗವನ್ನು ಜಯಿಸುವದಾಗಲಿಲ್ಲವೇ? " ಎಂದು ನೊಂದುಕೊಂಡನು.

ಗೋವಿಂದ, " ಯುವರಾಜ ಹಿಂದು ಮುಂದಿನ ವಿಚಾರವಿಲ್ಲದೆ, ವಿಷಯವನ್ನು ತಿಳಿಯದೆ, ಮನಸ್ಸಿಗೆ ವೃಥಾ ಚಿಂತೆಯನ್ನು ಹಚ್ಚಿಕೊಳ್ಳಬೇಡಿರಿ. ನೀವು ನಿಜವಾಗಿ ನಿಮ್ಮವಂಶದ ಕೀರ್ತಿಯನ್ನು ಕಾಯ್ದುಕೊಂಡಿರುವಿರಿ. ನಾನಂತೂ ರಣಭೂಮಿಗೆ ಬಂದವನಲ್ಲ. ಎಲ್ಲಜನರೂ ನಿಮ್ಮ ಅತುಲ ಪರಾಕ್ರಮದ ವರ್ಣನೆಯನ್ನು, ನಿರ್ವ್ಯಾಜ್ಯಬುದ್ಧಿಯಿಂದ ಮಾಡುವರು. ನಿಮ್ಮ ಶೌರ್ಯ ಸಾಹಸದಿಂದಲೇ ಕಳೆದುಹೋದ ಎಲ್ಲ ದುರ್ಗಗಳು ಈಹೊತ್ತು ಪುನಃ ಚಾಲುಕ್ಯರ ಆಡಳಿತದೊಳಗೆ ಬಂದಿರುತ್ತವೆ. "

ರಸಿಕ— ಗೋವಿಂದ ನಿನನ್ನುವದು ನಿಜವಿರಬಹುದೋ? ಹಾಗಾದರೆ ಕೃಷ್ಣಕಾಂತ ಸರದಾರರು ಎಲ್ಲಿರುವರು? ಅವರೂ ನಮ್ಮಸಂಗಡಲೇ ಬಂದಿರಬಹುದು ?

ಗೋವಿಂದ— ಆಹುದು ಧನಿಯರೇ! ಅವರೂ ಮೃತ್ಯುಶಯ್ಯೆಯಮೇಲೆ ಮಲಗಿರುವರು. ಮಿತಿಮೀರಿದ ಗಾಯಗಳಿಂದ ಅವರ ಮೈಮೇಲೂ ಎಚ್ಚರ ಇರುವದಿಲ್ಲ. ಯಾವಾಗಲೂ ' ಯುವರಾಜ ' ' ಕುಮಾರ' ಎಂದು ಬಡಬಡಿಸುತ್ತಾರೆ.

ರಣರಸಿಕ— ಗೋವಿಂದ! ಹೀಗಾಯಿತೇನು? ಪ್ರಮಾಣದಿಂದ ಹೇಳು ನನ್ನನ್ನು ಇಲ್ಲಿಗೆ ಯಾರು ಕರೆದುತಂದರು.

ಗೋವಿಂದ— ಒಡೆಯರೇ ಬೇಡರಿಂದೊಡಗೂಡಿದ ಓರ್ವ ಕ್ಷಾತ್ರಿ ಬಾಲಿಕೆಯೂ, ಒಬ್ಬ ವೃದ್ಧವೀರನೂ ತಮ್ಮಿರ್ವರನ್ನು ಇಲ್ಲಿಯವರೆಗೆ ತಂದುಬಿಟ್ಟರು. ದೊಡ್ಡದೊಂದು ನಿಟ್ಟುಸಿರುಬಿಟ್ಟು ರಣರಸಿಕನು " ಇರಿಲಿ, ಗೋವಿಂದ ಕಣ್ಣಿಗೆ ಕತ್ತಲು ಕವಿದಂತಾಗುತ್ತದೆ. ತುಸು ಮಲಗಬೇಕೆನ್ನುತ್ತೇನೆ; ಆದರೆ, ಗೋವಿಂದಾ ಚಿನ್ನದದುರ್ಗ, ನಂದಿದುರ್ಗ, ವಿಜಯದುರ್ಗ ಮೊದಲಾದ ದುರ್ಗಗಳನ್ನೂ, ಅವುಗಳ ಸುತ್ತುಮುತ್ತಲಿನ ಪ್ರಾಂತವನ್ನು ಇಗ ಯಾರು ಸಂರಕ್ಷಿಸುತ್ತಿರುವರು.

ಗೋವಿಂದ! ಇಲ್ಲಿಂದಲೇ ಇಬ್ಬರುಸರದಾರರು ಸಂರಕ್ಷಣೆಗೋಸುಗ ಹೋಗಿರುವರು. ಅವರೀರ್ವರು ಹೋಗುವವರೆಗೆ, ನಮ್ಮ ದೊಡ್ಡಸಾಮ್ರಾಟರ ಕಾಲದಲ್ಲಿಯ ವೀರಸೇನನೆನ್ನುವ ಓರ್ವ ಸರದಾರನು, ಸಂರಕ್ಷಿಸುತ್ತಿದ್ದನಂತೆ.

ಈ ಶಬ್ದಗಳು ಬೀಳುಬೀಳುವದರೊಳಗಾಗಿಯೇ ಕುಮಾರನಿಗೆ ಗ್ಲಾನಿಯು ಬಂದಂತಾಗಿ ಎಚ್ಚರತಪ್ಪಿತು. ಹತ್ತರನಿಂತಿದ್ದ ಗೋವಿಂದನು ತಣ್ಣೀರುತಂದು ತಲೆಗೆ ನೀರುಬಡೆದು, ಎಚ್ಚರಾಗುವದಕ್ಕೋಸುಗ ಬೇಕಾದಷ್ಟು ಪ್ರಯತ್ನಿಸಿದರೂ, ತೀವ್ರ ಎಚ್ಚರಾಗುವ ಲಕ್ಷಣವು ತೋರಲಿಲ್ಲ. ಅವನನ್ನು ಅಲ್ಲಯೇ ಸುಮ್ಮನೇ ಮಲಗಗೊಟ್ಟರು, ತುಸುಹೊತ್ತಿನಲ್ಲಿ ರಾಜವೈದ್ಯರು ಬಂದರು. ಔಷಧೋಪಚಾರಗಳು ನಡೆದವು. ಆದರೂ ರಾಜಪುತ್ರನು ಮೂರ್ಛಾವಸ್ಥೆ ಯಲ್ಲಿಯೇ ಇದ್ದನು. ಮುಂದೆ ಮೂರು ನಾಲ್ಕುತಾಸುಗಳಲ್ಲಿ ಎಚ್ಚರವಾಯಿತು. ಮೆಲ್ಲಗೆ ಎದ್ದುಮಂಚದಮೇಲೆ ಕುಳಿತುಕೊಂಡನು ಗೋವಿಂದನಾದರೂ ಒಡೆಯನ ಹತ್ತರದಲ್ಲಿಯೇ ಕುಳಿತಿದ್ದನು. ಅವನನ್ನು ನೋಡುತಲೆ, ರಸಿಕನು " ಗೋವಿಂದಾ! ನನಗೆ ಎಷ್ಟೋ ವಿಶ್ರಾಂತಿಯು ದೊರೆತಂತೆ ಯಾಗಿದೆ. ತೋಟದಲ್ಲಿ ಗಾಳಿಗೆ ತುಸು ಕುಳಿತುಕೊಳ್ಳಬೇಕೆನಿಸುತ್ತದೆ ಕರೆದುಕೊಂಡು ಹೋಗುವಿಯಾ?" ಎಂದು ನರಳುತ್ತ ಕೇಳಿದನು. ಕೂಡಲೆ ಗೋವಿಂದನು ಮೂವರು ನಾಲ್ವರು ಸೇವಕರನ್ನು ಕರೆತಂದನು.

ಎಲ್ಲರೂಕೂಡಿ ರಾಜಪುತ್ರನನ್ನು ತೋಳುರಟ್ಟೆಯಲ್ಲಿ ಕೈಹಾಕಿ ಮೆಲ್ಲಗೆಮೇಲಕ್ಕೆಬ್ಬಿಸಿದರು. ಏಳೇಳುತ್ತಾ ರಾಜಪುತ್ರನು ಗೋವಿಂದ, ನಾನುಮಲಗಿದ ವೇಳೆಯಲ್ಲಿ, ಯಾರಾದರೂ ಇಲ್ಲಿಯವರೆಗೆ ಬಂದಿದ್ದರೇನು? ಎಂದು ಉತ್ಸುಕತೆಯಿಂದ ಕೇಳಿದನು.

ಗೋವಿಂದ— ಹೆಚ್ಚಿನವರಾರೂ ಬಂದಿರಲಿಲ್ಲ. ಸಾಮ್ರಾಟರೋರ್ವರು, ಇಬ್ಬರು ಮೂವರು ಸರದಾರರೊಂದಿಗೆ, ಬಂದಿದ್ದು, ಅರ್ಧ ಮುಕ್ಕಾಲು ಗಂಟೆಯುವರೆಗೆ ನಿಂತು ಹೋದರು. ಆಸುದ್ದಿ ಈಸುದ್ದಿ ಮಾತಾಡುತ್ತ, ಅವರೊಂದಿಗೆ ಮೆಲ್ಲಗೆ ತಾನಿರುವ ಮಂದಿರದ ಹೊರಗಣ ಭಾಗದಲ್ಲಿ ಬಂದು ಕುಳಿತುಕೊಂಡನು. ಇಷ್ಟರಲ್ಲಿ ಓರ್ವ ಸೇವಕನು ವಿಶಾಲಾಕ್ಷ ಸರದಾರರು ಬಂದಿರುವರೆಂಬ ಸುದ್ದೀ ತೆಗದುಕೊಂಡು ಬಂದನು. ವಿಶಾಲಾಕ್ಷಎಂಬ ಹೆಸರು ಕೇಳುತಲೆ ರಾಜಪುತ್ರನು ಅವರನ್ನು ತನ್ನೆಡೆಗೆ ಕರೆದುತರಲು ಹೇಳಿದನು. ಮುಂದೆ ನಿಮಿಷಾರ್ಧದಲ್ಲಿ ಸೇನಾನಿಯ ಉಡುಪು ತೊಡಪು ಧರಿಸಿದ ಸುಮಾರು ನಾಲ್ವತ್ತು ನಾಲ್ವತ್ತೈದು ವರ್ಷದ ಓರ್ವ ಭವ್ಯಪುರುಷನು, ಕುಮಾರ ನಿದ್ದೆಡೆಗೆಬಂದು ಲೀನತೆಯಿಂದ ನಮುಸ್ಕರಿಸಿ ಸರೆದು ನಿಂತು,

ಕುಮಾರ! ಕೃಷ್ಣಕಾಂತ ಸರದಾರರು ನನ್ನನ್ನು ಇಲ್ಲಿಗೆ ಕಳುಹಿರುವರು, ಎಂದು ವಿನಯದಿಂದ ಹೇಳಿದನು. ಗೋಣು ಅಗಲಾಡಿಸುತ್ತ ರಾಜಪುತ್ರನು “ ಕೃಷ್ಣಕಾಂತರು ಕ್ಷೇಮದಿಂದ ಇರುವರೇ? ಅವರ ಪ್ರಕೃತಿಯು ಈಗ ಹೇಗೆಇರುವದು ” ಎಂದು ಕೇಳಿದನು.

ವಿಶಾಲಾಕ್ಷ— ನೆಟ್ಟಗಿರುವರು ಯುವರಾಜರೇ! ಆದರೆ ಅವರವಿಷಯಾಗಿ ತಮ್ಮಮೇಲೆ ಆರೋಪಬಂದಿದುದರಿಂದ ಅವರು ತುಸು ಅಸಮಾಧಾನಸ್ಥಿತಿಯಲ್ಲಿರುವರು.

ಕುಮಾರ— ಯಾವಪ್ರಸಂಗ! ನಾನೇನು ಅಂಥ ತಪ್ಪುಮಾಡಿರುವೆನು? ಅದರಲ್ಲಿಯೂ ಸರದಾರ ಕೃಷ್ಣಕಾಂತರ ವಿಷಯವಾಗಿ ಎಂದರೆ ಆಶ್ಚರ್ಯವೇಸರಿ! ನನಗಂತೂ ನಿಮ್ಮಮಾತಿನ ಅರ್ಥವೇ ತಿಳಿಯದಂತಾಗಿದೆ.

ಮೊದಲಣ ಸ್ವರದಿಂದಲೆ ವಿಶಾಲಾಕ್ಷರು “ಶತ್ರುಪಕ್ಷಕ್ಕೆ ಸಹಾಯ ಮಾಡಿಯೇ ಅಗಲಿ, ಅಥವಾ ಅವರವಮಾತಿಗೆ ಮರುಳಾಗಿಯೇ ಆಗಲಿ, ಯಾವುದೋ ಪ್ರಕಾರದಿಂದ ಕರ್ತವ್ಯ ಪರಾಙ್ಮುಖರಾದ್ದು ನಿಜ, ನಿಮ್ಮಪರಾಕ್ರಮದಿಂದ ಜಯದೊರೆತದ್ದೇನು ನಿಜ; ಆದರೆ, ಕೃಷ್ಣಕಾಂತರಂಥ ಶೂರ ಮುತ್ಸದ್ಧಿ ಸೇನಾನಿಗಳು, ಮೃತ್ಯುಮುಖದಲ್ಲಿ ಬೀಳುವಹೊತ್ತು ಬಂದಿತು; ಇದಲ್ಲದೆ ಅವರ ಆರಿಸಿದ ದಂಡಾಳುಗಳು ಶತ್ರು ಸಮ್ಮುಖದಲ್ಲಿ ಹೋರಾಡಿ ಅವರ ತೀಕ್ಷ್ಣಧಾರೆಗೆ ತುತ್ತಾದರು. ವಿಜಯಧ್ವನಿ ಯೊಂದಿಗೆ ಬಹಳವಾದರೆ ನೂರಿನ್ನೂರು ಸೈನಿಕರು ಬಂದಿರಬಹುದು ಮತ್ತೇನು ವಿಶಾಲಾಕ್ಷರೇ? ಆತುರದಿಂದ ರಣರಸಿಕನು “ನಾನು ಶತ್ರುಗಳನ್ನು ಕೂಡಿರುವೆನೆಂಬ ಆರೋಪವೇ? ಏನು? ಇನ್ನೂ ಏನಿರುವದು.

ವಿಶಾಲಾಕ್ಷ— ಅದಲ್ಲ, ರಾಜಪುತ್ರರೇ! ತಾವು ಶತ್ರುಪಕ್ಷದ ಮೋಹಿನಿ ಎಂಬುವ ಓರ್ವ ನವತರುಣಿಯ ಮೋಹಕ್ಕೆಬಿದ್ದು ಕೆಲಸಗೇಡಿಗಳಾದಿರಿ. ಇಲ್ಲವಾದರೆ ಅವಳಿಂದಲೇ ಈ ಕಾರ್ಯ ವಾಗಿರಬದುದು. ಇದೇತಮ್ಮ ಮೇಲಣ ಆರೋಪವು.

ರಣರಸಿಕ— ಇರಲಿ, ಮುಂದೇನು?

ವಿಶಾಲಾಕ್ಷ— ತಾವು ಮನಮೋಹಿನಿಯ ಮೋಹಪಾಶದಲ್ಲ ಸಿಲುಕಿ ಎಲ್ಲಕಡೆಗೂ ವ್ಯವಸ್ಥೆಯನ್ನು ಚೆನ್ನಾಗಿ ಇಡದೆ, ವೈಮರೆತು ಕುಳಿತು, ಒಳಗೆ ಸೈನ್ಯಸೇರಲು ಅನುವುಮಾಡಗೊಟ್ಟರಿ, ಇಷ್ಟಾದಮೇಲೆ ಕೇಳುವದೇನು? ಅರಿಬಲವು ಒಳಪ್ರವೇಶಿಸಿದೊಂದೇತಡ. ಕೃಷ್ಣಕಾಂತರ ಸೈನ್ಯದಮೇಲೆ ಬಿದ್ದು ನಚ್ಚುನೂರು ಮಾಡಿಬಿಟ್ಟರು.

ರಾಜಪುತ್ರನು ಮೋರೆ ಕೆಳಗೆಮಾಡಿ, ಹಾಯ್! ನನ್ನಂಥ ಹತಭಾಗಿಯು ಈ ಭೂಮಿಯಲ್ಲಿ ಯಾರೂ ಇರಲಿಕ್ಕಿಲ್ಲ. ವಿಶಾಲಾಕ್ಷರೇ ನಿಜವಾಗಿ ನಾನುಅಪರಾಧಿಯು. ಅದಿರಲಿ! ಆ ಮೋಹಿನಿಯು ಯಾರು ಅವಳುಗೊತ್ತು ಹತ್ತಿರುವದೇನು? ಅವಳಂಥ ಎದೆಗಾರ್ತಿಯನ್ನು ನಿಜವಾಗಿ ನಾನು ಎಲ್ಲಿಯೂಕಾಣೆ?

ವಿಶಾಲಾಕ್ಷ— ದೇವರು, ಇದನ್ನೇನುಮಾಡುವಿರಿ. ಅವಳು ತಮ್ಮ ಪ್ರಾಣತೆಗೆದು ಕೊಳ್ಳಬೇಕೆಂಬದಾಗಿ ಬಹಳ ಪ್ರಯತ್ನಿಸಿದಳು. ಕರುಣಾಕರನು ಸತ್ಯವಾದಿ ಇದ್ದುದರಿಂದ, ಅವಳು ಕೈಕೊಂಡ ಕೆಲಸವು ಈಡೇರಲಿಲ್ಲ.

ರಾಜಪುತ್ರ— "ಅವಳು ಯಾರಿರುವ ಳೆನ್ನುವದನ್ನು ಹೇಳಿದರೆ ನೆಟ್ಟಗಾಗುತ್ತದೆ" ಎಂದು ತ್ರಾಸಿಕ ಸ್ವರದಿಂದ ಕೇಳಿದನು.

ಗಂಭೀರತೆಯಿಂದ ವಿಶಾಲಾಕ್ಷನು "ಕುಮಾರ! ಯಾವನೀಚ ಕ್ರೂರ ಕರ್ಮಿ ವ್ಯಾಘ್ರದಂತ ನೆನ್ನುವವನು, ವೆಂಗಿಅಧಿಪತಿಗಳಾದ ಕುಬ್ಜದೊರೆಗಳ ಸಭಾಸ್ಥಾನವನ್ನು ಸೇರಿ, ಅವರಿಗೆ ದುರ್ಬೋಧನೆಯನ್ನು ತುಂಬಿ ಅಲ್ಲಿಯ ಪ್ರಸಿದ್ಧ ಮುತ್ಸದ್ದಿಗಳನ್ನು, ದಿಕ್ಕುಪಾಲಾಗಿಮಾಡಿ ಅವರ ರಾಜ್ಯಕ್ಕೆ ದಾಳೀತಂದನೋ ಅದೇ ಆ ನೀಚನ ದಾಸೀ ಕನ್ಯಯೇ ಇವಳು.

ಚಿನ್ನದದುರ್ಗ, ವಿಜಯದುರ್ಗ, ನಂದಿದುರ್ಗಗಳು, ಇದುವರೆಗೆ ಅವನ ವಶದಲ್ಲಿಯೇ ಇರುತ್ತಿದ್ದವು. ವೆಂಗಿಅರಸರನ್ನು ಎರಡನೆಯ ಸಾರೆ ಯುದ್ಧದಲ್ಲಿ, ಜಯಸುತಲೆ ನಂದರು ತಾವು ಗೆದ್ದ ಪ್ರಾಂತದ ಸ್ವಾಮಿತ್ವವನ್ನು ಅವನಿಗೆ ಒಪ್ಪಿಸಿಕೊಟ್ಟದ್ದರು ನಂದೀದುರ್ಗ, ವಿಜಯದುರ್ಗ ಗಳನ್ನು ನೀವುಗೆದೆಯುತಲೆ, ನಿಮ್ಮನ್ನು ಎದುರಿಸಿ, ಶೆರೆಹಿಡಯುವದು ಕಠಿಣಸಾಧ್ಯವೆಂದೆಂದು, ತಾನು ಸಾಕಿದ ಕನ್ಯಗೆ, ಒತ್ತಾಯದಿಂದ, ನಿಮಗೆ ಮೋಸಗೊಳಿಸಲು ಹೇಳಿ, ನಿಮ್ಮನ್ನು ಯುಕ್ತಿಯಿಂದ ಶೆರೆಹಿಡಿಯಬೇಕೆಂದು ಮಾಡಿದ್ದನಂತೆ. ಆದುಷ್ಟಬುದ್ಧಿಯನ್ನುವವನೇ ವ್ಯಾಘ್ರದಂತನು. ಆ ವ್ಯೂಹವೆಲ್ಲ ಅವನೇರಚಿಸಿದವನು ಮೋಹಿನಿಯು ತಂದೆಯುಸುಳ್ಳು ದುಷ್ಟಬುದ್ಧಿಎಂದು ಇಟ್ಟಕೊಂಡು ಹೆಸರೂಸುಳ್ಳು ಎಲ್ಲವೂನಿಮ್ಮನ್ನು ಮೋಸಗೂಳಿಸಲು ಮಾಡಿದ ಅವನ ಕೃಷ್ಣಕಾರಸ್ಥಾನವು ಈಗಾದರೂ ತಿಳಿಯಿತೇ?

ರಸಿಕನು, ಮಂಚಬಿಟ್ಟು ಚಟ್ಟನೆಎದ್ದು, ವಿಶಾಲಾಕ್ಷನಮುಂದೆ ನಿಂತು, ಏನು! ಏನು!! ಮೋಹಿನಿಯು ದಾಸಿಯ ಮಗಳೇ ?

ವಿಶಾಲಾಕ್ಷ— ಹೌದು! ಯುವರಾಜರು ಕೆಳಗೆಕುಳಿತುಕೊಳ್ಳಬೇಕು ಒಡೆಯರೇ! ಪ್ರಕೃತಿಯು ನೆಟ್ಟಗಿಲ್ಲ. ಮನಬಂದಂತೆ ಎದ್ದುನಿಂತು ಗಾಸಿಯಾಗಬೇಡಿರಿ.

ಕುಮಾರ— ನೆಟ್ಟಗಾಯಿತು, ನಾನುಮಾಡಿದ ಅಪರಾಧಕ್ಕಾಗಿ, ಎಂದು ನನ್ನನ್ನು ನ್ಯಾಯಾಸನ ದೆದುರಿಗೆ ಒಯ್ಯುವರು? ಶೀಕ್ಷೆಯು ಬಹು ತರವಾಗಿ ಆಗಲೇ ಕೊಡಲ್ಪಟ್ಟಿರಬೇಕು.

ವಿಶಾಲಾಕ್ಷ— ಇಲ್ಲ! ತಾವುರಾಜಪುತ್ರರು. ವಿಜಯಶಾಲಿಗಳು; ಆದುದರಿಂದ ತಮ್ಮನ್ನು ಓರ್ವ ಸಾಧಾರಣ ತಪ್ಪುಗಾರನಂತೆ, ನ್ಯಾಯಾಸನ ದೆದುರಿಗೆ ನಿಲ್ಲಿಸುವದು ಧರ್ಮವಲ್ಲೆಂದು, ನ್ಯಾಯಮೂರ್ತಿಗಳು, ಅಭಿಪ್ರಾಯ ವನ್ನಿತ್ತಿರುವರು. ತಮ್ಮ ವಿಚಾರಣೆಯು ಗುಪ್ತರೀತಿಯಿಂದ ಆಗಿದ್ದು, ಪ್ರಕೃತಿಯು ಸುಧಾರಿಸಿದಮೇಲೆ ಶೀಕ್ಷೆಯಸುನಾವಣಿ ಯಾಗುವದು.

ರಾಜಪುತ್ರ— ಚೆನ್ನಾಯಿತು ರಣರಸಿಕನು ಮಾಡಿದ ಅಪರಾಧಕ್ಕಾಗಿ, ಅವನಿಗೆ ಪ್ರಾಯಶ್ಚಿತ್ತ ದೊರೆಯಲೇಬೇಕು. ವಿಶಾಲಾಕ್ಷರೇ ! ಇತ್ತನೋಡಿರಿ ! ಅವನಿಗೂ ಅವನ ಜೀವಬೇಡಾಗಿದೆ. ಪ್ರಾಣದಂಡನೆಯು ಶೀಕ್ಷೆಯನ್ನು ಭೋಗಿಸಲು ಅವನೂ ಶಿದ್ಧನಿರುವನು.

ಅವನನ್ನು ಮುಂದೆ ಮಾತಾಡಗೊಡದೆ ವಿಶಾಲಾಕ್ಷನು, “ ಹೀಗಾಗುವದಿಲ್ಲ ರಾಜಪುತ್ರ! ತಮ್ಮನ್ನು ಯಾವಾಗಲೂ ನೋಡತ್ತಿರಬೇಕೆಂದು ಎಲ್ಲರ ಉತ್ಕಟೇಚ್ಛೆ; ಆದುದರಿಂದ ಸೌಮ್ಯಶೀಕ್ಷೆಯನ್ನೇ ವಿಧಿಸಿರುವರು. ಇದಲ್ಲದೆ, ಮಾಲತಿ ಎನ್ನುವಳೋರ್ವ ಆವುಳೋ ವನಕನ್ಯೆಯು ಇರುವಳು. ಅವಳುಸಹ ತಮ್ಮಜೀವದಾನದ ಸಲುವಾಗಿ ಸಾಮ್ರಾಟರಲ್ಲಿ ಯಾಚನೆಮಾಡಿ ಕೊಂಡಿರುವಳು. ಮಾಲತಿಯ ಹೆಸರನ್ನು ಕೇಳುತಲೆ ರಣರಸಿಕನ ದೇಹದಲ್ಲಿ, ವಿದ್ಯುತ್ ಸಂಚರಿಸಿದಂತಾಯಿತು. ಅವನು ಅಸ್ಫುಟಸ್ವರದಿಂದ, ವಿಶಾಲಾಕ್ಷರೇ! ಮಾಲತಿ ಎನ್ನುವವಳು ಯಾರು? ಅವಳವಾಸಸ್ಥಾನವು ಯಾವುದು, ಅವಳು ಇಲ್ಲಿಗೆ ಏಕೆಬಂದಿರುವಳು.

ವಿಶಾಲಾಕ್ಷ— ರಾಜಪುತ್ರರೇ, ನನಗೆ ಅದೆಲ್ಲವೂ ತಿಳಿಯದು. ಸಾಮ್ರಾಟರು ಅವಳಿಗೆ ದೊಡ್ಡ ಇನಾಮುಹಾಕಿ ಕೊಟ್ಟು ಅವಳಿಗನುರೂಪನಾದ ವರನನ್ನು ಹುಡುಕಿ ಸ್ವತಃ ಲಗ್ನಮಾಡಿ ಕೊಡುವೆವೆಂದು ವಚನಕೊಟ್ಟಿರುವರು. ಅವಳು ಓರ್ವ ಕ್ಷಾತ್ರಕನ್ಯೆಯು ಇದ್ದು, ತಮ್ಮ ಪ್ರಾಣದಾನದ

ಹೊರ್ತು ಯಾವುದನ್ನೂ ಇಚ್ಛಿಸಿಲ್ಲ. ತಮಗೆಜೀವದಾನಕೊಡುತಲೆ ತಾನು ತನ್ನ ಪೂರ್ವದ ವನಕ್ಕೆ ತೆರಳುವೆನೆಂದು ಹೇಳುತ್ತಲಿದ್ದಾಳೆ.

ರಸಿಕನ ಹೃದಯವು ಕರಿಗಿ ನೀರಾಯಿತು. ಅವನಕಣ್ಣುಗಳು ನೀರು ದುಂಬಿದವು. ತನ್ನ ಎರಡೂಕೈಗಳಿಂದ ಗಟ್ಟಿಯಾಗಿ ಮೋರೆಯನ್ನು ಮುಚ್ಚಿಕೊಂಡು ಕಂಪಿತಸ್ವರದಿಂದ "ಹಾಗಾದರೆ ನನಗೆ ಯಾವಶೀಕ್ಷೆಯನ್ನು ವಿಧಿಸಿರುವರು."

ವಿಶಾಲಾಕ್ಷ— ಕುಮಾರರೇ! ಅಂಥಕಠಿಣಶೀಕ್ಷೆಯಲ್ಲ. ತೀರ ಅಲ್ಪ. ಮನಮೋಹಿನಿ ತಮ್ಮೀರ್ವರ ವಿವಾಹ ಬೆಳೆಯಿಸಿ, ಉಪಜೀವನದ ಸಲು ವಾಗಿ ಒಂದು ದೊಡ್ಡ ಜಾಹಗೀರ ಹಾಕಿಕೊಟ್ಟು, ತಮ್ಮಹೆಸರನ್ನು ಚಾಲುಕ್ಯ ಸಾಮ್ರಾಟರ ವಂಶಾವಳಿಯಿಂದ ಅಳಿಸಿಬಿಡುವರಾಗಿ ಮಾಡಿದ್ದಾರೆ. ಎಂದು ಹಾಸ್ಯದಿಂದ ನುಡಿದನು. ವಾತಪ್ರವೇಶಿಸಿದ ರೋಗಿಯಂತೆ,

ರಣರಸಿಕನು! ಒಮ್ಮಿಂದೊಮ್ಮೆ ಓದರಿ, ವಿಶಾಲಾಕ್ಷ ಏನನ್ನುವಿರಿ? ಈ ರಸಿಕನು ಒಂದೇಸಾರೆ ಸಹಸ್ರ ಯಾತನೆಗಳನ್ನು ಸಹಿಸಬಲ್ಲನು. ಆದರೆ ಇಂಥ ಕ್ಷುಲ್ಲಕ ಶೀಕ್ಷೆಯು ಅವನಿಂದಸಹಿಸ ಲಾಗುವದಿಲ್ಲ. ರಸಿಕನ ಚೀರಾಟದ ಪ್ರತಿಧ್ವನಿಯು ಉಪವನವನ್ನೆಲ್ಲ ವ್ಯಾಪಿಸಿತು. ಇಷ್ಟರಲ್ಲಿ ಅವರು ಕುಳಿತ ಹಿಂದಣ ಭಾಗದಲ್ಲಿ ಯಾರೋ ಗುಜಗುಜಿಸುತ್ತಿರುವಂತೆ ಭಾಸವಾಯಿತು. ಅವರೀರ್ವರ ಲಕ್ಷ್ಯವು ಅತ್ತಕಡೆಗೆ ಅಷ್ಟೊಂದು ಇದ್ದಿಲ್ಲ. ಇಷ್ಟಾಗುವದರೊಳಗೆ ವಿಶಾಲಾಕ್ಷರೂ ಮೆಲ್ಲಗೆ ಹಿಂದಕ್ಕೆ ಸರೆದರು. ಅವರು ಕಾಣದ ಹಾಗಾದಮೇಲೆ, ರಸಿಕನು ಆವೇಶದಿಂದ ವಿಶಾಲಾಕ್ಷರೇ! ತಮ್ಮಹಾಗೂ ಕೃಷ್ಣಕಾಂತರ ಉಪಕಾರವನ್ನು ನಾನು ಎಂದಿಗೂ ಮರೆಯನು. ತಮಗೆ ಅತ್ಯಂತ ಋಣಿಯಾಗಿರುವೆನು. ಸಾಮ್ರಾಟರು ವಿಧಿಸಿದ ಶೀಕ್ಷೆಯು ಕೃತಿಯಲ್ಲಿ ಬರುವದ ರೊಳಗಾಗಿಯೇ ನೀವೆಲ್ಲರು ರಸಿಕನ ಪ್ರೇತದೇಹವನ್ನು ಇದೇಸ್ಥಳದಲ್ಲಿ ಕಾಣುವಿರಿ ಎಂದು ಮನದಲ್ಲಿಯೇ ನುಡಿದು ಸೇವಕರ ಸಹಾಯವಿಲ್ಲದೆ ಅವಸರದಿಂದೆದ್ದು ತನ್ನ ಮಂದಿರವನ್ನು ಪ್ರವೇಶಿಸಿದನು.

✤ ✤ ✤ ✤ ✤ ✤ ✤ ✤ ✤

ಆರಾತ್ರಿ ರಣರಸಿಕನ ಮನಃ ಪ್ರವರ್ತಿಯು ಒಳ್ಳೇ ಉಲ್ಹಾಸಿತವಾಗಿ ಕಾಣಬರುತಿತ್ತು. ರಾತ್ರಿಯಾಗುತಲೆ ಅಲ್ಪಾಹಾರಮಾಡಿ ಹಾಸಿಗೆ ಹಾಸಲು ಗೋವಿಂದನಿಗೆ ಹೇಳಿದನು. ಶಯ್ಯವು ಸಿದ್ಧವಾಗುತಲೆ ಗೋವಿಂದನನ್ನು ದ್ದೇಶಿಸಿ, ಗೋವಿಂದಾ! ನಿಮ್ಮಯೋಗ್ಯತೆ ಗನುಸರಿಸಿ ಇಷ್ಟುದಿವಸಗಳವರೆ ಗೆ ನಿಮ್ಮ ಸೇವಕ ಧರ್ಮಕ್ಕೆ ಬಾಧೆಬರದಂತೆ ವರ್ತಿಸಿದಿರಿ. ನಾನು ಗಾಯಾ ಳುವಾಗಿ ಬಿದ್ದಾಗ ಈಗೂಸಹ ಪರಿಪರಿಯ ಕಷ್ಟಗಳ ನನ್ನುಭವಿಸಿ ನನ್ನ ಶುಶ್ರೂಷೆಯನ್ನು ಮಾಡುತ್ತಿರುವಿರಿ. ನಿಮ್ಮೀ ಉಪಕಾರವನ್ನು ಎಂದಿಗೂ ಮರೆಯುವಂತಿಲ್ಲ. ದೇವರು ನಿಮಗೆ ಕಲ್ಯಾಣಮಾಡಲಿ. ನನ್ನಿಂದೇನಾದ ರೂ ತಪ್ಪುಗಳಾಗಿದ್ದರೆ ಕ್ಷಮಿಸಿರಿ.

ರಣರಸಿಕ ನಾಡುವ ಮಾತುಗಳನ್ನು, ಗೋವಿಂದ ಮುಂತಾದವರು ಓಮ್ಮನಿಸಿನಿಂದ ಕೇಳುತ್ತ ನಿಂತಿದ್ದರು. ಒಡೆಯನಾಡುವ ಮಾತುಗಳನ್ನು ಗೋವಿಂದನಿಂದ ಕೇಳುವದಾಗಲಿಲ್ಲ ಅವನು "ಧನಿಯರೇ ಅರವುದಪ್ಪಿದ ವರಂತೆ ಹೀಗೇಕೆ ಮಾಡುವಿರಿ. ಸುಮ್ಮನೆ ಮಲಗಿಕೊಳ್ಳಿರಿ." ಎಂದು ಗಾ ಬರಿಗೊಂಡು ಹೇಳಿದನು.

ರಸಿಕ— ಎಲೋ ಗೋವಿಂದ! ನನಗೆ ಸ್ಮೃತಿದಪ್ಪಿಲ್ಲ ಪೂರ್ಣಎಚ್ಚ ರವಿದೆ. ನಿದ್ದೆ ಬಂದಂತಾಗಿದೆ. ತುಸು ಮಲಗಗೊಡು ಎಂದು ಹೇಳಿ ಹಾಸಿಗೆ ಯಮೇಲೆ ಮಲಗಿಕೊಂಡನು. ಪಾಪ ಆಬಡಸೇವಕಜನರು ಒಡೆಯನಪ್ಪ ಣೆಯ ಮೇರೆಗೆ ನಿರುಪಾಯರಾಗಿ, ಹೊರಗೆ ಹೊರಟುಹೋದರು.

ರಾಜಪುತ್ರನು ಓರ್ವನೇ ಈತಲೆದಿಂಬಿನಿಂದ ಆತಲೆದಿಂಬಿಗೆ, ಆತಲೆ ದಿಂಬಿನಿಂದ ಈತಲೆದಿಂಬಿಗೆ, ಹೊರಳಾಡುತ್ತ ಏನೋ ಬಾಯಿಯಲ್ಲಿಯೇ ಗುಣಗುಟ್ಟುತ್ತ ಬಿದ್ದುಕೊಂಡನು. ಬೆಳಗಾಗಬಂದರೂ ಕಣ್ಣಿಗೆ ಕಣ್ಣು ಹ ತ್ತಲಿಲ್ಲ. ಅರುಣೋದಯವಾಯಿತು ಮಲಗಿದಜನರು ಏಳತೊಡಗಿದರು. ಗಾಯಗಳು ಇನ್ನೂ ಪೂರ್ಣಮಾದಿದ್ದಿಲ್ಲ, ಮೈಯಲ್ಲಿ ಶಕ್ತಿಯೂ ಇದ್ದಿಲ್ಲ. ಆದರೆ ಜೀವದಮೇಲೆ ಉದಾಸೀನನಾದ ರಾಜಪುತ್ರನು, ವೇದನೆಯಿನ್ನು ಲ ಕ್ಷಿಸುವನೇ? ಅವನ ಮೈಯಲ್ಲಿ ವಾತ ಸಂಚಾರವಾದಂತಾಗಿ ಸ್ಫೂರ್ತಿಯು

ಬಂದಿತ್ತು. ಕೂಡಲೆ ಅವನು ಹಾಸಿಗೆಯಿಂದ ಮೇಲಕ್ಕೆದ್ದು ಒಳಕ್ಕೆಹೋಗಿ ತನ್ನ ತೀಕ್ಷ್ಣ ಧಾರೆಯ ಕೈಗತ್ತಿಯನ್ನು ತೆಗೆದುಕೊಂಡು, ತಾನಿದ್ದ ಶಂಕರಿ ವಿಲಾಸ ಮಂದಿರದಿಂದ ಮಂದಿರದ ಹಿಂಭಾಗದ ಕಡೆಗೆ ಶೀಘ್ರಗತಿಯಿಂದ ನಡೆದನು.

ನಮ್ಮಕಥಾನಾಯಕನ ಮುಂದಿನ ಸ್ಥಿತಿಯನ್ನು, ನೋಡಲುತ್ಸುಕನಾಗಿಯೋ ಏನೋ ಎನ್ನುವಂತೆ ಭಗವಾನ್ ಸಹಸ್ರರಶ್ಮಿಯು, ಪ್ರಾಗಂಗನೆಯ ಮನೆಯಿಂದ ಆರಕ್ತಮುಖ ಮುದ್ರೆಯಿಂದ, ತನ್ನ ಏಕಚಕ್ರರಥವನ್ನೇ ಮುಂದೆ ಮುಂದೆ ನಡೆದಿದ್ದನು.

ಉಪವನದೊಳಗಣ ಎಲ್ಲಿ ವೃಕ್ಷರಾಜಿಗಳು, ಹುವುಗಳುಅಲಳಿ ತಮ್ಮ ಸುಗಂಧವನ್ನು ಎಲ್ಲಕಡೆಗೂ ಬೀರಹತ್ತಿದ್ದವು ರಣರಸಿಕನು ಸೃಷ್ಟಿಸೌಂದರ್ಯದ ಸೊಬಗನ್ನು ದುರ್ಲಕ್ಷಿಸಿ ಅತ್ತಿತ್ತ ಉಪವನದಲ್ಲಿಅಡ್ಡಾಡುತ್ತಿದ್ದನು

ಮುಂದೆ ನಿಮಿಷಾರ್ಧದಲ್ಲಿ ಒಮ್ಮಿಂದೊಮ್ಮೆ ಒಂದೇ ಸ್ಥಳದಲ್ಲಿಯೇ ದಿಂಗುಬಡಿದವನಂತೆ ಸುಮ್ಮನೆ ನಿಂತುಕೊಂಡನು. ಮೇಲಕ್ಕೆ ಮೋರೆಎತ್ತಿದನು, ಸೂರ್ಯನಾರಾಯಣನು ತನ್ನ ಕಿರಣಗಳನ್ನು ಪೃಥ್ವೀತಲದಮೇಲೆ ಪಸರಿಸುತ್ತ ನಡೆದಿದ್ದನು. ರಾಜಪುತ್ರನು ಸಾವಿತ್ರನಿಗೆ ಪ್ರಣಿಪಾತ ಸಾಷ್ಟಾಂಗಮಾಡಿ, ಮನಸ್ಸಿನೊಳಗೆ ಏನೋ ಅನ್ನುತ್ತ ಕೂಡಲೆ ಕೈಯೊಳಗಿರುವ ಕತ್ತಿಯನ್ನು ಒರೆಯಿಂದ ಹಿರಿದನು. ಅಷ್ಟಗಲ್ಲಿ ಅಲ್ಲಲ್ಲಿ ಸಪ್ಪಳವಾದಂತೆ ಭಾಸವಾಯಿತು. ಪುನಃ ಎಲ್ಲಕಡೆಗೂ ದಿಟ್ಟಿಸಿನೋಡಿ, ಯಾರೂ ಇಲ್ಲದಿರುವದನ್ನು ಮನಗೊಂಡು, ತೀವ್ರ ಪ್ರಾಣತ್ಯಾಗ ಮಾಡಬೇಕೆನ್ನುವದಾಗಿ ಖಡ್ಗವನ್ನು ಚುಂಬಿಸಿ, ಕೈಮೇಲಕ್ಕೆತ್ತಿ ಕುತ್ತಿಗೆಯ ಮೇಲೆ ಗಟ್ಟಿಯಾಗಿ ಹೊಡೆದು ಕೊಳ್ಳುವವನು, ಅಷ್ಟರಲ್ಲಿ ಒಂದುಕೋಮಲವಾದ ಕರಕಮಲವು ಅವನ ಕೈಯನ್ನು ಗಟ್ಟಿಯಾಗಿ ಹಿಡಿಯಿತು.

ರಾಜಪುತ್ರನ ಸಿಟ್ಟು ಹೊಟ್ಟೆಯಲ್ಲಿ ಹಿಡಿಸದಾಯಿತು. ಆಸಿಟ್ಟನ್ನು ಸಹಿಸುವದಾಗಲಿಲ್ಲ, ಅವನು ಭೂಮಿ ಕಂಪಿಸುವಹಾಗೆ ಗಟ್ಟಿಯಾಗಿ ಚಾಂಡಾಲಿ! ನಾನು ಸುಖದಿಂದ ಮೃತ್ಯುವಿನ ಅರಮನೆಯನ್ನು ಸೇರಿ ವಿಲಾಸ

ಹೊಂದ ಹೋದರೂ, ನೀನು ನಿನ್ನ ವೈರತ್ವ ಸಾಧಿಸುವ ಸಲುವಾಗಿ ಪುನಃ ನನ್ನನ್ನು ಭವಬಂಧನದ ಶೆರೆಮನೆಯಲ್ಲಿಟ್ಟು ಅಪಮಾನ ಕ್ರೀಡುಮಾಡಿ ದು:ಖದಲ್ಲಿಡುವದಕ್ಕೋಸ್ಕರ ಇಲ್ಲಿಯವರೆಗೆ ಬಂದೆಯಾ?

" ರಾಜಪುತ್ರ ತಾವುಹೀಗೇಕೆ ಮಾತಾಡುವಿರಿ? " ಎಂಬ ಕೋಮಲವಾದ ಕರುಣಾಜನಕ ಸ್ವರವು ಹಿಂದಿನಿಂದ ಕೇಳಬಂದಿತು.

ಕುಮಾರನು ಮೋರೆಮೇಲೆತ್ತಿ ಆ! ಈ ಧ್ವನಿಯು ಮಾಲತಿಯದಾಗಿದ್ದಂತೆ ತೋರುತ್ತದೆ, ಆದರೆ ಅವಳು ಇಲ್ಲಿಗೇಕೆ ಬಂದಳು, ಎಂದು ತಿರುಗಿನೋಡಿದನು. ನಿಜವಾಗಿ ಅಲ್ಲಿ ಮಾಲತಿಯೇ ನಿಂತಿದ್ದಳು. ಈ ಹೊತ್ತಿನ ಮಾಲತಿಯ ಉಡುಪು ಅವಳರೂಪಕ್ಕನುಗುಣವಾಗಿತ್ತು. ಅವಳಹೆಳಲಿನಲ್ಲಿ ವನಪುಷ್ಪದಬದಲಾಗಿ ಬೆಲೆಬಾಳುವ ರತ್ನಪಚ್ಛದ ಹೂಗಳು ಕಾಣುತ್ತಿದ್ದವು ನಾರಬಟ್ಟೆಯಬದಲಾಗಿ ಜರದ ಪೀತಾಂಬರವು ಅವಳ ಅಂಗಾಂಗದಮೇಲೆ ಪರಿಶೋಭಿಸುತ್ತಿತ್ತು. ಅವಳ ಆ ನಿಷ್ಕಲಂಕ ಸುಂದರಸುರೂಪವನ್ನು ನೋಡುತಲೆ ರಾಜಪುತ್ರನು, ಆಶ್ಚರ್ಯಭರಿತನಾದನು.

ಅವನು ಮೋರೆ ಕೆಳಗೆಮಾಡಿ, ಅಸ್ಪಷ್ಟಸ್ವರದಿಂದ ಮಾಲತಿ! ಇಲ್ಲೇಕೆ ಬಂದಿ? ಎಂದು ಕೇಳಿದನು.

ಮಾಲತಿಯು ನಸುನಗುತ್ತ " ಒಳ್ಳೇದು ಚೆನ್ನಾಗಿದೆ! ಯುವರಾಜ! ತಾವೇ ಕರೆಕಳುಹಲಿಲ್ಲವೆ? ತಮ್ಮ ಅಪ್ಪಣೆಯ ಮೇರೆಗೆ ಬಂದೆನು.

ರಾಜಪುತ್ರ— ದೇವೀ! ನಾನು ಕರೆಕಳುಹಿದೆನೆ! ನಿನ್ನನ್ನು ನಾನು ಕರೆಕಳುಹಿದೆನೆ!! ಈ ಚಾಂಡಾಲ ಪಾಷಾಣಹೃದಯನಿಗೆ ನಿನ್ನನ್ನು ಕರೆಕಳುಹಲು ಮೋರೆ ಯಲ್ಲಿದೆ? ಇರಲಿ; ಬಂದದ್ದಾದರೂ ಒಂದುರೀತಿಯಿಂದ ನೆಟ್ಟಗಾಯಿತು. ನಾನು ನಿನ್ನನ್ನು ಮೋಸಗೊಳಿಸಿದ ಅತ್ಯಂತ ಅಪರಾಧಿ ಇರುವೆನು. ನಾನು ಮಾಡಿದ ತಪ್ಪು ಕ್ಷಮಿಸಲು ಬರುವಂತಿಲ್ಲ. ನಿನ್ನ ನಿಷ್ಕಪಟ ಪ್ರೇಮವನ್ನು ವಂಚಿಸಿದೆನು, ನಿಜವಾಗಿ ಹೇಳುತ್ತೇನೆ. ನಿನ್ನ ಸತೇಜ ಮುಖವನ್ನು ನೊಡುವ ಧೈರ್ಯವಾಗಲೊಲ್ಲದು ಬಿಡು, ಮಾಲತಿ! ಕೈಬಿಡು!

ಈ ಪಾಪಿ ನರಾಧಮನಾದ ರಣರಸಿಕನು, ಭೂಮಿಯಮೇಲೆ ಇಲ್ಲದಂತಾಗುವದೇ ನೆಟ್ಟಗೆ.

ಮಾಲತಿಯ ಹೃದಯವು ಕರಿಗಿ ನೀರಾಯಿತು. ಅವಳ ನೇತ್ರಗಳು ಅಶ್ರುದುಂಬಿವು. ಕುತ್ತಿಗೆಯ ಸಿರಗಳು ಬಿಗಿದುಬಂದವು. ಅವಳು ಅಧೋಮುಖಿಯಾಗಿ ಗದ್ಗದ ಸ್ವರದಿಂದ “ ರಾಜಪುತ್ರ, ತಾವು ಜೀವದಮೇಲೆ ಇಷ್ಟೇಕೆ ಉದಾಸೀನರಾಗಿರುವಿರಿ,

ರಸಿಕ- ಹಾಯ್ ಮಾಲಾ! ಈ ರಣರಸಿಕನ ವಿಷಪೂರಿತ ಹೃದಯಕ್ಕೆ ಹೆಚ್ಚಾಗಿ ಆಘಾತಮಾಡಬೇಡ. ಈ ನಿನ್ನ ದಿವ್ಯಮೂರ್ತಿ ಎತ್ತ. ಆ ದಾಸಿ ಕನ್ಯಯು ಎತ್ತ- ಅವಳಕೂಡ ನನ್ನ ವಿವಾಹವೇ? ವಿವಾಹಕ್ಕಿಂತ ಸಾಯುವದೇಲೇಸು.

ಮಾಲತಿಯು ಚಕಿತಳಾಗಿ “ ರಾಜಪುತ್ರ ಇದೇನು? ತಾವು ಎಚ್ಚರದ ವೇಳೆಯಲ್ಲಿ ಹೀಗೇಕೆ ಮಾತಾಡುವಿರಿ. ದಾಸಿಯ ಪುತ್ರಿಯು ಯಾರು? ಅವಳಸಂಗಡ ವಿವಾಹವು ಯಾರದು? ”

ಗಂಭೀರಸ್ವರದಿಂದ ರಾಜಪುತ್ರನು, ಮಾಲತಿ ನಾನು ಕರ್ತವ್ಯಮೂಢನಾದದ್ದರಿಂದ ದಾಸಿಯ ಪುತ್ರಿಯಾದ ಮೋಹಿನಿಯೊಂದಿಗೆ ನನ್ನವಿವಾಹ ಬೆಳೆಯಿಸಿ ಚಾಲುಕ್ಯ ಸಾಮ್ರಾಟರ ವಂಶಾವಳಿಯಿಂದ ನನ್ನನ್ನು ತಳ್ಳಬೇಕೆಂಬದಾಗಿ ನ್ಯಾಯಮೂರ್ತಿಗಳು ಶೀಕ್ಷೆ ವಿಧಿಸಿದ್ದಾರಂತೆ.

ಮಾಲತಿ— ಮೊದಲಿನಿಂದಸುಳ್ಳು ತಾವು ಗಾಯಹೊಂದಿ ಮಲಗಿದಾಗ ಸಾಮ್ರಾಟರೂ, ಕೃಷ್ಣಕಾಂತ ಸರದಾರರೂ, ನಾನೂ ದಿನಾಲು ನಾಲ್ಕೈದು ಸಾರೆಯಾದರೂ, ಬಂದು ಹೋಗುತ್ತಿದ್ದೆವು. ದೊಡ್ಡದೊಂದು ಸಭೆನೆರೆಯಿಸಿ ಅದರಲ್ಲಿ ತಮ್ಮ ಪರಾಕ್ರಮಕ್ಕೆ ತಕ್ಕ ಸನ್ಮಾನವಾಗಬೇಕೆಂದು, ಸ್ವತಃ ಸಾಮ್ರಾಟರು ಅನ್ನುತ್ತಿದ್ದುದನ್ನು ನಾನು ಕಿವಿಯಿಂದ ಕೇಳಿದ್ದೇನೆ, ಆದರೆ ತಾವೇನನ್ನುವಿರಿ. ಇದನ್ನು ?

ರಾಜಪುತ್ರ— ಇಲ್ಲ ಈ ಸಂಗತಿಯನ್ನು ನಮ್ಮ ಎರಡನೆಯ ತರಗ

ತಿಯ ಸರದಾರರಾದ ವಿಶಾಲಾಕ್ಷರು ಹೇಳಿದರು. ಇದು ಹಾರಿಕೆಯ ತೂರಿಕೆಯ ಸುದ್ದಿಯಲ್ಲ.

ಮಾಲತಿ— ಯುವರಾಜ! ಎಲ್ಲಿಯವರೆಗೆ ಮಾಲತಿಯ ಪ್ರೇಮದ ಪರೀಕ್ಷೆ ಮಾಡಬೇಕೆನ್ನುವಿರಿ? ಅಪ್ರಬದ್ಧ ವನಬಾಲೆಯು ಇರುವ ವೇಳೆಯಲ್ಲಿ ಮಾಡಿದ ವಾಗ್ದಾನವನ್ನು ಅವಳು ಮರೆತಿರುವಳೆಂದು ಭಾವಿಸುವಿರೋ? ಯಾವಳಿಗೆ ದಾಸಿಪುತ್ರಿ ಮೋಹಿನಿಯನ್ನುವಿರೋ ಅವಳು ನಿನ್ನಿನರಾತ್ರಿಯಲ್ಲಿಯೇ ಆತ್ಮಹತ್ಯ ಮಾಡಿಕೊಂಡಳು.

ರಣರಸಿಕನು ಅಚ್ಚರಿಗೊಂಡು, ಏನು! ಅವಳು ಆತ್ಮಹತ್ಯಮಾಡಿಕೊಂಡಳೇ? ಚೆನ್ನಾಯಿತು. ಪೀಡೆ ದೂರಾಯಿತು, ಪಾಪಮಯ ದೇಹದೊಳಗಿಂದ ಪಾರಾದಳು, ಅವಳಂಥ ಕುಕರ್ಮಿಯನ್ನು ನಾನೆಲ್ಲಿಯೂ ಕಾಣೆ.

ಮಾಲತಿ— ಛೀ, ನನಗೆ ಹಾಗೇನು ಕಾಣುವದಿಲ್ಲ. ಅವಳು ಬೇಕಂತೆ ಮಾಡಿದವಳೂ ಅಲ್ಲ. ಅನ್ನದಾತೃ ವ್ಯಾಘ್ರದಂತನ ಹೇಳಿಕೆಯ ಮೇರೆಗೆ ಮಾಡಿದವಳು. ತಾವು ಅವಳ ತಪ್ಪನ್ನು ಕ್ಷಮಿಸಬೇಕೆನ್ನುವದಾಗಿ ಅತ್ಯಂತ ದೈನ್ಯದಿಂದ ಹೇಳಿ ಪ್ರಾಣಬಿಟ್ಟಿರುವಳು.

ಕುಮಾರ— ಹಾಗಾದರೆ ರಣರಸಿಕ ದಾಸೀಪುತ್ರಿಯ ವಿವಾಹ ಬಂಧನದ ಸುದ್ದಿಯು ಬುಡದಿಂದ ಸುಳ್ಳಿರುವದು.

ಮಾಲತಿ— ಹೌದು, ನಿಜವಾಗಿ ಸುಳ್ಳಿರುತ್ತದೆ. ಇದಕ್ಕಾಗಿಯೇ ತಾವು ಪ್ರಾಣಬಿಡಲು ಸಿದ್ಧರಾಗಿದ್ದಿರೇನು?

ಕುಮಾರ— ಇದಲ್ಲದೆ ಇನ್ನೂ ಕಾರಣಗಳಿವೆ. ಮಾಲತಿ! ನಾನು ನಿನ್ನೆದುರಿಗೆ ಮಾಡಿದ ಪ್ರತಿಜ್ಞೆಯನ್ನು ಪೂರ್ಣ ಮಾಡದುದಕ್ಕಾಗಿ ನನಗೆ ಬಹಳೇ ವಿಷಾದವಾಗಿದೆ. ನಿನ್ನನ್ನು ವಂಚಿಸಿದ ಅಪರಾಧಕ್ಕಾಗಿ ನನಗೆ ಪ್ರಾಣದಂಡನೆಯ ಶಿಕ್ಷೆಯೇ ಯೋಗ್ಯವು.

ರಾಜಪುತ್ರನ ಹಸ್ತವನ್ನು ಪ್ರೇಮದಿಂದ ತನ್ನ ಕೈಯಲ್ಲಿ ತೆಗೆದುಕೊಂಡು ಗದ್ಗದಸ್ವರದಿಂದ “ ನಾಥ! ಬಾರಿಬಾರಿಗೂ ತಾವು ಹೀಗೇಕೆ ಮಾತಾ

ಡುವಿರಿ. ನಾನು ಹೊತ್ತಿನಸರಿಯಾಗಿ ಬಂದುದರಿಂದ ನೆಟ್ಟಗಾಯಿತು. ಇಲ್ಲದಿದ್ದರೆ ನನ್ನ ಸೌಭಾಗ್ಯ ಮಂದಿರದ ಕಳಸವನ್ನು ಧರೆಗುರುಳಿಸುತ್ತಿದ್ದಿರಿ" ಎಂದು ನುಡಿದಳು.

ರಾಜಪುತ್ರ— ನೀನು ಇಲ್ಲಿಗೆ ಬಂದ ಬಗೆಹೇಗೆ ?

ಮಾಲತಿ— ಬನದೇವ ನೆನ್ನುವಸೇವಕನು, ತಾವುತೋಟದಲ್ಲಿ ನನ್ನನ್ನು ಕರೆಯುತ್ತಿರುವಿರೆಂದು ಹೇಳಿದುದರಿಂದ ದೇವಿಯ ಪೂಜೆಯನ್ನು ಮಾಡುತ್ತಿದ್ದವಳು ಬಿಟ್ಟು ಹಾಗೆಯೇಬಂದೆ. ಬಹಳಮಾಡಿ ತಾವು ನಡೆಸಿರುವ ಆತ್ಮಹತ್ಯದ ಕೃತಿಯನ್ನು ನೋಡಿ ಅಂಜಿದವನಾಗಿ ನನ್ನನ್ನು ತಾವುಕರೆದುದಾಗಿ ಹೇಳಿರಬಹುದು.

ರಸಿಕ— ಈ ಹೊತ್ತು ಯಾವದೇವಿಯಪೂಜೆ.

ಮಾಲತಿ— ಸುಮಂಗತಿಯರಿಗೂ, ಅವಿವಾಹಿತ ಕನ್ಯೆಯರಿಗೂ, ಕುಮಾರಿಕೆಯರಿಗೂ ಅಖಂಡ ಸೌಭಾಗ್ಯವನ್ನೀಯುವ ದೀವಸಿ ಗೌರಿಯಪೂಜೆಯು.

ರಾಜಪುತ್ರ— ಚೆನ್ನಾಯಿತು. ಮಾಲಾ, ನಾವುಚಿನ್ನದದುರ್ಗವನ್ನು ತೆಗೆದುಕೊಂಡ ವೇಳೆಯಲ್ಲಿ, ಅಲ್ಲಿನೀನು ಹೇಗೆಬಂದೆ?

ಮಾಲತಿ— ವಿಜಯದುರ್ಗವನ್ನು ತೆಗೆದುಕೊಂಡಮೇಲೆ, ನಾವು ತಿಂಗಳವರೆಗೆ ತಮ್ಮ ಮಾರ್ಗ ಪ್ರತೀಕ್ಷೆಮಾಡಿದೆವು—ಆದರೂ ತಾವು ಬಂದವರಾಗಲಿಲ್ಲ, ಬಹುತರ ಆ ದಾಸಿಪುತ್ರಿಯು ಮೋಹಜಾಲದಲ್ಲಿ ಬಲೆ ಬಿದ್ದಿರಬಹುದೆಂದು, ಊಹಿಸಿದೆವು. ದುಷ್ಟಬುದ್ಧಿ ಯನ್ನುವವನೇ ತಮಗೆ ವಂಚಿಸಿರಬೇಕು. ಮತ್ತು ತಮಗೆ ಅವನಿಂದ ಏನಾದರೂ ತೊಂದರೆಯಾಗಬಹುದೆಂದು ಯಾವಾಗಲೂ ನಾವು ಜಾಗರೂಕತೆಯಲ್ಲಿರುತ್ತಿದ್ದೆವು. ಒಂದುಸಾರೆ ನಾನು ಆ ಕಠೋರನ ದೃಷ್ಟಿಗೆ ಬೀಳುತಲೆ, ಅವನು ತನ್ನ ನೂರಿನ್ನೂರು ಜನದರವಡೆಖೋರರನ್ನು ಕರೆದುಕೊಂಡುಬಂದು, ನಾವಿರುತ್ತಿದ್ದ ಆಸ್ಥಳಕ್ಕೆ ಮುತ್ತಿಗೆ ಹಾಕಿದನು. ಇದನ್ನರಿತ ನನ್ನಪ್ರಮಾಣಿಕ ಬೇಡಸೇವಕರು, ನಮ್ಮ ಗಂಧವುಕೂಡ ತಗುಲದ ಒಂದು ಕಟ್ಟಡವಿಯ ಗುಪ್ತಸ್ಥಳಕ್ಕೆ ನಮ್ಮನ್ನು ಕರೆದೊಯಿದರು.

ಕುಮಾರ— ಮುಂದೇನಾಯಿತು.

ಅಲ್ಲಿಯೂ ತಾವು ಕಾಣಬರೋಣವಾಯಿತು. ಇಷ್ಟರಲ್ಲಿ, ತಮ್ಮಮೇಲೆ ವಿಶ್ವಾಸ ಘಾತಕತನವನ್ನುಮಾಡಿ ಅವರು ತಮ್ಮನ್ನು ಎದುರಿಸಲು ಬಂದರು. ಇದನ್ನೆಲ್ಲ ಕೇಳುತ್ತಿದ್ದ ರಣರಸಿಕನು ದೀನಮುದ್ರೆಯಿಂದ ಅವಳಕಡೆಗೆ ನೋರೆದಿರುವಿ, ಮಾಲೇ ಈ ಅಕ್ಷಮ್ಯ ತಪ್ಪುಮಾಡಿದ ಅಭಾಗಿ ರಣರಸಿಕನನ್ನು ನಿನಂಥ ಉದಾರ ಮನಸ್ಸಿನ ಬಾಲಿಕೆಯು ಕ್ಷಮಿಸದಿದ್ದರೆ ಮತ್ತಿನ್ನಾರು ಕ್ಷಮಿಸಬೇಕು.

ಮಾಲತಿ— ಇನ್ನುಮೇಲಾದರೂ ಈಗಾಡುವ ಮಾತುಗಳನ್ನು ಮರೆತು ಬಿಡಿರಿ.

ರಾಜಪುತ್ರ— ನಿನ್ನಕೂಡ ಅಡವಿಯಲ್ಲಿದ್ದ ಆವೃದ್ಧನು ಬಹುತರ ಯಾರು ಇರಬಹುದು. ಆನಿನ್ನ ಜನ್ಮದಾತೃವಿನ ಸುಳುಹೇ ಹತ್ತದಂತಾಯಿತಲ್ಲ.

ಮಾಲತಿ— ತುಸುಹೊತ್ತಿನಲ್ಲಿ ಯಲ್ಲರೂ ಕಾಣಬರುವರು. ಪ್ರಿಯರೆ! ಆಮುದುಕರೇ ಅಮಾತ್ಯ ವೀರಸೇನರು, ಅವರೇ ನನ್ನಜನ್ಮದಾತೃಗಳು.

ರಸಿಕ— ಏನು ಅವರು ಅಮಾತ್ಯವರರೇ ! ಅಮಾತ್ಯವೀರಸೇನರು. ನಿನ್ನ ಜನ್ಮದಾತೃಗಳೇ? ನನಗಂತೂ ಎಲ್ಲವೂ ವಿಪರೀತವೇ ಆಗಿರುವದು.

ಮಾಲತಿಯು ಕಿಂಚಿತ್ ಲಜ್ಜೆಯಿಂದ ಮೋರೆ ಕೆಳಗೆಮಾಡಿ ಈಗಾದದೂ ಎಲ್ಲವೂ ತಿಳಿಯಿತಲ್ಲಿವೆ? ಇನ್ನುಮೇಲಾದರೂ ಈ ಅಬಲೆಯು ತಮ್ಮ ಕೃಪೆಗೆ ಪಾತ್ರಳಾಗಬಹುದಲ್ಲ?

ರಸಿಕ— ಪ್ರಿಯತಮೆ ! ನನ್ನಹೃದಯದೇವತೆ !! ತೀಕ್ಷ್ಣ ಅಲುಗಿನ ಮಾತುಗಳಿಂದ ಚುಚ್ಚಿ ನನ್ನೆದೆಯನ್ನು ಗಾಸಿಮಾಡಬೇಡ ಇದಕ್ಕೂ ಹೆಚ್ಚಿಗೆ ಇನ್ನೇನು ಹೇಳಲಿ. - - -

---

ಇಷ್ಟರಲ್ಲಿ ಗೋವಿಂದನು ಲಗುಬಗೆಯಿಂದ ಅಲ್ಲಿಗೆಬಂದು ಕೈಜೋಡಿಸಿ ವಿನಯದಿಂದ, “ ಧನಿಯರೇ ನಡೆಯಿರಿ, ಮಾಲತಿದೇವಿಯವರ ಸಂಗಡ ಮಾತಾಡುತ್ತ ನಿಲ್ಲುವ ಸಮಯವು ಇದಲ್ಲ, ವಾತಾಪಿ ಅರಮನೆಯೊಳಗಣ ಸಭಾಗೃಹದಲ್ಲಿ, ಅಮಾತ್ಯ ವೀರಸೇನ, ಕೃಷ್ಣಕಾಂತ, ವಿಶಾಲಾಕ್ಷ, ಮೊದಲಾದ ಸರದಾರ ಪುರದಸಭ್ಯಗೃಹಸ್ಥರನ್ನೊಡಗೊಂಡು ಪ್ರಭುಗಳು, ತಮ್ಮ ಬರುವಿಕೆಯನ್ನು ನೋಡುತ್ತ ಕುಳಿತಿದ್ದಾರೆ. ” ಎಂದುಹೇಳಿದನು.

✣ ✣ ✣ ✣ ✣ ✣ ✣ ✣

ಮುಂದೆ ತುಸು ದಿವಸಗಳಲ್ಲಿಯೇ,

**ರಣರಸಿಕ ರಾಜಪುತ್ರನ ವಿವಾಹವು,**

ಸಚಿವ ಪುತ್ರಿ

**ಕುಮಾರಿ ಮಾಲತಿ ಯೊಡನೆ**

ಒಳ್ಳೇ ವಿಜ್ರುಂಭಣೆಯಿಂದ ವಾತಾಪಿನಗರದಲ್ಲಿ ನೆರವೇರಿತು.
ವಿವಾಹ ಮಹೋತ್ಸವಕ್ಕೆ ಸಚೀವ ಸಾಮಂತ ಮಾಂಡಲೀಕ ಮುಂತಾದ,
ವರು ಬಂದಿದ್ದರು. ಚಾಲುಕ್ಯ ಸಾಮ್ರಾಟ ಚಂದ್ರದಿತ್ಯ ಮಹಾರಾ
ಯನು ತನ್ನ ತಮ್ಮನಿಗೆ ಅವನು ಜಯಸಿದ ವೆಂಗಿ ಪ್ರಾಂತದ
ಸ್ವಾಮಿತ್ವವ ನ್ನೊಪ್ಪಿಸಿಕೊಟ್ಟು, ಚಿನ್ನದ ದುರ್ಗದಲ್ಲಿ
ಬಹು ಸಂಭ್ರಮದಿಂದ ರಾಜ್ಯಾಭಿಷೇಕವನ್ನು
ಮಾಡಿಸಿದನು.

ಚಾಲುಕ್ಯ ಸಾಮ್ರಾಟರು ಕರ್ಣಾಟಕದ ಕೀರ್ತಿಯನ್ನು ಹೆಚ್ಚಿಸಿದ
ಸಂಗತಿಗಳನ್ನು ಈ ಅಲ್ಪಚರಿತ್ರೆಯಲ್ಲಿ ಕೊಡಲು ಅಸಾಧ್ಯವಾಗಿದೆ.

———————

*

# ದುಡಿತವೇ ದುಡ್ಡಿನತಾಯಿ.



ಕುಂತಳಪುರವು ದೊಡ್ಡಪಟ್ಟಣ ವೆನ್ನುವದಕ್ಕೆ ಬರುವಂತಿರದಿದ್ದರೂ ಜಿಲ್ಹೆಯಸ್ಥಳವಿದ್ದು ಸದ್ಯಕ್ಕೆಇಲ್ಲಿಒಂದು ಮಹಾವಿದ್ಯಾಲಯವು ಸ್ಥಾಪಿತವಾದುದರಿಂದ, ಇದಕ್ಕೆ ಪಟ್ಟಣವೆಂತಲೇಕರೆಯಬಹುದಾಗಿದೆ. ಮೊದಲುಸಣ್ಣಗ್ರಾಮವಿದ್ದುದರಿಂದ, ಗ್ರಾಮಕ್ಕೆಹೊಂದಿ ಹೊಲಗಳೂ ಗದ್ದೆಗಳೂ ತೋಟಪಟ್ಟಿಗಳೂ ಇದ್ದವು; ಆದರೆ ಜನವಸ್ತಿ ಬೆಳೆದಹಾಗೆ, ಹೊಸದಾಗಿ ಕಟ್ಟಿಸಿದ ಕಟ್ಟಡಗಳೂ, ನೌಕಾರಶಾಹಿಜನರ, ಹಾಗು ಸುಶಿಕ್ಷಿತ ರೆಂದೆನ್ನಿಸಿಕೊಳ್ಳುವ, ಗೌರಕಾಯದವರೂ, ಈ ಯಾವತ್ತು ವರ್ಗದವರಿಗೆ, ಸಾಮಾನುಗಳನ್ನು ಪೂರೈಸಿ ಕೊಡುವದಕ್ಕೆ ಇರುವ ಗುರ್ಜರ ವರ್ಗವೂ, ಮಾರವಾಡೀ ಜನರವರ್ಗವೂ, ಅವರ ಹೊಸ ಹೊಸ ಅಂಗಡಿಗಳೂ, ಈ ಯಾವತ್ತು ಜನರ ವಿಶ್ರಾಂತಿಗಾಗಿ ಇರುವ ಉಪಹಾರ ಗೃಹಗಳೂ, ಕ್ಷುಧಾಶಾಂತಿಗೋಸುಗ ಸೋಡಾ ಲಿಮಲೇಟ ಮಾರುವ ಮನೆಗಳೂ, ಸಿನೇಮಾ ನಾಟಕಗಳ ಗೃಹಗಳೂ, ಇವೇ ಮೊದಲಾದವುಗಳಿಂದ, ಇದು ಈಗ ದೊಡ್ಡಪಟ್ಟಣವೇ ಆಗಿದೆ. ಶೀಕ್ಷಣದ ಪ್ರಸಾರವು ಈ ಭಾಗದಲ್ಲಿ ಉತ್ತಮರೀತಿಯಿಂದ ನಡೆದುದರಿಂದ, ಈಗ ಇಲ್ಲಿ ಮಹಾವಿದ್ಯಾಲಯವು ಸ್ಥಾಪಿತವಾಗಿದೆ. ಇಲ್ಲಿ ಇರತಕ್ಕ ಸುಖವಸ್ತು ಸದ್ಗೃಹಸ್ಥರೆಂದರೆ ಮನಸಬದಾರರು, ಇವರು ಇಲ್ಲಿ ಸಾಂಪತ್ತಿಕ ಸ್ಥಿತಿಯಿಂದಲೂ ಮರ್ಯಾದೆಯಿಂದಲೂ ಚೆನ್ನಾಗಿದ್ದರು; ಆದರೆ ಅವರಿಗೆ ಪುತ್ರಸಂತಾನಮಾತ್ರ ಇದ್ದಿಲ್ಲ, ಒಬ್ಬಳೇ ಒಬ್ಬಮಗಳು ಸಂತಾನದ ಅಭಿವೃದ್ಧಿಗಾಗಿ ಇದ್ದಳು.

ಆದಂಪತಿಗಳು ತಮ್ಮ ಮಗಳಿಗೆ ಉತ್ತಮ ವಿದ್ಯಾವ್ಯಾಸಂಗವನ್ನು ಮಾಡಿಸಿ ಮಗಳೇಮಗನೆಂದುತಿಳಿದು ಸದಾ ಈಶಚಿಂತನೆಯಲ್ಲಿ ಸುಖದಿಂದ ಕಾಲಕಳೆಯುತ್ತಿದ್ದರು. ಇವರು ತಮ್ಮ ರೈತರನ್ನು ಮಕ್ಕಳಂತೆನೋಡುತ್ತಿದ್ದರು. ತಮ್ಮಮಗಳನ್ನಂತೂ ಪಂಚಪ್ರಾಣವೆಂತಲೇ ತಿಳಿದಿದ್ದರು. ಇವರು ರೈತರೆದುರಾಳಿಯಾಗಿ ಒಂದುಸಾರೆಯಾದರೂ ಕಚೇರಿಯಪಾವುಟಗೆಯನ್ನೇ

ರಿದ್ದಿಲ್ಲ. ಇವರ ಹೆಂಡತಿಯು ವಿದ್ಯಾವತಿ ಯಲ್ಲದಿದ್ದರೂ ಸುಶಿಕ್ಷಿತ ಸ್ತ್ರೀಯರಲ್ಲಿರಬೇಕಾದ ಎಲ್ಲಗುಣಗಳು ಆಗೃಹಿಣಿಯಲ್ಲಿದ್ದವು. ಅವಳಿಗೆ ಎರಡನೆಯ ಸ್ತ್ರೀಯರ ದುರ್ವತನವು ತಿಲಮಾತ್ರವೂ ಸೇರಿಬರುತ್ತಿದ್ದಿಲ್ಲ. ಅವಳು ತನ್ನಯೋಗ್ಯತೆಗೆ ತಕ್ಕಂತೆ ತನ್ನ ಆಪ್ತೇಷ್ಟಜನರಿಗೂ ಬಂಧುಬಳಗದವರಿಗೂ, ಇದಲ್ಲದೆ ರೈತರಿಗೂಸಹ ಸಹಾಯಮಾಡುತ್ತಿದ್ದಳು. ಇದೇ ಶಿಕ್ಷಣವೂ ಮಗಳಾದ ಚಂದ್ರಿಕೆಗೆ ದೊರೆತಿತ್ತು! ಇದಲ್ಲದೆ ಹೊಸಕಾಲದ ಪದ್ಧತಿಗೆ ಸರಿಯಾಗಿ ಮಗಳನ್ನು ಶಾಲೆಗೂ ಕಳುಹುತ್ತಿದ್ದರು. ಸದ್ಯಕ್ಕೆ ಅವಳ ಕನ್ನಡದ ಶಿಕ್ಷಣವು ಪೂರ್ಣವುಗಿದು ಇಂಗ್ರೇಜಿ ಮೂರನೇಇಯತ್ತೆಯಲ್ಲಿದ್ದಳು. ಇದರಹೊರ್ತಾಗಿ ಪೌರಾಣಿಕ, ಐತಿಹಾಸಿಕ, ಮುಂತಾದ ಧರ್ಮಗ್ರಂಥಗಳ ಜ್ಞಾನವಾದರೂ ತಕ್ಕಮಟ್ಟಿಗೆ ಚೆನ್ನಾಗಿಇತ್ತು. ತಾನುಯಾರು, ತನ್ನ ತಂದೆತಾಯಿಗಳ ಉದ್ಯೋಗವಾವುದು, ತನ್ನಯೋಗ್ಯತೆಏನು, ಇದೆಲ್ಲವೂ ಅವಳಿಗೆ ತಿಳಿಯುತ್ತಿತ್ತು. ಅವಳು ತಮ್ಮ ರೈತರಕೂಡ ವ್ಯವಹಾರದ ವಿಷಯಕ್ಕೂ ಜೇಸಾಯದ ವಿಷಯದಮೇಲೂ ಮಾತಾಡುತ್ತಿದ್ದಳು. ಅಗಾಗ್ಗೆ ಅವರುಮಾಡುವ ಹೊಲಗಳಿಗೆ ಹೋಗುತ್ತಿದ್ದಳು. ಸಾರಾಂಶ, ಅವಳ ಮನಸಿನ ಪ್ರವೃತ್ತಿಯು ಬಹಳೇ ಸಭ್ಯತನದ್ದಿತ್ತು.

ಚಂದ್ರಿಯ ಸೋದರಮಾವನು ಅದೇಊರಲ್ಲಿ ತಾಲೂಕದಾರ ಕಚೇರಿಯೊಳಗೆ ಒಂದು ಸಾಧಾರಣ ಉದ್ಯೋಗದಮೇಲೆ ಇದ್ದನು. ಅವರಮನೆಯಲ್ಲಿ ಮಾವ, ಅತ್ತಿ, ಮಗಳಾದ ವತ್ಸಲೆ, ಅತ್ತೆಯ ತಮ್ಮನಮಗ ಉಪೇಂದ್ರ. ಹೀಗೆ ನಾಲ್ವರೇ ಒಟ್ಟಿನಮೇಲೆ ತಮ್ಮ ಆದಾಯದಲ್ಲಿ ಹಾಸಿಗೆ ಇದ್ದಷ್ಟು ಕಾಲುಚಾಚಿಕೊಂಡು ಸುಖದಿಂದದಿನಗಳೆಯುತ್ತಿದ್ದರು ಅತ್ತಿಗೆಗೆಮಾತ್ರ ಒಬ್ಬಳೇ ಒಬ್ಬಮಗಳು. ಚಂದ್ರಕಾಣ ಬೇಕೆಂಬಹವ್ಯಾಸ; ಆದುದರಿಂದ ಉತ್ತಮ ಉಡಿಗೆ ತೊಡಿಗೆಗಳ ಸಲುವಾಗಿಯೂ ಆಭರಣಗಳ ಸಲುವಾಗಿಯೂ ಯೋಗ್ಯತೆಮೀರಿ ಖರ್ಚುಮಾಡುತ್ತಿದ್ದಳು. ಇಷ್ಟೆಲ್ಲ ಉತ್ತಮವಾದ ಬಟ್ಟೆಗಳಿಂದಲೂ, ವತ್ಸಲೆಯು ಹೆಚ್ಚಾಗಿ ಶ್ರೀಮಂತಿಕೆಯನ್ನು ತೋರಿಸುತ್ತಿದ್ದಳು. ಇದಲ್ಲದೆ ಸ್ವಭಾವ ಸಿದ್ಧವಾಗಿ ಒನಪು ಒಯ್ಯಾರಗಳ ಕಡೆಗೆ ಅವಳ ಒಲವುಹೆಚ್ಚು, ಯಾರಾದರೂ ನೋಡಿದರೆ ಅವರ ಲಕ್ಷಕ್ಕೆ ಈ ವಿಷ

ಯವು ಕೂಡಲೆ ತಿಳಿದು ಬರುತ್ತಿತ್ತು. ಇದಲ್ಲದೆ ಚಂದ್ರಿಕೆಗಿಂತ ತಾನು ಹೆಚ್ಚು ಶ್ರೀಮಂತಳೆಂದು ಒಣ ಬಡಿವಾರವನ್ನೂ ತೋರಿಸುತ್ತಿದ್ದಳು. ಆದುದರಿಂದ ಎಷ್ಟೋ ಶ್ರೀಮಂತ ಮೈತ್ರಿಣಿಯರು ಇವಳಸಂಗಡ ಸಮಭಾವದಿಂದ ವರ್ತಿಸುತ್ತಿದ್ದರು. ಇದರ ಪರಿಣಾಮ ಇವಳಸ್ವಭಾವದ ಮೇಲೆ ಮೇಲಿಂದ ಮೇಲೆ ಆಗುತ್ತಿತ್ತು.

ಹೀಗೆ ಇರುತ್ತಿರಲಾಗಿ ದುರ್ದೈವದಿಂದ ಮನಸಬದಾರರು ರೋಗಗ್ರಸ್ತರಾದರು. ಕಾಯಿಲೆಯು ಪ್ರಬಲವಾದ ಕೂಡಲೆ ಪರಿಸ್ಥಳೀಕ ಓರ್ವ ವಿಶ್ವಾಸಿಕ ಮಿತ್ರನನ್ನು ಕರೆಯಿಸಿ ಮೃತ್ಯು ಪತ್ರವನ್ನು ಮಾಡಿಸಿ ಅದನ್ನು ನೊಂದಾಯಿಸಿ, ಒಂದು ಪ್ರತಿಯನ್ನು ಮಿತ್ರನವಶಕ್ಕೂ ಮತ್ತೊಂದು ಪ್ರತಿಯನ್ನು ಮಗಳಾದ ಚಂದ್ರಿಕೆಯ ವಶಕ್ಕೆಕೊಟ್ಟರು ಕೊಡುವಕಾಲಕ್ಕೆ ಮಗಳಿಗೆ “ ನೀನು ಈಪತ್ರವು ನಿನ್ನಹತ್ತರ ಇರುವದೆಂದು ಯಾರಮುಂದೆಯೂ ಹೇಳಕೂಡದು ನಿನಗೆ ಈ ಪತ್ರವನ್ನು ನೋಡಬೇಕೆಂದು ಎಷ್ಟು ಉತ್ಕಟ ಇಚ್ಛೆಯಾದರೂ ನಿನ್ನ ವಯಸ್ಸಿನ ಹದಿನೆಂಟನೆಯ ವರ್ಷದ ಒಳಗೆ ಎಂದೂ ಒಡೆಯುಬೇಡ ” ಎಂಬದಾಗಿ ಹೇಳಿ, ಬೀಗನನ್ನುಕರೆಯಿಸಿ ತನ್ನ ಯಾವತ್ತೂ ಆಸ್ತಿಯನ್ನೂ ಮಗಳನ್ನೂ ಅವನವಶಕ್ಕೆಕೊಟ್ಟು, ಹದಿನೆಂಟ ವರ್ಷದವರೆಗೆ ಅವಳ ಮದುವೆ ಮಾಡಕೂಡದೆಂದು ಸೂಚಿಸಿ ತಾವು ಇಹಲೋಕದ ಯಾತ್ರೆಯನ್ನು ಮುಗಿಯಸಿದರು. ಈ ದುಃಖದ ಪರಮಾವಧಿಯನ್ನು ಅಪತಿವೃತೆಯಾದ ಹೆಂಡತಿಯಿಂದ ಸಹಿಸುವದಾಗಲಿಲ್ಲ. “ ದೇಹದಸಂಗಡ ನೆರಳ” ಇರುವಂತೆ ಪತಿಯುಸತ್ತ ಒಂಬತ್ತನೆಯದಿವಸ ವಿಷಮಜ್ವರದಿಂದ ಅವಳೂ ಸ್ವರ್ಗದ ದಾರಿಯನ್ನು ಹಿಡಿದಳು. ಆಬಡಪ್ರಾಣಿ ಚಂದ್ರಿಕೆಯುಮಾತ್ರ ನಿರಾಶ್ರಿತಳಾದಳು. ಮಮತೆಮಾಡುವ ತಾಯಿ ತಂದೆಗಳಿಬ್ಬರೂ ಹೋದಮೇಲೆ ಇವಳಮೇಲೆಯಾರು ಪ್ರೇಮಮಾಡಬೇಕು.

ಚಂದ್ರಿಕಾ! ಎಂದು ಅಕ್ಕರತೆಯಿಂದ ಕರೆಯುವ ತಾಯಿಯೂ ಕೈಬಿಟ್ಟುಹೋದಳು. ತಂದೆಯೂ ಇಲ್ಲದಂತಾದನು. ಏನುಮಾಡಬೇಕು? ಚಂದ್ರಿಕಾ ನಿನ್ನನ್ನು ಸಂತೈಸುವರು ಆರು? ಹೊಲ ಮನೆಗಳು, ತೋಟ ಪಟ್ಟಿಗಳು, ಬೆಳ್ಳಿ ಬಂಗಾರದ ಆಭರಣಗಳು, ನಿನ್ನ ದುಃಖದಭಾರವನ್ನು ಕಡಿ

ಮೆ ಮಾಡಬಲ್ಲವೇ ಇಲ್ಲ! ಯಾರಕಡೆಯಿಂದಲೂ ಸಾಧ್ಯವಿಲ್ಲ!! ದುಃಖದ ಲ್ಲಿ ರಾಜನೂ ಪ್ರಜೆಗಳೂ ಸರಿಯೆ. ಅವಳ ಬಡಸ್ನೇಹಿತರು ಆ ದುಃಖಮಯ ಸ್ಥಿತಿಯಲ್ಲಿ ಆಗಾಗ್ಗೆ ಬಂದು ಅವಳನ್ನು ಸಮಾಧಾನ ಪಡಿಸುತ್ತಿದ್ದರು. ವ ಯಸ್ಸಿನ ಹೆಚ್ಚುವಿಕೆಯಿಂದ ಚಂದ್ರಿಕೆಯು ಶಾಂತಳಾಗುತ್ತ ಮೊದಲಿನ ದು:ಖವನ್ನು ಮರೆತುಬಿಡ ಹತ್ತಿದಳು.

ಮನಸಬದಾರರು ಸ್ವರ್ಗವನ್ನೈದಿದನಂತರ ಸೋದರ ಮಾವನಾದ ರಘುನಾಥರಾಯನು ಚಂದ್ರಿಕೆಯನನ್ನು ತನ್ನಮನೆಗೆ ಕರೆದುಕೊಂಡುಬಂ ದನು. ಅಲ್ಲಿ, ಅವಳೂ ವತ್ಸಲೆಯೂ ಸರಿಯಾಗಿ ಶಾಲೆಗೆ ಹೋಗಹತ್ತಿದರು ಉಭಯತರ ಅಭ್ಯಾಸಕ್ರಮವೂ ಚೆನ್ನಾಗಿ ಸಾಗಹತ್ತಿತು. ಆದರೆ ಇವರೀ ರ್ವರ ಸ್ವಭಾವವಲ್ಲಿ ಮಾತ್ರ ಭೂಮ್ಯಾಕಾಶದಷ್ಟು ಅಂತರವಿತ್ತೆಂಗು ಹೇಳ ಲು ಅಡ್ಡಿ ಇಲ್ಲ. ಹಿಂದೆ ಹೇಳಿದಂತೆ ವತ್ಸಲೆಯು ಸೋಗುಮಾಡುವದು ಒನ ಪು ಒಯ್ಯಾರಮಾಡುವದು, ಪರ್ಶಿಪದ್ಧತಿಯಂತೆ, ಬಟ್ಟೆ ಧರಿಸುವದೂ, ಚಂದ್ರಿಕೆಗೆ ಎಷ್ಟುಕಷ್ಟದರೂ ಸೇರುತ್ತಿದ್ದಿಲ್ಲ. ಇದಲ್ಲದೆ ವತ್ಸಲೆಯು ಗರ್ವಿ ಷ್ಟಳೂ, ಸೆಕ್ಕಿನವಳೂ, ಆತ್ಮಸ್ತುತಿಪ್ರಿಯಳೂ ಇದ್ದಳು. ಇದಕ್ಕೆ ವಿರುದ್ಧ ವಾಗಿ ಚಂದ್ರಿಕೆಯು ಶಾಂತಸ್ವಭಾವದವಳೂ ವಿನಯಶೀಲಳೂ ಆಗಿದ್ದಳು. ಇದಲ್ಲದೆ ಎಷ್ಟೋಂದುಗುರ್ಣಗಳು ತಾಯಿಯ ಆಶೀಕ್ಷತನದ ಮೂಲಕ ವತ್ಸ ಲೆಯಲ್ಲಿ ಮನೆಮಾಡಿಕೊಂಡಿದ್ದವು.

ತನ್ನ ಒಬ್ಬಳೇ ಒಬ್ಬಮಗಳು ಬಹಳೇ ವಿವೇಕಿಯೂ ವಿನೀತಳೂ ಇ ರುವಳೆಂಬ ತಪ್ಪುತಿಳುವಳಿಕೆಯಿಂದ, ಮಗಳು ದೊಡ್ಡವರಿಗೂಸಣ್ಣವರಿಗೂ ಏನು ಅಂದರೂ ತಾಯಿಯು ಸಿಟ್ಟುಮಾಡುತ್ತಿದ್ದಿಲ್ಲ. ಮತ್ತು ಹೀಗೆಮಾಡ ಬಾರದೆಂದು ಬುದ್ಧಿವಾದವನ್ನುಸಹ ಹೇಳುತ್ತಿದ್ದಿಲ್ಲ. ಆದುದರಿಂದ ಅವಳಲ್ಲಿ ನಿಷ್ಠುರತನವು ಸಹಜವಾಗಿ ಮನೆಮಾಡಿಕೊಂಡಿತ್ತು. ನಮ್ರತೆಯು ಅವಳಿಗೆ ಕನಸಿನಲ್ಲಿಸಹಗೊತ್ತಿದ್ದಿಲ್ಲ. ಮಾತಿನಭರದಲ್ಲಿ ಇಲ್ಲದಬುರಡೀಕೊಟ್ಟು ತನ್ನ ಮಾತನ್ನು ಗೆಲಿಯಲಿಕ್ಕೆ ಹಿಂದು ಮುಂದೆ ನೋಡುತ್ತಿದ್ದಿಲ್ಲ. ಒಂದುವೇಳೆ ಸೋಲುವ ಪ್ರಸಂಗಬಂದರೆ ಕೂಡಲೆ ಸಿಟ್ಟಿಗೇಳುತ್ತಿದ್ದಳು, ಆದರೆ ಅವಳಿಗೆ ತನಗೆಬೇಕಾದಜನರನ್ನೂ ಶ್ರೀಮಂತರನ್ನೂ ಮಧುರ ವಾಣಿಯಿಂದ ಒಲಿಸಿ ಕೊಳ್ಳುವ ಪಾಶ್ಚಾತ್ಯರವಿದ್ಯೆಯು ಮಾತ್ರ ಚೆನ್ನಾಗಿ ಸಾಧಿಸಿತ್ತು

ಅತ್ತಿಯ ತಮ್ಮನಮಗ ಉಪೇಂದ್ರನು ಮಹಾವಿದ್ಯಾಲಯವು ಸ್ಥಾಪಿತವಾದಂದಿನಿಂದ ಇಲ್ಲಿಯೇ ಇರುತ್ತಿದ್ದನು. ಅವನ ಮನೆತನದಸ್ಥಿತಿ, ಮಧ್ಯಮ ತರದ್ದಿದ್ದುದತ್ತು, ಸ್ವಭಾವದಿಂದ ನಮ್ರನೂ, ಎಲ್ಲರಕೂಡ ಪ್ರೇಮದಿಂದ ನಡೆದುಕೊಳ್ಳುವವನಿದ್ದರೂ, ಸ್ವಾರ್ಥಿಯಾಗಿದ್ದನು, ಸ್ವಕಾರ್ಯ ಸಾಧನೆಯಲ್ಲಿ ಎರಡನೆಯ ವಿಷಯುವನ್ನೇ ಅವನು ಲಕ್ಷಿಸುತ್ತಿದ್ದಿಲ್ಲ.

ಇತ್ತ ಚಂದ್ರಿಕೆಯು ಮನೆಗೆ ಬಂದಂದಿನಿಂದ ಅತ್ತಿಯ ಮನಸ್ಸುಚಂದ್ರಿಕೆಯನ್ನು ಉಪೇಂದ್ರನಿಗೆ ಕೊಡಬೇಕೆಂಬದಾಗಿತ್ತು. ಏಕಂದರೆ ಎಲ್ಲ ಆಸ್ತಿಯು ತಮ್ಮನಮನೆಯನ್ನು ಸೇರುವದೇ ಅಪಳ ಆಹಂಚಿಕೆಯ ಗುಟ್ಟು. ಈ ಸುದ್ದಿಯನ್ನು ಒಂದೆರಡುಸಾರೆ ಪತಿಯಮುಂದೆ ಸಹ ತಿಳುಹಿಸಿದ್ದಳು; ಆದರ ಈ ವಿಷಯದಲ್ಲಿ ಇಷ್ಟು ತ್ವರೆಮಾಡುವ ಕಾರಣವಿಲ್ಲೆಂದು ಪತಿಯಕಡೆಯಿಂದ ಉತ್ತರ ದೊರೆತುದರಿಂದ ಆಮಾತು ಅಲ್ಲಿಗೇ ನಿಂತಿತ್ತು.

ಇರಇರುತ್ತ ಮಹವಿದ್ಯಾಲಯದ ಅಭ್ಯಾಸದಕೂಡ ಉಪೇಂದ್ರನಿಗೆ ಹೊಸಮಿತ್ರರೂ ಆಗಹತ್ತಿದರು. ವಿದ್ಯಾಲಯದೊಳಗಣ ಇಬ್ಬರುಮೂವರು ವಿದ್ಯಾರ್ಥಿಗಳು ತಮಗೆ ಕೆಲಸವಿಲ್ಲದ ವೇಳೆಯಲ್ಲಿ ಉಪೇಂದ್ರ ದ್ದಲ್ಲಿಗೆ ಹೋಗ ಬರಹತ್ತಿದರು. ಬರಬರುತ್ತ ಮನೆಯೊಳಗಿನ ಎಲ್ಲಜನರ ಪರಿಚಯವೂ ಆಗಹತ್ತಿತು; ಏಕಂದರೆ ಮಾವನ ವಿಚಾರವು ಹೇಗೆಯೇ ಇರಲಿ, ಅಪನ ಆಚರಣೆಯು ಸುಧಾರಕ ತರದಿದ್ದು, ಉಪೇಂದ್ರನಿಗೂ, ಅವನಮಿತ್ರರಿಗೂ ಚಂದ್ರಿಕಾ ವತ್ಸಲೆಯರಿಗೂ, ಪರಸ್ಪರರ ಸಂಭಾಷಣೆಯ ವಿಷಯದಲ್ಲಿ ರಘುನಾಥರಾಯರ ಕಡೆಯಿಂದ ಯಾವಮಾತನ ಅಡ್ಡಿಯಾಗುತ್ತಿದ್ದಿಲ್ಲ.

ಅಮಿತ್ರ ಸಮುದಾಯದಲ್ಲಿ ಕಮಲಾಕಾಂತರಾವ ದೇಸಾಯಿ ಎಂಬುವನೊಬ್ಬ ಸುಧಾರಕ ತರುಣನೋರ್ವನು ಇದ್ದನು. ಇವನು ಅಂಗಾಂಗದಿಂದ ಸುಂದರನಿದ್ದನು. ಸ್ವಭಾವದಿಂದ ಸೌಮ್ಯನಿದ್ದರೂ, ಬಹು ಉತಾವಳಿಯೂ, ಹಟವಾದಿಯೂ ಇದ್ದನು. ಅಧುನಿಕ ಸುಧಾರಕತನದಕಡೆಗೆ ಇವನ ಇವನ ಒಲವು ಹೆಚ್ಚು, ಯಾವುದೇ ಕೆಲಸಕ್ಕೆ ಕೈಹಾಕಬೇಕಾದರೆ, ಅದರ ಭವಿಶವ್ಯತೆಯ ಕಡೆಗೆ ಲಕ್ಷಗೊಡದೆ, ಹಿಂಹುಮುಂದ್ದಿನ ವಿಚಾರವಿಲ್ಲದೆ, ಅ

ದರಲ್ಲಿ ದುಮುಕುತ್ತಿದ್ದನು, ಆದರೆ ಹಿಡಿದಕೆಲಸ ಕೊನೆಗಾಣಿಸಬೇಕೆಂಬ ಹಟವಾದಿತನದಲ್ಲಿ ಒಂದುಸಾರೆ ಯಶವೂದೊರೆಯುತಿತ್ತು. ಅಪಯಶವೂ ಆಗುತ್ತಿತ್ತು.

ಕಮಲಾಕಾಂತನು ಇದೇ ಕುಂತಳಪೂರದ ಸಮೀಪದ ಹಳ್ಳಿಯ ದೊಡ್ಡದೇಸಾಯಿಯರ ಆಪ್ತರಮಗನು. ದೇಸಾಯರ ಹೊಟ್ಟೆಯಲ್ಲಿಯೂ ಗಂಡು ಮಕ್ಕಳಿದ್ದಿಲ್ಲ. ಅವರೇ ಇವನ ವಿದ್ಯಾಭ್ಯಾಸದ ಎಲ್ಲಖರ್ಚನ್ನು ವಹಿಸಿದ್ದರು ಇವನನ್ನೇ ಮುಂದೆ ತಮ್ಮ ಮನೆಗೆ ಒಡೆಯನನ್ನಾಗಿ ಮಾಡುವವರಿದ್ದರು. ಇಂಥ ದೊಡ್ಡ ಊರಲ್ಲಿ ನಾಲ್ಕುಜನ ಓರಿಗೆಯವರಕೂಡ ಶ್ರೀಮಂತಿಕೆಯಿಂದ ಇರುತ್ತಿದ್ದನಾದ್ದರಿಂದ ಎಲ್ಲರೂ ಇವನಗೆ 'ಶ್ರೀಮಂತ ದೇಸಾಯಿ' ಎಂದು ಕರೆಯುತ್ತಿದ್ದರು.

ಇದೇಕಾರಣದಿಂದ ಉಪೇಂದ್ರನು ವತ್ಸಲೆಗೆ ಇವನಗುರುತನ್ನು ಮಾಡಿ ಕೊಟ್ಟಿದ್ದನು. ಪರಸ್ಪರರ ಸ್ವಭಾವವು ಬಹುಶಃ ಸರಿಹೊಲುತ್ತಿದ್ದುದರಿಂದ ಕೂಡಲೆ ಇವರೀರ್ವರಲ್ಲಿ ಸ್ನೇಹಬೆಳೆಯಿತು. ಇತ್ತಿತ್ತಲಾಗಿ ಕಮಲಾಕಾಂತನಿಗೆ ವತ್ಸಲೆಯಮನೆಗೆ ಹರಟೆಹೊಡಿಯುವದಕ್ಕಾಗಿ ಹೋಗಿಬರುವ ಪರಿಪಾಠವು ಬಹಳಾಗಿತ್ತು ವತ್ಸಲೆಯಕೂಡ ಮನಬಚ್ಚಿ ಮನಬಂದಂತೆ ಮಾತಾಡುವಹಾಗೆ ಚಂದ್ರಿಕೆಯಕೂಡ, ಮಾತ್ರ ಹೆಚ್ಚಾಗಿ ಮಾತಾಡುತ್ತಿದ್ದಿಲ್ಲ. ಅವಳಸಂಗಡ ಮಾತಾಡುವಾಗ ಗುಪ್ತವಿದ್ದ ಅವನಲ್ಲಿಯಸದಸದ್ವಿವೇಕಬುದ್ಧಿಯುಮಾತ್ರ ಅವನಮನಸ್ಸನ್ನು ಅತ್ತಿತ್ತಹರಿಯಗೊಡುತ್ತಿದ್ದಿಲ್ಲ. ಪರನಾರಿಯರ ಬಾಹ್ಯಾಡಂಬರಕ್ಕೆ ಮನಸೋತು, ವಿಷಯೋಪಭೋಗದ ಗುಲಾಮನಾಗಲು ಬಯಸುವ ಕಮಲಾಕಾಂತನು, 'ಚಂದ್ರಿಕೆಯನ್ನು' ಮಾತ್ರ ನಿಷ್ಕಲುಷ ನೋಟದಿಂದ ನೊಡುತ್ತಿದ್ದನು. ಅವಳ ಸಂಗಡ ಸ್ನೇಹವಿದ್ದರೂ ಅದು ನಿಃಸ್ವಾರ್ಥಸ್ನೇಹವಿತ್ತು. ಅವಳ ಸತೇಜಮುಖವನ್ನು ನೋಡುತಲೆ ಅವನಲ್ಲಿಯ ಎಲ್ಲದುರ್ಗುಣಗಳೂ ಹೇಳಹೆಸರಿಲ್ಲದೆ ಬಯಲಾಗುತ್ತಿದ್ದವು.

ಸುಶೀಲಳೂ ಮರ್ಯಾದೆಯುಳ್ಳವಳೂ ಆದ ಚಂದ್ರಿಕೆಯು ಈ ಎಲ್ಲವಿಷಯವನ್ನು ಕಂಡುಹಿಡಿದಿದ್ದಳು. ಆದರೆ ವತ್ಸಲಾ ಕಮಲಾಕಾಂತರ ಸಂಗ

ಡ ಜಣಹರಟಿ ಕೊಚ್ಚುವ ಉತ್ಸಾಬರಿಗೆ ಮಾತ್ರ ಹೆಚ್ಚಾಗಿಹೋಗುತ್ತಿದ್ದಿಲ್ಲ. ಚಂದ್ರಿಕಾ ವತ್ಸಲೆಯರು ಸದ್ಯಕ್ಕೆ ಇಂಗ್ರೇಜಿನಾಲ್ಕನೇ ಇಯತ್ತೆಯಲ್ಲಿದ್ದರು. ವತ್ಸಲೆಗೆ ಹೀನ ಕಾಲ್ಪನಿಕ ಕಥೆ ಕಾದಂಬರಿಗಳನ್ನೋದುವ ದುಶ್ಚಟವು ಬಹಳ; ವಾಙ್ಮಯ ವಿಷಯದ ಪುಸ್ತಕಗಳನ್ನು ಎಳ್ಳಷ್ಟಾದರೂ ಓದುತ್ತಿದ್ದಿಲ್ಲ. ಮನೆಯಲ್ಲಿ ಬಹುತರ ಎಲ್ಲರೂ ಓದುವವರಿದ್ದುದರಿಂದ ವೃತ್ತ ಪತ್ರದೊಳಗಿನ ಹಲಕೆಲವು ಸಂಗತಿಗಳೂ ಇವಳಕಿವಿಗೆ ಬೀಳುತ್ತಿದ್ದವು. ಆದುದರಿಂದ ಯಾವದೋ ಒಂದು ವಿಷಯವನ್ನು ತೆಗೆದುಕೊಂಡು ಕಮಲಾಕಾಂತನಕೂಡ ತಾಸರ್ಧತಾಸು ದಿಟ್ಟತನದಿಂದ ವಾಗ್ವಿವಾದವನ್ನು ಮಾಡುತ್ತಿದ್ದಳು.

ಕಮಲಾಕಾಂತನು ದೇಸಾಯಿ ಯಾಗುವನೆಂದು ತಿಳಿದು ಬಂದಮೇಲಂತೂ, ವತ್ಸಲೆಗೆ ಸಹಜವಾಗಿಯೇ ಅವನವನ ಒಲಿಸಿಕೊಳ್ಳಬೇಕೆಂದೆನಿಸುತ್ತಿತ್ತು. ಒಮ್ಮೊಮ್ಮೆ ಭಾವೀದೇಸಗತಿಯ ಚಿತ್ರಪಟವು ಇವಳಕಣ್ಣಿಗೆ ಕಟ್ಟಿದಂತಾಗುತ್ತಿತ್ತು. ಇವಳ ತಾಯಿಗಾದರೂ ಭವಿಷ್ಯತ್ಕಾಲದ ವಿಚಾರವು ತಲೆಯಲ್ಲಿ ಬಂದಂತಾಗಿ, ಈ ಇಬ್ಬರಸಖ್ಯವನ್ನು ಕಡಿಮೆಮಾಡಲು ಮನಸ್ಸು ಹಿಂಜರಿಯುತ್ತಿತ್ತು. ಕಮಲಾಕಾಂತನಮುಖದಿಂದ ಕಕ್ಕ ಕಕ್ಕಿಯರ ಶ್ರೀಮಂತಿಕೆಯ ಉಪಭೋಗವನ್ನು ಕೇಳಿದಮೇಲಂತೂ ಇವಳಮನಸ್ಸು ಕಮಲಾಕಾಂತನಲ್ಲಿ ನಟ್ಟುಹೋಗಿತ್ತು. ಇವರಪರಿಣಾಮವು, ಬರಬರುತ್ತ ಕಮಲಾಕಾಂತನಮೇಲೂ ಆಗಹತ್ತಿತು. ಬಿಡುವಿನದಿವಸಗಳು ಬರುವದೊಂಢೀತಡ! ಕಮಲನ ಮೋಟರೆಯು ಇತ್ತಕಡೆಗೆಯೇ ತಿರುಗುತ್ತಿತ್ತು. ಆದಿನ ವತ್ಸಲೆಯಾದರೂ ತೆಳ್ಳಗಿನ ರೇಶಿಮೆಯ ಪತ್ತಲವನ್ನುಟ್ಟುಕೊಂಡು ಪೋಲಕತೊಟ್ಟು ಸುಧಾರಿಸಿದ ಪದ್ಧತಿಯಂತೆ ಕೇಶಗಳನ್ನು ಕಟ್ಟಿಕೊಂಡು ಉಪನೇತ್ರಗಳನ್ನುಧರಿಸಿ ಎಡಗೈಮುಂಗೈಮೇಲೆ ಬಂಗಾರದನೀರಿನ ಗಡಿಯಾರನ್ನು ಕಟ್ಟಿಕೊಂಡು, ಮೇಲುಪ್ಪರಿಗೆಯಮೇಲೆಹೋಗಿ ಬಾಗಿಲೆದುರಿಗೆ ಆರಾಮು ಖುರ್ಚಿಯಮೇಲೆ ಕಮಲಾಕಾಂತನ ಮಾರ್ಗ ನಿರೀಕ್ಷಿಸುತ್ತ ಕುಳಿತುಕೊಳ್ಳುತ್ತಿದ್ದಳು. ಸೂಕ್ಷ್ಮದೃಷ್ಟಿಯಿಂದ ನೋಡಿದರೆ ಇವಳಲಕ್ಷವು ಪುಸ್ತಕದ ಮೇಲಿರದೆ, ದಾರಿಯಲ್ಲಿ ಅಡ್ಡಾಡುವ ಜನರಮೇಲಿರುವದೆಂದು ನೋಡುವವರಿಗೆ ಸಹಜವಾಗಿ ಕಂಡುಬರುತ್ತಿತ್ತು. ಶುಕ್ರವಾರದ್ದ ಮಧ್ಯಾಹ್ನದ ಪಲ

ಹಾರ ಸಮಾರಂಭವು ಬಹುತರ ಇವರಮನೆಯಲ್ಲಿಯೇ ನಡೆಯುತ್ತಿತ್ತು. ಈವೇಳೆಯಲ್ಲಿ ವತ್ಸಲೆಯ ತಾಯಿತಂದೆಗಳುಸಹ ಇವನ ವಿಷಯಕ್ಕೆ ಇಲ್ಲದ ಆದರಭಾವವನ್ನು ತೋರಿಸುತ್ತಿದ್ದರು.

ಐದುಗಂಟೆಯ ಸುಮಾರಕ್ಕೆ, ಬಹುತರ ಈ ತರುಣ ಮಂಡಲಿಯು ಗಾಳಿಯಸವಾರಿಗೋಸ್ಕರ ಹೋಗುವದು ವಾಡಿಕೆಯಾಗಿತ್ತು. ಮನೆಯಿಂದ ಎಲ್ಲರೂಕೂಡಿ ಹೊರಡುತ್ತಿದ್ದರು. ಮನೆಬಿಟ್ಟು ತುಸುದೂರ ಹೋದಮೇಲೆ ಚಂದ್ರಿಕೆಯು ಸಮಿಪಸದಲ್ಲಿಯೇ ಇರುವ ತನ್ನ ತೋಟ ಪಟ್ಟಿಗಳಕಡೆಗೆ ಹೋಗತ್ತಿದ್ದಳು. ಈ ಪ್ರೇಮಿ ಯುಗಲವುಮಾತ್ರ ಎರಡನೆಯ ಕಡೆಗೆ ಹೊಗುತ್ತಿತ್ತು. ಉಪೇಂದ್ರನು ಒಂದೊಂದುವೇಳೆ ಇವರೀರ್ವರ ಕೂಡಇರತ್ತಿದ್ದನು; ಯಾರೂ ಇಲ್ಲದ ವೇಳೆಯಲ್ಲಿ ಇವರೀರ್ವರಿಗೆ ಸ್ವರ್ಗಪದವಿಯೇ ಶಿಕ್ಕಂತಾಗುತ್ತಿತ್ತು. ಏಕಂದರೆ ಈ ವೇಳೆಯಲ್ಲಿ ತಮ್ಮತಮ್ಮ ಹೃದ್ಗತವನ್ನು ಬಿಚ್ಚಿಡಲು ಉಭಯುತರಿಗೆ ಸಾಕಷ್ಟು ಅವಕಾಶವು ದೊರೆಯುತ್ತಿತ್ತು. ಒಂದುದಿನ ಪರಸ್ಪರರ ನಡುವೆ ಪ್ರೇಮದ ಮಾತುಕಥೆಗಳಾಗಿ ಈ ವಿಷಯವನ್ನು ತಾಯಿ ತಂದೆಗಳಮುಂದೆ ಇಡುವದೊಂದೇ ಉಳಿದಿತ್ತು.

✣ ✣ ✣ ✣ ✣ ✣ ✣ ✣

ಮೇಲ್ಕಂಡ ಮಾತು ಕಥೆಗಳಾಗಿ ಏಳೆಂಟು ದಿನಗಳಾಗಿದ್ದವು. ಈಗ ಕಮಲಾಕಾಂತನು ಮನೆಗೆ ಬಂದಕೂಡಲೆ ವತ್ಸಲೆಯ ಮೋರೆಯಮೇಲೆ ಒಂದು ವಿಲಕ್ಷಣ ಕಳೆಯು ಬರುತ್ತಿತ್ತು. ಮನೆಗೆಬಂದವೇಳೆಯಲ್ಲಿ ಕಮಲಾಕಾಂತನು ಎರಡನೆಯವರಕೂಡ ಮಾತಾಡುತ್ತಿದ್ದರೂ ಅವನಲಕ್ಷವು ವತ್ಸಲೆಯಕಡೆಗೇ ಇರುತ್ತಿತ್ತು. ಒಂದುದಿನ ಒದಗಿದ ವಿಲಕ್ಷಣಪ್ರಸಂಗ ವೇನಂದರೆ, ಚಂದ್ರಿಕೆಯು ವತ್ಸಲೆಯಂತ್ಥಹದೇ ಸೀರೆಯನ್ನುಟ್ಟುಕೊಂಡು, ಅಂಗಳದಲ್ಲಿದ್ದ ಗುಲಾಬೀಹೂವಿನ ಗಿಡದಹತ್ತರ ಹೂವನ್ನು ನೋಡುತ್ತ ನಿಂತಿದ್ದಳು. ಇಷ್ಟರಲ್ಲಿ ದೇಸಾಯಿಯರು ಬಡಿಗೆಯನ್ನು (Walking Stick) ತಿರುವುತ್ತ ಹೊಗೆಸೊಪ್ಪಿನ ಹೊಗೆಯನ್ನು ಮೂಗಿನೊಳಗಿಂದ ಬಿಡುತ್ತಬಂದರು ಇವರತಲೆಯಲ್ಲಿ ಯಾವಾಗಲೂ ವತ್ಸಲೆಯಸಂಬಂಧದ ವಿಚಾರಗಳೇ

ಬರುತ್ತಿದ್ದುದರಿಂದ ಚಂದ್ರಿಕೆಯ ಕಡೆಗೆ ಚೆನ್ನಾಗಿನೋಡದೆ ಅವಳನ್ನು ವತ್ಸಲೆಯಂತಲೇ ತಿಳಿದು, ಒಮ್ಮಿಂದೊಮ್ಮೆ "ಏಕೆ! ಈಹೊತ್ತು ಇಲ್ಲಿಯೇ ನಿಂತಿರುವಿ!! ನನಗೆಬರಲು ತಡವಾಗಿರಲಿಕ್ಕಿಲ್ಲವಷ್ಟೇ?" ಎಂದು ಕೇಳಿದನು.

ಈ ಶಬ್ದಗಳು ಕಿವಿಗೆ ಬೀಳುತಲೆ ಚಂದ್ರಿಕೆಯು ತಟ್ಟನೆ ತಿರುಗಿನೋಡಿದಳು. ಕಮಲಾಕಾಂತನ ಮನಸ್ಸಿನಲ್ಲಿ ತಪ್ಪಾದ ಈ ವಿಷಯವು ಅವಳಿಗೆ ತಿಳಿಯದೆ ಇರಲಿಲ್ಲ. ಇದಲ್ಲದೆ ಅವನಭಾಷಣದಲ್ಲಿ ಏಕವಚನದ ಶಬ್ದಯೋಜನೆನೋಡಿ ಅವಳಿಗೆ ಸಹಜವಾಗಿ ನಗೆಬಂದಿತು. "ವತ್ಸಲೆಯು ಒಳಗೆ ಇರಬಹುದು" ಎಂದಿಷ್ಟೇ ಉತ್ತರವನ್ನುಕೊಟ್ಟು ಅವಳು ಎರಡನೆಯ ಕಡೆಗೆ ಹೋದಳು. ಇತ್ತ ಕಮಲಾಕಾಂತನು ತನ್ನ ಕೃತ್ಯಕ್ಕೆ ತಾನೇನಾಚಿದವನಾಗಿ ಅಲ್ಲಿಒಂದು ಗಳಿಗೆಸಹ ನಿಲ್ಲದೆ ತಮ್ಮಮನೆಯದಾರೀಹಿಡಿದನು. ಚಂದ್ರಿಕೆಗೆ ಮಾತ್ರ ಪರಸ್ಪರರಲ್ಲಿದ್ದ ಪ್ರೇಮದವಿಷಯವು ಮನವರಿಕೆಯಾಗದೆಇರಲಿಲ್ಲ

ಇತ್ತ ವತ್ಸಲಾ ಕಮಲಾಕಾಂತರ ಪ್ರೇಮ ಕಥನವು ತಾಯಿತಂದೆಗಳ ಕಿವಿಯ ವರೆಗೆ ಮುಟ್ಟತೊಡಗಿದೆ. ಅತ್ತಒಂದು ಚಮತ್ಕಾರಿಕ ಸಂಗತಿಯು ಒದಿಗಿಬಂದಿತು. ಅದೇಊರಲ್ಲಿ ಒಂದು ಸಾರ್ವಜನಿಕ ಸಭೆಗೂಡಿತ್ತು ಆಸಭೆಗೆ ಕಾಲೇಜದ ವಿದ್ಯಾರ್ಥಿಗಳು ಹೋಗಬಾರದೆಂಬದಾಗಿ ಮುಖ್ಯ ಅಧ್ಯಾಪಕರ ಕಡೆಯಿಂದ ಸೂಚನಾಪತ್ರಿಕೆಯು ಕೊಡಲ್ಪಟ್ಟಿತ್ತು. ಇದನ್ನು ದುರ್ಲಕ್ಷಿಸಿ ವಿದ್ಯಾಲಯದೊಳಗಣ ಏಳೆಂಟು ವಿದ್ಯಾರ್ಥಿಗಳು ಸಭೆಗೆ ಹೋದರು, ಸಭಾವಿಸರ್ಜನಾನಂತರ ಬರುವಕಾಲಕ್ಕೆ ದಾರಿಯಲ್ಲಿ ತಮ್ಮವಿದ್ಯಾಲಯದ ಅಧ್ಯಾಪಕರ ಬೆಟ್ಟಿಯಾಯಿತು. ಮರುದಿವಸ, ವಿದ್ಯಾಲಯದೊಳಗೆ ಪ್ರವೇಶಿಸಬೇಕಾದರೆ ಅಧ್ಯಾಪಕರ ಕ್ಷಮೆ ಬೇಡಬೇಕೆಂದು ಎಲ್ಲ ಅಧ್ಯಾಪಕರೂಕೂಡಿ ಗೊತ್ತು ವಳಿಗಳನ್ನು ಮಾಡಿದರು.

ಈ ಗೊತ್ತುವಳಿಯು ವಿದ್ಯಾರ್ಥಿಗಳಿಗೆ ರುಚಿಸಲಿಲ್ಲ. ಈ ವಾದ ವಿವಾದವು ಕಟ್ಟಕಡೆಗೆ ದೀರ್ಘಕ್ಕೆಬಂದು, ಎಂಟುದಿವಸದ ಅವಧೀಕೊಟ್ಟು ಈ ಅವಧಿಯಲ್ಲಿ ವಿದ್ಯಾಲಯದ ಕ್ಷಮೆ ಬೇಡಬೇಕು ಇಲ್ಲವಾದರೆ ವಿದ್ಯಾಲಯವನ್ನು ಬಿಡಬೇಕೆಂಬದಾಗಿ ಕಟ್ಟಪ್ಪಣೆ ಕೊಡಿಸಲ್ಪಟ್ಟಿತು.

ಪೂರ್ಣ ನಿರಾಶನಾದನು. ಅವನು ಈವರ್ತಮಾನವನ್ನು ಉಪೇಂದ್ರ ಮುಂತಾದ ಮಿತ್ರರಿಗೂ ತಿಳಿಸಿದನು. ಇಷ್ಟಾದರೂ ಕ್ಷಮೆಬೇಡುವದು ಲವನ ಮನಸ್ಸಿಗೆ ಬರಲಿಲ್ಲ.

ತಂದೆತಾಯಿಗಳಿಲ್ಲಿದ ಅನಾಥರ ಗತಿಯೇಹೀಗೆ. ಈವೇಳೆಯಲ್ಲಿ ಅವನಿಗೆ ಯಾವಕಡೆಯಿಂದಲೂ ಸಹಾಯವು ಸಿಗದಂತಾಯಿತು. ಹೊಟ್ಟೆಹೊರೆಯುವದೊಂದು ದೊಡ್ಡಪ್ರಶ್ನಯೇ ಉಪಸ್ಥಿತವಾಯಿತು. ಮುಂದಿನಆಯುಷ್ಯಕ್ರಮದ ಸಲುವಾಗಿ ಅವನಿಗೆ ಎಲ್ಲಾದರೊಂದು ಚಾಕರಿಯನ್ನುಪತ್ಕರಿಸಬೇಕಾಯಿತು.

ಕಮಲಾಕಾಂತನು, ಉಪೇಂದ್ರನಿಗೆ, ರಘುನಾಥರಾಯರ ಕಚೇರಿಯಲ್ಲಿ ಯಾವುದಾದರೊಂದು ಸ್ಥಳವು ಬರಿದಾಗಿದ್ದರೆ ತನಗೆ ತಿಳುಹಿಸು ಎಂದು ಹೇಳಿ, ಆಮೇಲೆ, ತನ್ನ ಧನಿಕ ಸ್ನೇಹಿತರಬಳಿಗೆ ಹೋಗಿ, ಮುಂದಿನ ತನ್ನ ಚರಿತಾರ್ಥದ ದಶೆಯಿಂದ ವಿಚಾರಮಾಡ ತೊಡಗಿದನು. ಆದರೆ, ಎತ್ತನೋಡಿದತ್ತಿಲ್ಲ ಅವನದುರ್ದೈವದಿಂದ ಅಸಹಾಯದ ಉತ್ತರಗಳೇ ಬರಹತ್ತಿದವು, ನಿಕಟಪರಿಚಯದ ವಕೀಲ ಡಾಕ್ತರ ಮುಂತಾದ ಸಭ್ಯಗೃಹಸ್ಥರಕಡೆಗೆ ತನ್ನಸದ್ಯದ ಪರಿಸ್ಥಿತಿಯನ್ನುತಿಳಿಸಿ ಅವರಿಂದಸಹಾಯಕೇಳಲು ಹೋದನು

ಒರ್ವವಕೀಲ— ಕಾಂತರಾವ! ನಿಮ್ಮ ಈ ಅಸಹಾಯದ ಸ್ಥಿತಿನೋಡಿ ನನಗೆ ಬಹಳವಿಷಾದವಾಗುತ್ತದೆ, ಉಪಾಯವಿಲ್ಲ; ದುಡ್ಡುಕೊಟ್ಟು ನಿಮ್ಮನ್ನು ಚಾಕರಿಗೆ ಇಟ್ಟುಕೊಳ್ಳಲು ನಮ್ಮಲ್ಲಿ ಶಕ್ತಿಇಲ್ಲ. ಬೇಕಾದರೆ ಸಭೆಗೂಡಿಸಿರಿ, ವ್ಯಾಖ್ಯಾನಕೊಡಿರಿ, ವರ್ಗಣಿಕೂಡಿಸಿರಿ, ಈವಿಷಯದಲ್ಲಿ ನಿಮಗೆ ಎಲ್ಲಬಗೆಯಿಂದಲೂ ಸಹಾಯಮಾಡುತ್ತೇವೆ. ರಾಯರೇ! ತಾನು ತನ್ನನ್ನು ಕಂಡುಕೊಳ್ಳಬೇಕೆಂದು ಮಹತ್ಮರ ವಚನವಿದೆ. ಇದು ನಿಮಗೆ ಅರಿಕೆ ಇಲ್ಲವಂತಿಲ್ಲ?

ಕಮಲಾಕಾಂತ— ನಿಜ! ರಾಯರೇ!! (ತುಸು ಸಿಟ್ಟಿನಿಂದ) ಈ ಧರ್ಮಶ್ರವಣವು ನನಗ ಬೇಕಾಗಿಲ್ಲ; ಆದರೆ ಈಹೊತ್ತಿನ ಊಟದಗತಿಏನು?

ವಕೀಲ— (ತಿರಸ್ಕಾರಯುಕ್ತನಗೆಯಿಂದ) ಕಾಂತರಾವ, ಏನಮಾಡ

ಲಿ, ನಮ್ಮಲ್ಲಿ ಅಡಿಗೆಯುವನಿಲ್ಲ. ಇದ್ದರೆ ಒಂದುಹೊತ್ತಿನ ಊಟದಸಲುವಾಗಿ ಅನುಮಾನಸುತ್ತಿದ್ದೆನೇ?

ಡಾಕ್ಟರ— ಕಾಂತರಾವ! ಪದವೀಧರರ ಹೊರ್ತಾಗಿ ಇತರರಿಗೆ ಊಟಹಾಕುವ ಪರಿಪಾಠವು ನಮ್ಮಲ್ಲಿಲ್ಲ. ಇಲ್ಲವಾದರೆ ಯಾವಬಗೆಯಿಂದಲೂ ಅಡ್ಡಿಯಿದ್ದಿಲ್ಲ.

ಸುಖವಸ್ತು ಸದ್ಗೃಹಸ್ಥ— ಕಾಂತರಾವ! ನೀವು ಇಷ್ಟು ವಿದ್ಯ ಕಲಿತದ್ದು ವ್ಯರ್ಥವೇಸರಿ; ಏಕಂದರೆ ಎರಡನೆಯವರ ಹೇಳಿಕೆಯ ಮೇರೆಗೆ ಓದು ಬಿಡುವದುಂಟೇ?

“ ಗೂಳಿಬಿದ್ದರೆ ಆಳಿಗೊಂದುಕಲ್ಲು ” ಎಂಬಂತೆ ಕಂಡಕಂಡವರು ಸಿಕ್ಕ ಸಿಕ್ಕಹಾಗೆ ಚೇಷ್ಟೆಮಾಡಲಾರಂಭಿಸಿದರು. ಕಡೆಗೆ ಜನರಾಡುವ ಕಟುವಚನಕ್ಕೆ ಕಾಂತನು ಬೇಸತ್ತು ತನ್ನಮನೆಯದಾರೀ ಹಿಡಿದನು.

ಇತ್ತ ಉಪೇಂದ್ರನು ಮನೆಗೆಬಂದು ಮಿತ್ರನ ಹೇಳಿಕೆಯ ಮೇರೆಗೆ ತನ್ನಮಾವನನ್ನು ಆವುದಾದರೊಂದು ಉದ್ಯೋಗದ ದಶೆಯಿಂದ ವಿಚಾರಿಸಿದನು. ಚಂದ್ರಿಕೆಯ ಆಸ್ತಿಯ ಕಾಗದ ಪತ್ರಗಳ ವ್ಯವಸ್ಥೆಯ ಸಲುವಾಗಿ ೨೫ ರೂಪಾಯಿ ಸಂಬಳ ತೆಗೆದುಕೊಳ್ಳುವ ಓರ್ವ ಮನುಷ್ಯನು ಅವಶ್ಯಕತೆ ಇರುವದೆಂದೂ, ಇದರಹೊರ್ತು ಎರಡನೆಯಕಡೆಯಲ್ಲಿ ಯಾವಸ್ಥಳವೂ ದೊರೆಯಲಾರದೆಂದು ಮಾವನಕಡೆಯಿಂದ ಉತ್ತರದೊರೆಯಿತು.

ಮಾರನೆಯದಿನ ಕಮಲಾಕಾಂತನು, ವಾಡಿಕೆಯಂತೆ ರಘುನಾಥರಾಯರ ಮನೆಯಕಡೆಗೆ ಹೋದನು. ಮೊದಲು ಇವನ ಮಾರ್ಗಪ್ರತೀಕ್ಷೆಮಾಡುವ, ರಘುನಾಥರಾಯರ ಮನೆಯವರು, ಈಗ ಇವನು ಮನೆಗೆಬಂದರೂ ಮಾತಾಡಿಸದಾದರು. ಸ್ವಾರ್ಥಪರಾಯಣನಾದ ಉಪೇಂದ್ರನು ಕೆಲಸಬೊಗಸಿಯ ಮುಖ್ಯಮಾತಿನಹೊರ್ತು ಹೆಚ್ಚಿಗೆ ಮಾತಾಡಿಸಲಿಲ್ಲ. ದೂರದಲ್ಲಿಬರುತ್ತಿರುವದು ಕಂಡರೆ, ಎದುರಿಗೆ ಹೋಗಿ ಕರೆದುಕೊಂಡು ಬರುವ ವತ್ಸಲೆಯು ಇವನು ಮನೆಗೆಬಂದು ತಾಸುಹೊತ್ತಾದರೂ ತನ್ನಕೋಣೆಯನ್ನುಬಿಟ್ಟು ಹೊರಗೆ ಬರಲಿಲ್ಲ ಮನೆಯಲ್ಲಿ ಚಹ ಫಲಾಹಾರ ವಾಗುತಲಿ

ಮನೆಯುವರೆಗೆ ಮನುಷ್ಯನನ್ನು ಕಳುಹಿ ಕರೆಕಳುಹಿಸುವ ರಘುನಾಥರಾಯರ ಹೆಂಡತಿಯು, ಚಹ ಫಲಾಹಾರವನ್ನು ಮನೆಯುವರಷ್ಟೇ ಒಳಗೆಕುಳಿತು ಮುಗಿಸಿದರಲ್ಲವೇ, ಅನಾಯಾಸ ಹೊತ್ತಿಗೆಸರಿಯಾಗಿ ಮನೆಯುವರೆಗೆ ಬಂದಿದ್ದ ಕಮಲಾಕಾಂತನನ್ನು ಫಲಾಹಾರಕ್ಕೆಸಹ ಕರೆಯಲಿಲ್ಲ. " ಧನಕನಕ ಹೋದ ಮರುದಿನ ಹಾಳೂರ ಶುನಕ ನಂತಕ್ಕೂ" ಎಂಬ ಸರ್ವಜ್ಞಕವಿಯ ಉಕ್ತಿಯಂತೆ ಮುಂದೆ ಪದವೀದರನೂ, ದೇಸಾಯಿಯೂ ಆಗುವ, ಕಮಲಾಕಾಂತನು, ಶ್ರೀಮಂತಿಕೆಯಂತೂ ಒತ್ತಟ್ಟಿಗಿರಲಿ, ಹೊಟ್ಟೆಹೊರೆಯುವದಕ್ಕಾಗಿ ಸಣ್ಣಸಂಬಳದಮೇಲೆ ಇರಲುಸಹ ಸಿದ್ಧನಾಗಿರುವ ಇವನನ್ನು ಯಾರುತಾನೇ ಮಾತಾಡಿಸಬೇಕು. ವಾಚಕರೇ! ಆಗಿನಕಮಲಾಕಾಂತನೂ ಇವನೇ! ಈಗಿನಕಮಲಾಕಾಂತನೂ ಇವನೇ!! ಆಗ್ಗೆ ಮನೆಗೆಬಂದರೆ ಪರಮ ಭಾಗ್ಯವೆಂದು ತಿಳಿದುಕೊಳ್ಳುವಜನರು, ಈಗ್ಗೆ ಮನೆಗೆ ಬಂದರೂ ಒಳಗೆ ಕರೆಯಬಾರದೆಂದರೆ ಏನನ್ನಬೇಕು? ಇದಕ್ಕೆಲ್ಲ ಶ್ರೀಮಂತಿಕೆಯೇ ಕಾರಣವಲ್ಲವೇ? ಬಡತನ ಭಾಗ್ಯತನ ಯಾರಿಗೂ ಸ್ಥಿರವಲ್ಲ. ಶ್ರೀಮಂತನು ಕಾಲದಿಂದ ಬಡವನಾಗುತ್ತಾನೆ. ಬಡವನು ಭಾಗ್ಯಶಾಲಿಯಾಗುತ್ತಾನೆ. ಜನರು ಮಾತ್ರ ಇದನ್ನು ಎಳ್ಳಷ್ಟಾದರೂ ಲಕ್ಷದಲ್ಲಿ ತರುವದಿಲ್ಲ. ಈ ಪ್ರಪಂಚದ ರೀತಿಯೇ ಹೀಗಿರುತ್ತದೆ. ಕಮಲಾ ಕಾಂತನಂಥ ದುರಭಿಮಾನಿತರುಣನಿಂದ ಈ ಅಪಮಾನವನ್ನು ಸಹಿಸುವದಾಗಲಿಲ್ಲ. ಉಪವಾಸ ಸತ್ತರೂ ಚಿಂತೆಯಿಲ್ಲ ರಘುನಾಥರಾಯರ ಕೈಕೆಳಗೆ ಚಾಕರಿಯನ್ನು ಮಾಡಬಾರದೆಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ಮರುಳಿ ತನ್ನಕೋಣೆಗೆ ಹೋಗಬೇಕೆಂದುಎದ್ದನು. ಇಷ್ಟರಲ್ಲಿವತ್ಸಲೆಯು ಮುಂಜಾವಿನ ಗಾಳಿಯಸವಾರಿಗಾಗಿ ಹೊರ ಹೊರಟಳು. ವತ್ಸಲೆಯನ್ನು ನೋಡುತಲೆ ಇವನ ಸ್ವಾಭಿಮಾನವು ಪುನಃ ನಷ್ಟವಾಯಿತು. ಅವಳಕಡೆಗೆ ಮನ ಹರಿಯಹತ್ತಿತು.

ಕಮಲಾಕಾಂತನು ಲಗುಬಗೆಯಿಂದ ಎದ್ದು " ಏನುವತ್ಸಲಾಬಾಯಿಯವರೇ ಗಾಳಿಯ ಸವಾರಿಗೆ ಹೊರಟಿರುವಿರೇನು? ನಾನೂಬರುವೆನು" ಎಂದು ಅವಳ ಉತ್ತರದ ಮಾರ್ಗನೋಡದೆ ಅವಳನ್ನು ಹಿಂಬಾಲಿಸಿದನು. ಕಮಲಾಕಾಂತನು ಭಾವೀಪತ್ನಿಯ ಎದುರಿಗೆ ತನ್ನಹೃದ್ಗತವನ್ನು ಬಚ್ಚಿಡ

ಬೇಕೆಂದು ಮಾಡಿದ್ದನು. ಆದರೆ ಹದಿನೈದು ನಿಮಿಷಗಳವರೆಗೆ ನಡೆಯುತ್ತ ಹೋದರೂ, ಅವಳು ಒಂದುತುಟಿ ಎರಡುಮಾಡ ದಿರುವದನ್ನು ಕಂಡು ಬಹಳೇ ಆಶ್ಚರ್ಯ ಚಕಿತನಾದನು.

ಕಮಲಾಕಾಂತನು— ವತ್ಸಲಾ! ಮಾತಾಡುವದಿಲ್ಲವೇ?

ವತ್ಸಲ:— ( ಕಮಲಾಕಾಂತನ ಮುಖವನ್ನು ದಿಟ್ಟಿಸಿನೋಡುತ್ತ ) ಇದೇನು? ಏಕವಚನದ ಶಬ್ದ ಪ್ರಯೋಜನೆಯು! ಹೀಗೇಕೆ ಮಾತಾಡುವಿರಿ

ಕಮಲಾಕಾಂತ— ವತ್ಸಲಾ ಸಿಟ್ಟಾಗಬೇಡ! ನಾನುನನ್ನ ಹೃದ್ಗತವನ್ನು ಹೇಳಲು ಬಂದಿದ್ದೇನೆ ನನ್ನವಿಷಯದಲ್ಲಿ ಎಲ್ಲಸುದ್ದಿಯನ್ನು ಕೇಳಿರುವಿಯಷ್ಟೇ?

ವತ್ಸಲೆ— ಕೇಳಿದ್ದೇನೆ ಮುಂದೇನು?

ಕಾಂತ— ಮೊನ್ನೆಗಾಳಿಯ ಸವಾರಿಗೆ ಹೋದವೇಳೆಯಲ್ಲಿ ನಮ್ಮ ನಿಮ್ಮ ನಡುವೆ ನಡೆದಮಾತುಗಳ ನೆನಪಿರುವವಷ್ಟೇ?

ಆವಮಾತು? ನನಗೆ ನೆನಪಿಲ್ಲ.

ಕಾಂತ— ಇಷ್ಟರಲ್ಲಿ ಮರತೆಯೇನು? ಲಗ್ನದವಿಷಯವಾಗಿ

ವತ್ಸಲೆ— ಇನ್ನುಮುಂದೆ ಆಮಾತು ತೆಗೆಯಬೇಡಿರಿ! ನನ್ನನ್ನು ಹಿಂಬಾಲಿಸಿ ಏಕೆಬರುತ್ತೀರಿ!! ಬೇರೆಕಡೆಗೆ ಹೋಗಬಹುದು.

ಓದುವದಂತೂ ಮೊದಲೇ ಂತುಹೋಗಿತ್ತು, ಭಾವೀದೇಸಗತಿಯ ಚಿತ್ರಪಟವೂ ಹಾರಿಹೋಗಿತ್ತು, ಇದಷ್ಟು ಆಶೆಯು ಉಳಿದಿತ್ತು ಇದೂಸಹ ನಿರಾಶೆಯಾಯಿತು. ಈ ಎಲ್ಲವಿಷಯಗಳು ಒಂದರಹಿಂದೊಂದು ಒಂದೆರಡು ದಿವಸಗಳಲ್ಲಿ ಜರಿಗಿ, ಇವನನ್ನು ಬಹಳೇ ಅಸಮಾಧಾನನನ್ನಾಗ ಮಾಡಿದವು. ಅವನಿಗೆ ಮುಂದೆ ಏನೂ ತೋಚದಂತಾಯಿತು, ಆದುದರಿಂದ ಏನೋ ವಿಚಾರಮಾಡುತ್ತ ಕಲ್ಲಿನಂತೆ ನಿಂತುಬಿಟ್ಟನು ಇವನ ಮಾರ್ಗಪ್ರತೀಕ್ಷಿಸಿದೆ ವತ್ಸಲೆಯು ಹಾಗೆಯೇ ಮುಂಕ್ಕೆ ಸಾಗಿದಳು.

ಇತ್ತ, ಚಂದ್ರಿಕೆಯು ನಿತ್ಯದಂತೆ ನಸುಕು ಹರಿಯುವದ ರೊಳಗಾಗಿ ಎದ್ದು, ತನ್ನ ಎಲ್ಲಮನೆಗೆಲಸಗಳನ್ನು ತೀರಿಸಿಕೊಂಡು ದೇವರ ಪೂಜೆಗಾಗಿ

ಹೂವು ತರುವದಕ್ಕೋಸುಗ ತನ್ನ ತೋಟದಕಡೆಗೆ ವತ್ಸಲಾ ಕಮಲಾಕಾಂತರು ಹೋದದಾರಿಯಿಂದಲೇ ಹೋಗಹತ್ತಿದ್ದಳು. ದಾರಿಯಲ್ಲಿರಾಜಶ್ರೀಯವರು ಒಬ್ಬರೆ ನಿಂತಿದ್ದುನೋಡಿ, ಸ್ತ್ರೀಜಾತಿಯ ಮರ್ಯಾದೆ ಗನುಸಾರವಾಗಿ, ವಿನಯದಿಂದ "ಏನು ಕಮಲಾಕಾಂತ ದೇಸಾಯಿಯರೇ ನಡುದಾರಿಯಲ್ಲಿ ಸುಮ್ಮನೆ ಓರ್ವರೆ ನಿಂತಿರುವಿರಲ್ಲ! ಮನೆಯಿಂದ ವತ್ಸಲಾ ತಾವೂ ಕೂಡಿಯೇ ಹೊರಟಿದ್ದಿರಲ್ಲವೆ?" ಎಂದಳು.

ಕಮಲಾಕಾಂತನು ಅವಳಮಧುರವಾದ ವಾಣಿಯನ್ನುಕೇಳಿ, ತನ್ನ ಭಾವೀಬಾಳುವಿಕೆಯವಿಚಾರದಿಂದ ಎಚ್ಚತ್ತು, "ಹೌದು, ಮನೆಯಿಂದ ಇಬ್ಬರೂ ಕೂಡಿಯೇ ಹೊರಹೊರಟಿದ್ದೆವು. ನಡುದಾರಿಯಲ್ಲಿ ಆವುದೋವಿಚಾರವು ತಲೆಯಲ್ಲಿ ಬಂದಂತಾಗಲು, ವಿಚಾರಮಾಡುತ್ತ ಇಲ್ಲಿಯೇನಿಂತೆನು"

ಚಂದ್ರಿಕೆ— ಅಂಥಯಾವ ಗಹನವಿಚಾರವು ! ನನ್ನಮುಂದೆ ಹೇಳಲು ಬರುವಂತಿದ್ದರೆ—

ಕಾಂತ— ತಮ್ಮಂಥ ಹಿತಚಿಂತಕರಮುಂದೆ ಹೇಳದೆ ಇನ್ನಾರಮುಂದೆ ಹೇಳಲಿ, ನಾನು ವಿದ್ಯಾಲಯಬಿಟ್ಟ ವರ್ತಮಾನವು ತಮಗೆ ವಿದಿತವಿರುವದಷ್ಟೇ? ಮುಂದಿನ ಆಯುಷ್ಯಕ್ರಮದ ವಿಚಾರವು ತಲೆಯಲ್ಲಿಬರಲು ವಿಚಾರಮಾಡುತ್ತ ಇಲ್ಲಿಯೇನಿಂತೆನು.

ಕಾಂತನ ಎಲ್ಲವಿಷಯವನ್ನು ಅರಿತವಳಾದ ಚಂದ್ರಿಕೆಗೆ ಅವನ ಸದ್ಯದ ಸ್ಥಿತಿಯನ್ನುನೋಡಿ ಬಹಳವಿಷಾದವಾಯತು. ಅವನು ತನ್ನಕೃತಕಾರ್ಯಕ್ಕಾಗಿ ಪಶ್ಚಾತ್ತಾಪಬಟ್ಟು ಒಳ್ಳೇದಾರಿಯಮೇಲೆ ಬಂದಿರುವನೆಂಬುದನ್ನು ಚಂದ್ರಿಕೆಯು ಚೆನ್ನಾಗಿ ಮನಗಂಡಳು. ತನ್ನ ಹೊರಗಣ ಬೆಡಗಿನ ಮೋಹಜಾಲದಲ್ಲಿ ಅವನನ್ನು ಕೆಡುವಿ ಜ್ಞಾನಾಂಧನನ್ನಾಗಿ ಮಾಡಿದ ವತ್ಸಲೆಯನ್ನು ಮನದಲ್ಲಿಯೇ ಹಳಿದಳು.

ಚಂದ್ರಿಕೆ— (ಮೋರೆತಗ್ಗಿಸಿ) ತಮ್ಮ ಈಸ್ಥಿತಿಯನ್ನು ನೋಡಿ ನನಗೆ ಬಹಳೇ ಖೇದವಾಗುತ್ತದೆ. ಇಂದು ಹೊತ್ತುಮುಳುಗುವ ಮುಂದೆತಮಗೆ ಕೆಲಸ ವಿರುವದಿಲ್ಲವಷ್ಟೇ?

ಕಾಂತ— ನಿರುದ್ಯೋಗದ ಹೊರ್ತು ಇನ್ನಾವ ಕೆಲಸವು.

ಚಂದ್ರಿಕೆ.— ಹೀಗೇಕೆ ತುಚ್ಛತಿಳಿದುಕೊಳ್ಳುವಿರಿ. ಇಷ್ಟೇಕೆ ನಿರಾಶೆಯಾಗುವಿರಿ, ಒಬ್ಬರಸಹಾಯ ಸಿಗದಿದ್ದರೆ ಇನ್ನೊಬ್ಬರಸಹಾಯ ಸಿಗಬಹುದು. ಇಷ್ಟುಮಾತ್ರದಿಂದಲೆ ನಿರಾಶೆಯಾಗುವ ಕಾರಣವಿಲ್ಲ. ಹುಟ್ಟಿಸಿದ ದೇವರು ಹುಲ್ಲುಮೇಯಿಸುವದಿಲ್ಲ. ಕೊಡುವದೇವರು ಯಾವಬಗೆಯಿಂದಾದರೂ ಕೊಟ್ಟೇ ಕೊಡುವನು. ಸದ್ಯಕ್ಕೆ ನಿಮಗೆಯಾರೂ ಮಾರ್ಗದರ್ಶಕರಿಲ್ಲ ನಿಮ್ಮಿಷ್ಟಕ್ಕೆ ನೀವೇ ಮಾರ್ಗಶೋಧಕ ರಾಗಬೇಕು. ಒಳ್ಳೇದು! ನಾನು ಮಾವನವರು ಪೂಜೆಮಾಡುವದ ರೊಳಗಾಗಿಹೂಗಳನ್ನೋಯಬೇಕು. ಸಂಜೆಯಮುಂದೆ ಗಾಳಿಯಿಸವಾರಿಗಾಗಿ ನಮ್ಮ ಹೊಲಗಳ ಕಡೆಗೆಯೇಬರಿ, ಅಲ್ಲಿಗೆ ನಾನೂಬರುವೆನು. ಮುಂದಿನ ವಿಷಯವನ್ನು ಕುರಿತು ವಿಚಾರಮಾಡೋಣ. ಬರುತ್ತೇನೆ ಎಂದು ಹೇಳಿ ಸಂಗಡ ಕರೆದುಕೊಂಡು ಬಂದಿದ್ದ ಐದಾರುವರುಷದ ಶೂದ್ರಬಾಲಿಕೆಯೊಂದಿಗೆ ತೋಟಕ್ಕೆ ಹೋದಳು.

✣ ✣ ✣ ✣ ✣ ✣ ✣ ✣

ಇತ್ತ ಕಮಲಾಕಾಂತನು ವತ್ಸಲೆಯ ನಿಷ್ಠುರದ ನಡತೆಗಾಗಿ ಅವಳ ವಿಷಯದ ಹಂಬಲವನ್ನು ಅಲ್ಲಿಯೇಬಿಟ್ಟು ಚಂದ್ರಿಕೆಯ ಸೌಜನ್ಯವನ್ನೂ ವಿನಯಶೀಲತೆಯನ್ನು ಕೊಂಡಾಡುತ್ತ ತನ್ನ ಮನೆಯದಾರಿಹಿಡಿದನು. ಐದುಗಂಟೆಗೆ ಸರಿಯಾಗಿ ಚಂದ್ರಿಕೆಯು ತನ್ನ ಎಲ್ಲ ಮನೆಗೆಲಸಗಳನ್ನು ತೀರಿಸಿಕೊಂಡು ಅತ್ತೆಯ ಅಪ್ಪಣೆಯನ್ನು ಕೇಳಿ, ಮನೆಯಹತ್ತರ ಇದ್ದ ಓರ್ವ ಸಣ್ಣ ಶೂದ್ರ ಬಾಲಿಕೆಯನ್ನು ಸಂಗಡ ಕರೆದುಕೊಂಡು ತನ್ನ ಹೊಲಗಳ ಕಡೆಗೆ ಹೊರಟಳು. ಹೊಲಗಳ ಕಡೆಗೆ ಚಿಕ್ಕಂದಿನಿಂದ ಚಂದ್ರಿಕೆಯ ಒಲವು ಬಹಳ. ಅವಳು ಮೇಲಿಂದಮೇಲೆ ಹೊಲಗಳಕಡೆಗೆ ಹೋಗುತ್ತಿದ್ದಳು. ಅಲ್ಲಿ ರೈತರುಮಾಡುವ ಕೆಲಸಗಳನ್ನು ನೋಡಿ ಆನಂದ ಪಡುತ್ತಿದ್ದಳು. ಇಷ್ಟು ಹೊತ್ತಿಗೆ ಅವಳು ಶಾಲೆಯನ್ನು ಬಿಟ್ಟು ಏಳೆಂಟುದಿನವಾಗಿತ್ತು. ಅವಳಿಗೆ ಓದುಬರೆಯಲು ಚೆನ್ನಾಗಿಬರುತ್ತಿದ್ದುದರಿಂದ, ಬೇಸಾಯದ ವಿಷಯವನ್ನು ಮನೆಯಲ್ಲಿ ಓದಿಕೊಂಡು, ಹೆಚ್ಚು ಸುಧಾರಣೆಗಾಗಿ ರೈತರಿಗೆ ತಿಳಿಹೇಳುತ್ತಿದ್ದಳು. ಒಟ್ಟಿಗೆ ರೈತರು ತಮಗೆ ಚಂದ್ರಿಕೆಯೇ ಮಾರ್ಗದರ್ಶಕ ದೇವ.

ತೆಂದು ತಿಳಿದಿದ್ದರು. ಚಂದ್ರಿಕೆಯು ಹೊಲಕ್ಕೆ ಮುಟ್ಟಿ ತುಸು ಹೊತ್ತಾಗಿರಬಹುದು. ಇಷ್ಟರಲ್ಲಿ ಕಮಲಾಕಾಂತನೂ ಚಂದ್ರಿಕೆ ಇದ್ದೆಡೆಗೆಬಂದನು.

ಚಂದ್ರಿಕೆಯು ರೂಪದಿಂದ ಅತ್ಯಂತ ಚಲುವೆ ಇದ್ದು ರೂಪಕ್ಕನುಗುಣವಾಗಿ ಅವಳಲ್ಲಿ ಸೌಜನ್ಯವೂ ಇತ್ತು. ಕಮಲಾಕಾಂತನು ಬರುತಲೆ ವಿನಯದಿಂದ ಎದ್ದು ನಿಂತು, ತಾನುಕುಳಿತ ದೊಡ್ಡ ಹಾಸುಬಂಡಿಯಮೇಲೆ ಅವನಿಗೂ ಕುಳಿತು ಕೊಳ್ಳಹೇಳಿ ಕುಲಿನಸ್ತ್ರೀಯರಿಗುಚಿತವಾದ ಮರ್ಯಾದೆಇಂದ ತಾನೂ ತುಸು ದೂರದಮೇಲೆ ಕುಳಿತುಕೊಂಡಳು. ತುಸು ಹೊತ್ತಿನ ವರೆಗೆ ಪರಸ್ಪರರನಡುವೆ ಆಮಾತು ಈಮಾತುಗಳು ಜರುಗಿದಮೇಲೆ, ಕಮಲಾಕಾಂತನು, ಚಂದ್ರಿಕೆಯನ್ನುದ್ದೇಶಿಸಿ, " ನನಗಂತೂ ನನ್ನ ಇರುವಿಕೆಯೂ ತೀರ ಬೇಡಾಗಿದೆ " ಎಂದನು.

ಚಂದ್ರಿಕಾ—(ತುಸುದಿಟ್ಟತನದಿಂದ) ರಾಯರೇ! ಇಷ್ಟು ದಿವಸಗಳವರೆಗೆ, ಹೆರವರ ದುಡ್ಡಿನಮೇಲೆ ಈ ದೊಡ್ಡ ಪಟ್ಟಣದಲ್ಲಿ, ಚಕ್ಕಂದದಿಂದ, ಮನಬಂದಂತೆ ಚೆಲ್ಲಾಟವಾಡಿದ ನಿಮಗೆ, ಈ ಬಡತನದ ಆಯುಷ್ಯಕ್ರಮವು ಬೇಡಾಗಿದ್ದರೂ, ಆಗಿರಬಹುದು; ಆದರೆ ಗಂಡಸಂತಾದವರು ಇಂಥ ಕ್ಷುಲ್ಲಕ ವಿಷಯಕ್ಕೆ ಧೈರ್ಯಗುಂದಬೇಕೇ? ದೇವರುದುಡಿದುತಿನ್ನುವದಕ್ಕಾಗಿ ಗಟ್ಟಿಯಾದ ಕೈಕಾಲುಗಳನ್ನು ಕೊಟ್ಟಿದ್ದಾನೆ; ಇದಲ್ಲದೆ ಎಲ್ಲಕ್ಕೂ ಹೆಚ್ಚಿಗೆ ವಿದ್ಯೆಯ ಬಲವೂ ಬುದ್ಧಿಯ ಬಲವೂ ಇದ್ದೇ ಇರುವವು. ಸ್ವಾವಲಂಬಿಯಾಗಿ ಮನಸ್ಸುಗೊಟ್ಟು ಯಾವಕಾರ್ಯದಲ್ಲಿ ಕೈಹಾಕಿದರೂ ತಮ್ಮಂಥವರಿಗೆ ಯಾವದು ತಾನೇ ಅಸಾಧ್ಯ? ಇನ್ನು, ಹೆಚ್ಚಿನವಿದ್ಯದ ಸಲುವಾಗಿ ಆಶೆಮಾಡಬಹುದು, ಆದರೆ ವಿದ್ಯಾಲಯಕ್ಕೆ ಹೋದಮಾತ್ರದಿಂದಲೆ, ಮನುಷ್ಯನು ವಿದ್ವಾನ ನಾಗುವನೆಂದು ಹೇಳಲು ಬರುವಂತಿಲ್ಲ, ಬುದ್ಧಿ ಇದ್ದರೆ ಮನೆಯಲ್ಲಿಸಹ ವಿದ್ಯಗಳಿಸಬಹುದು. ಶ್ರೀಯುತ ಪಾಲ, ಟಾಗೋರ ಮೊದಲಾದ, ಮಹಾನ್ ಮಹಾನ್ ಪ್ರಭೃತಿಗಳು ಮಹಾವಿದ್ಯಾಲಯದ ಮೋರೆಯನ್ನು ಸಹ ನೋಡದೆ, ಇಡೀಪ್ರಪಂಚದಲ್ಲಿ ಹೆಸರಾಗಲಿಲ್ಲವೇ? ಇನ್ನು ಶ್ರೀಮಂತಿಕೆಯ ವಿಷಯಕ್ಕೆ, ಓಣಿಯಲ್ಲಿನಿಂತು ವೃತ್ತಪತ್ರಗಳನ್ನು ಮಾರಿದಂಥವರು ಸಹ ಪ್ರಪಂಚದಲ್ಲಿ ಮೊದಲನೆಯ ತರಗತಿಯ ಧನಿಕರಾಗಿಲ್ಲವೇ? ಇಷ್ಟೆಲ್ಲ

ನಮ್ಮ ಕಣ್ಣೆದುರಿಗೆ ನಡೆಯುತ್ತಿದ್ದು ಕಿವಿಯಿಂದ ಕೇಳುತ್ತಿದ್ದು, ನಾವು ಅಂಥರಂತೆ ಕಿವುಡರಂತೆ, ಬಲಹೀನರಂತೆ ವರ್ತಿಸುವದು ಸರಿಯಾದುದ್ದಲ್ಲ.

ಕಾಂತರಾವ! ಇನ್ನೊಂದು ವಿಚಾರ ಬಂದಿರುತ್ತದೆ. ಬೇಕಾದರೆ ಹೇಳುತ್ತೇನೆ ಅವರಂತೆ ತಾವು ವರ್ತಿಸಿದರೆ ತಸು ದಿವಸಗಳಲ್ಲಿ, ತಮ್ಮ ಅಪೇಕ್ಷೆಯ ಮೆರಿಗೆ ತಾವು ಮುಂದೆ ಚಲೋದಿವಸಗಳನ್ನು ಕಾಣಬಹುದು. ಇದರಲ್ಲಿ ಸಂದೇಹವಿಲ್ಲ. ಮೊದ ಮೊದಲು ಶ್ರೀಮಂತಿಕೆಯಿಂದಿದ್ದ ನಿಮಗೆ ತ್ರಾಸವಾಗಬಹುದು. ಅದು ತುಸು ದಿವಸಗಳವರೆಗೆ, ಮುಂದೆ ಮೊದಲಗಿಂತಲೂ ಹೆಚ್ಚು ಸುಖವಾಗಬಹುದು.

ಈ ಕುಂತಳಪುರಕ್ಕೆ ತುಸುದೂರದಮೇಲೆ ಸುವರ್ಣಗಿರಿ ಎಂಬದೊಂದು ಐವತ್ತು ಅರವತ್ತು ಮನೆಗಳ ಸಣ್ಣಹಳ್ಳಿಇರುವದು, ಆ ಹಳ್ಳಿಯಲ್ಲಿ ಬಹುತರ ನಮ್ಮ ಹೊಲಗಳೇ ಬಹಳ. ಇದಲ್ಲದೆ ಅಲ್ಲಿ ಇರಲು ಒಂದುಸಣ್ಣ ಮನೆಯುಸಹ ಇರವದು. ಆಹಳ್ಳಿಯ ಬಹುತರ ಎಲ್ಲಜನರು ನಮ್ಮ ಭೃತರೇ ಇರುವರು. ರಾಯರೇ! ಅಲ್ಲಿಒನಪು ಒಯ್ಯಾರವಮಾಡಿ ತರುಣಯುವಕರ ಮನ ಒಲಿಸುವ ಸುಶೀಕ್ಷಿತ ತರುಣಿಯರು, ಅಥವ ಆಂಗ್ಲ ಪದ್ಧತಿಯ ಉಡಿಗೆ ತೊಡಿಗೆ, ಮತ್ತು ಇರುವಿಕೆಯ ಮೋಹಕ್ಕೆ ಒಳಗಾಗಿ, ಮನಬಂದಂತೆ ಹಣವೆಚ್ಚಮಾಡಿ, ನಾಟಕದೊಳಗಣ ನಟರಂತೆ ನಟಿಸಿ ಭಾವೀ ಆಯುಷ್ಯಕ್ರಮವನ್ನು ಹಾಳುಮಾಡಿಕೊಳ್ಳುವ ಸುಶೀಕ್ಷತ ತರುಣರೂ ಇಲ್ಲ ಜನರ ದ ಡ್ಡನ್ನಪಹರಿಸಿ, ಅವರನ್ನು ಭಿಕ್ಷಾಪತಿಯಾಗಿ ಮಾಡುವ ನಾಟಕ ಶಿನೇಮಾಗಳೂ ಚಹ ಕಾಫಿ ಹೋಟಲುಗಳು ಮೊದಲಾದವುಗಳು ಅಲ್ಲಿರುವದಿಲ್ಲ. ಒಟ್ಟನಮೇಲೆ ಹೊಟ್ಟಿ ಬಟ್ಟೆಗೆ ತಾಪತ್ರಯವಿಲ್ಲದೆ, ಮರ್ಯಾದೆಇಂದಲೂ ಸೌಜನ್ಯದಿಂದಲೂ, ಪ್ರಮಾಣಿಕತನದಿಂದಲೂ, ಇರುವ ಬಡರೈತತರ ವಸತಿಸ್ಥಾನವದು. ಅಲ್ಲಿ ಮೊದಲು ಒಂದು ಅರ್ಧಕ್ಷಣ ನಿಲ್ಲಲುಸಹ ಬೇಸರ ವೆನಿಸಬಹುದು. ಆದರೆ ಅಲ್ಲಿಯಜನರ ನಡತೆ ನಡಾವಳಿಗಳನ್ನು ಅವರ ಬಾಳುವಿಕೆಯ ಕ್ರಮವನ್ನು ನೋಡಿ, ಮುಂದೆ ಪಟ್ಟಣಕ್ಕೆ ಬರಲುಸಹ ನಿಮ್ಮ ಮನಸು ಒಪ್ಪಲಿಕ್ಕಿಲ್ಲ. ಪರದೇಶದಿಂದ ಬಂದು ಒಂದಕ್ಕೆ ಎರಡಾಗಿ ಜನರದುಡ್ಡನಪಹರಿಸುವ, ಹಾರ್ಮೋನಿಯಮ್, ಫೋನೋಗ್ರಾಫ

ಮುಂತಾದವುಗಳ ಶಬ್ದವು ನಿಮ್ಮ ಕಿವಿಗೆ ಎಂದಿಗೂ ಬೀಳಲಿಕ್ಕಿಲ್ಲ ಜನರ ಮರ್ಯಾದೆಯನ್ನು ಕಾಯ್ದು ಧನವಂತರನ್ನಾಗಿ ಮಾಡುವ ರಾಟೆಯ ನಿನಾದವು, ಮಧುಕರದ ಝೇಂಕಾರದಂತೆ ಮುಂಜಾವಿನಿಂದ ಸಂಜೆಯವರೆಗೆ ಎಲ್ಲಕಡೆಯಲ್ಲಿಯೂ ಕೇಳಬರಬಹುದು.

ಕಮಲಾಕಾಂತರಾವ! ಎಲ್ಲಬಗೆಯಿಂದಲೂ ಅಲ್ಲಿನಿಮಗೆ ಸಹಾಯವು ಸಿಗುವದು. ತೆಗೆದು ಕೊಳ್ಳಿರಿ, ಈ ಐವತ್ತು ರೂಪಾಯಿಗಳನ್ನು. ಈ ಐವತ್ತು ರೂಪಾಯಿಗಳಮೇಲೆ ವರ್ಷೆರಡು ವರ್ಷಗಳಲ್ಲಿ ನೀವು ಐದುಸಾವಿರರೂಪಾಯಿ ಗೊಡೆಯರಾಗಬಹುದು. ಲೋಕಮಾನ್ಯರ ನಿಧನದನಂತರ ರಾಷ್ಟ್ರೀಯ ಚಳವಳಿಯ ಮಾರ್ಗದರ್ಶಕರಾದ ಬಾಪೂಜೀಯವರ ಪುಣ್ಯದಿಂದ ಈ ರಾಟೆಯಮೇಲಿನ ನೂಲಿನ ತತ್ವವು ನಮಗೆ ತಿಳಿದಿರುವದು ಇತ್ತೀಚಿಗೆ ಇದಕ್ಕೆ ಮಹತ್ವ ವಿರುವದು. ರಾಷ್ಟ್ರೀಯತ್ವದ ಪ್ರಗತಿಗೆ ಖಾದಿಯೇ ಮುಖ್ಯ ಹಾದಿಎಂದು ಸಾರ ಹತ್ತಿದ್ದಾರೆ. ಆದುದರಿಂದ ನಾಳಿನ ದಿನವೇ ನೀವು ಅಲ್ಲಿಗೆಹೋಗಿ ಮುಂದಿನ ಕೆಲಸವನ್ನು ಪ್ರಾರಂಭಿಸಿರಿ. ಅಲ್ಲಿ, ಕೈನೂಲು ನಿಮಗೆ ಬಹಳ ಕಡಿಮೆಯ ದರದಿಂದ ಸಿಗುವದು. ಮೊದಲು ಮೂವತ್ತು ರೂಪಾಯಿಯ ನೂಲನ್ನು ಕೊಂಡು ಅಂಗಿಯ ಅರಿವೆ ಧೋತರ ಶಾಲುಗಳನ್ನು ನೇಯುವದಕ್ಕೋಸ್ಕರ, ಈ ಊರನೇಕಾರರಿಗೆ ಕೊಡಿರಿ ಬಟ್ಟೆಗಳು ಬರುತ್ತಲೆ, ಅವನ್ನು ನೀವೇ ಸ್ವತಃತಗೆದುಕೊಂಡುಹೋಗಿ ಪೇಟೆಯಲ್ಲಿ ವಿಕ್ರಯಮಾಡಿರಿ. ಈ ವೇಳೆಯಲ್ಲಿ ಒಣಮರ್ಯಾದೆಯನ್ನು ಬದಿಗಿಡಬೇಕಾಗುವದು. ಇದು ನಿಮ್ಮ ಕರ್ತವ್ಯಕರ್ಮವೆಂದು ತಿಳಿಯಿರಿ. ಜನರ ಮಾತಿನಕಡೆಗೆ ಲಕ್ಷ್ಯಗೊಡಬೇಡಿರಿ; ಯಾಕಂದರೆ ಯಾವಬಗೆಯಿಂದ ನಡೆದರೂ ಜನರು ಹೆಸರಿಡುತ್ತಾರೆ. " ಜನಮೆಚ್ಚಿ ನಡಕೊಂಡರೇನುಂಟುಲೋಕದಿ| ಮನಮೆಚ್ಚಿ ನಡಕೊಂಬುವದೇಚಂದವು|| " ಎಂಬವಾಕ್ಯವನ್ನು ನೆನಪಿನಲ್ಲಿಡಿರಿ.

ಕಾಂತರಾವ! ನಿಮಗೆ ಆಗ್ರಾಮದಲ್ಲಿ ಯಾವಬಗೆಯಿಂದಲೂ ಕಷ್ಟವಾಗುವದಿಲ್ಲ. ಉಳಿದ ಇಪ್ಪತ್ತು ರೂಪಾಯಿಗಳೊಳಗೆ ಹತ್ತುರೂಪಾಯಿಗಳು ನೇಗಿಯ ಕೂಲಿಗೆಹೋದರೂ, ಹತ್ತುರೂಪಾಯಿಗಳು ಉಳಿಯುತ್ತವೆ

ಆ ಹತ್ತುರೂಪಾಯಿಗಳಿಂದ ನಿಮ್ಮ ಹದಿನೈದು ಇಪ್ಪತ್ತು ದಿವಸದ ಉದರ ನಿರ್ವಾಹ ಸಾಗಬಹುದು. ಇಷ್ಟುದಿವಸ ಅಡಿಗೆಯುಮನೆಯ ಮೋರೆಯನ್ನು ಸಹ ನೋಡದ ನಿಮಗೆ ಸ್ವತಃನೀವೆ ಅಡಿಗೆಮಾಡಿಕೊಳ್ಳ ಬೇಕಾಗುವದು. ನಂಬರು ಮನೆಯೊಳಗೆ, ನಾಲ್ಕುಮಂದಿ ಸುಧಾರಕರಸಂಗಡ, ಶ್ರಮವಿಲ್ಲದೆ ಅನ್ನವನ್ನುಣ್ಣುವ ನಿಮಗೆ, ಸುಧಾರಕರು ದೃಷ್ಟಿಗೆಸಹ ಬೀಳದಂಥ ಗ್ರಾಮದಲ್ಲಿ, ಒಬ್ಬೊಂಟಿಗರಾಗಿಯೇ ಮಾಡಿಕೊಂಡ ಅನ್ನವನ್ನುಣಬೇಕಾಗುವದು. ಜನರನ್ನು ನಿರ್ವೀರ್ಯರನ್ನಾಗಿ ಮಾಡುವದಲ್ಲದೆ ಅವರಆಯುರ್ಮರ್ಯಾದೆಯನ್ನು ಹಾಳುಮಾಡುವ ಚಹ ಮುಂತಾದ ಮಾದಕ ಪೇಯಗಳು ಅಲ್ಲಿನಿಮಗೆ ಮೋರೆ ಮೋರೆ ಬಡಕೊಂಡರೂ ಸಿಗುವದಿಲ್ಲ.

ರಾಯರೇ! ನನ್ನನ್ನು ಮಾರ್ಗದರ್ಶಕಳೆಂದು ತಿಳಿಯಬೇಡಿರಿ. ನಿಮ್ಮೋರ್ವ ಹಿತಚಿಂತಕಳೆಂದು ತಿಳಿಯಿರಿ. ನನ್ನ ಈ ಎರಡು ಅಲ್ಪ ಮಾತುಗಳನ್ನು ಪ್ರೇಮ ಪೂರ್ವಕವಾಗಿ ಇಷ್ಟುಹೊತ್ತಿನವರೆಗೆ ಸಾವಧಾನಚಿತ್ತದಿಂದ ಕೇಳಿದುದಕ್ಕಾಗಿ ನನಗೆ ಹೇಳಲಾರದಷ್ಟು ಆನಂದವಾಗಿದೆ. ನನಗೂ ನಿಮಗೂ ಪರಿಚಯವವಿದೆ. ಸ್ನೇಹವದೆ. ಆದರೆ ನಿಕಟಸಂಬಂಧವಿಲ್ಲದೆ ಈರೀತಿಯಾಗಿ ಒಮ್ಮಿಂದೊಮ್ಮೆ ನಿಮ್ಮೆದುರಿಗೆ ನಿರ್ಭಿಡೆಯಿಂದ ಮಾತಾಡಿದುದಕ್ಕಾಗಿ ಈ ಬಾಲಿಕೆಯನ್ನು ಕ್ಷಮಿಸಬೇಕು. ನಮ್ಮ ಮಾವನ ಮನೆಗೆ ತಾವು ಬರಹತ್ತಿದಮೇಲೆ ತಮ್ಮಕೂಡ ಮೇಲಿಂದಮೇಲೆ ಮಾತಾಡಬೇಕೆಂದು ಉತ್ಕಟೇಚ್ಛೆಯು ಒಮ್ಮೊಮ್ಮೆ ಬರುತ್ತಿತ್ತು. ಆದರೆ ವತ್ಸಲಾ ಕಾಂತರಾಯರ ಪ್ರೇಮಾಲಾಪಕ್ಕೆ ಭಂಗಬರಬಹುದೆಂದು, ನನಗೆ ಮಾತಾಡಲು ಧೈರ್ಯವಾಗುತ್ತಿದ್ದಿಲ್ಲ. ಈ ಹೊತ್ತು ಮುಂಜಾನೆ ಮನೆಗೆ ಬಂದಾಗ್ಗೆ, ಯಾರೂಮಾತಾಡಿಸದೆ ಇಲ್ಲದಿರುವದನ್ನು, ಅದರಲ್ಲಯೂ ತಮ್ಮಪ್ರೀತಿಗೆ ಪಾತ್ರಳಾದ ವತ್ಸಲೆಯು ಸಹ ಮಾತಾಡಿಸದೆ ಇದ್ದುದನ್ನುನೋಡಿ, ನನಗೆ ಬಹಳೇ ವಿಷಾದವಾಯಿತು. ನಾನು ಮಾತಾಡಿಸಬೇಕೆಂದು ಹೊರಗೆ ಬಂದೆನು, ಅಷ್ಟರಲ್ಲಿ ತಾವೀರ್ವರೂ ಹೊರಹೊರಿಟರಿ. ನಾನುಹಿಂದಿನಿಂದ ಹೂವಿಗೋಸುಗ ಬರುತ್ತಿರುವಾಗ್ಗೆ ತಾವು ಓರ್ವರೇ ಅಲ್ಲಿಇದ್ದಿರಿ, ವತ್ಸಲೆಯು ಅಲ್ಲಿ ಇರಲಿಲ್ಲ.

ಚಂದ್ರಿಕೆಯ ಈ ಮಾತುಗಳನ್ನು ಕೇಳಿ ಕಮಲಾಕಾಂತನಿಗೆ ಹೇಳಲಾರದಷ್ಟು ಹರ್ಷವಾಯಿತು, ಅವನ ಕಣ್ಣೊಳಗಿಂದ ಅನಂದಾಶ್ರುಗಳು ಹರಿಯ ಹತ್ತಿದವು, ಅವನ ಮೊದಲಿನ ಮನಃಪ್ರವರ್ತಿಯು ಅಲ್ಲಿಂದಲ್ಲಿಯೇ ಬಯಲಾಯಿತು. ಅವನು ಸದ್ಗದಿತ ಕಂಠದಿಂದ "ಚಂದ್ರಿಕಾದೇವಿಯವರೇ ತಮ್ಮೀ ಉಪಕಾರವನ್ನು ನಾನು ಎಂದಿಗೂ ಮರೆಯನು. ತಾವು ವಯಸ್ಸಿನಿಂದ ಸಣ್ಣವರಿದ್ದರೂ ಗುಣದಿಂದ ಆದರ್ಶಭೂತರಿರುವಿರಿ. ತಮ್ಮ ಒಂದೊಂದು ಮಾತುಗಳು, ಕೆತ್ತಿಡಿಸಲು ಯೋಗ್ಯವಿರುವವು. ತಮ್ಮ ಮಾತುಗಳನ್ನು ಕೇಳುವಕಾಲಕ್ಕೆ ನನಗೆ ಒಂದೊಂದುಸಾರೆ ಮೈಮೇಲೆ ಅರಿವು ಇಲ್ಲದಂತಾಗುತ್ತಿತ್ತು. ತಮ್ಮನ್ನು ನೋಡುತಲೆ ನನಗೆ ಮಾರ್ಗದರ್ಶಕ ದೇವತೆಯಂತಲೇ ಭಾಸವಾಗುತ್ತಿತ್ತು. ತಾವು ಇಷ್ಟುಹೊತ್ತಿನ ವರೆಗೆ ಹೇಳಿದ ಎಲ್ಲ ಶಬ್ದಗಳು ಅಕ್ಷರಶಃನಿಜವಿರುತ್ತವೆ. ದೇವಿಯವರೇ! ಇಂಥಕಷ್ಟಮಯ ಸ್ಥಿತಿಯಲ್ಲಿ ಸಹಾಯ ಮಾಡುವದಂತೂ ಒತ್ತಟ್ಟಿಗಿರಲಿ, ಮನೆಗೆ ಬಂದರೂ ಮಾತಾಡಿಸದೆ ಇದ್ದ, ಧನಿಕರ ಮೋರೆಯಮೇಲೆ ಹೊಡೆಯುವಂತೆ ಉದಾರ ಮನಸ್ಸಿನಿಂದ ರೂಪಾಯಿಗಳನ್ನು ಕೊಟ್ಟು, ನನ್ನನ್ನು ಹಾದಿಗೆಹಚ್ಚಿದುದಕ್ಕಾಗಿ ನಿಮಗೆ ನಾನು ಅತ್ಯಂತ ಋಣಯಾಗಿರುವೆನು.

ಚಂದ್ರಿಕಾ:- ಕಮಲಾಕಾಂತರಾಯರೇ! ಇಷ್ಟು ಹೊಗಳಿಕೆಗೆ ನಾನು ಅರ್ಹಳಲ್ಲ. ವೇಳೆಯು ಎಲ್ಲರಿಗೂ ಇದ್ದೇ ಇರುವದು. ಇಂಥಸ್ಥಿತಿಯಲ್ಲಿ ಒಬ್ಬರಿಗೊಬ್ಬರು ಸಹಾಯ ಮಾಡದಿದ್ದರೆ ಹೇಗೆ? ಇದರಲ್ಲಿ ನಾನೇನು ಹೆಚ್ಚಿಗೆ ಮಾಡಿದೆನು, ಹಾಗಾದರೆ ಆಗ್ರಾಮಕ್ಕೆ ತಾವು ನಾಳಿನದಿನವೇ ಹೊರಡಬಹುದಲ್ಲವೇ? ಹೊತ್ತಾಯಿತು ಮನೆಯಲ್ಲಿ ದಾರೀ ನೋಡುತ್ತಿರಬಹುದು, ಹೋಗುತ್ತೇನೆ. ಎಂದುಹೇಳಿ, ಮನೆಯದಾರೀ ಹಿಡಿದಳು. ಇತ್ತ ಕಮಲಾಕಾಂತನು ಅವಳ ಗುಣಗಳನ್ನೊಂದೊಂದಾಗಿ ಬಣ್ಣಿಸುತ್ತ ಮನೆಯಕಡೆಗೆ ತಿರಳಿದನು.

⚘ ⚘ ⚘ ⚘ ⚘ ⚘ ⚘ ⚘

ಮಾರನೆಯದಿನ ಬೆಳಗಿನಜಾವದಲ್ಲಿಎದ್ದು, ಇದ್ದಬಿದ್ದ ತನ್ನ ಎಲ್ಲ ಸಾಮಾನುಗಳನ್ನು ಕಟ್ಟಿಕೊಂಡು ಒಂದು ಬಾಡಿಗೆ ಬಂಡಿಯನ್ನು ಮಾಡಿ ಕೊಂಡು ಸುವರ್ಣಗಿರಿಗೆ ತೆರಳಿದನು. ಮೊದಲು ನಾಲ್ಕೆಂಟು ದಿವಸ ಅಲ್ಲಿ ಅವನಿಗೆ ಹುಚ್ಚು ಹಿಡಿದಂತಾಗುತ್ತಿತ್ತು. ತನ್ನಕಾರ್ಯ ಕ್ಷೇತ್ರದಲ್ಲಿ ಕೆಲಸ ಮಾಡಹತ್ತಿದಮೇಲೆ, ಬರಬರುತ್ತ ಅವನು ಕುಂತಳಪುರವನ್ನು ಅಲ್ಲಿಯಜ ನರನ್ನೂ ಮರೆತುಬಿಡಹತ್ತಿದನು. ಅಲ್ಲಿಯ ಬಡರೈತರ ಆಚಾರ ವಿಚಾರ ಅವರ ಔದಾರ್ಯ, ಅವರ ನಿಷ್ಕಲಂಕಪ್ರೇಮ, ಅವರಲ್ಲಿರುವ ಭೂತದಯ ಮೊದಲಾದ ಗುಣಗಳು, ಇವನ ಮನಸ್ಸನ್ನು ಸಂಪೂರ್ಣವಾಗಿ ಆಕರ್ಷಿಸ ಹತ್ತಿದವು. ಇವನು ಹೋದಂದಿನಿಂದ ರಾಟಿಯ ಪ್ರಚಾರವು ಒತ್ತರದಿಂದ ಸಾಗಹತ್ತಿತ್ತು. ಕಮಲಾಕಾಂತನು ಸ್ವತಃ ಮುಂಜಾವಿನಿಂದ ಸಂಜೆಯವರೆ ಗೆ ನೂಲುತ್ತಿದ್ದನು. ಸಂಜೆಯಾಗುತಲೆ ಎಲ್ಲಒಕ್ಕಲಿಗರ ಮಕ್ಕಳನ್ನುಕರೆದು ಅವರಿಗೆ ಓದು ಹೇಳುತ್ತಿದ್ದನು. ಇವನ ಊಟ ಉಡಿಗೆಯ ಎಲ್ಲಖರ್ಚನ್ನು ಒತ್ತಾಯದಿಂದ ಒಕ್ಕಲಗರೇ ಕೊಡುತ್ತಿದ್ದರು. ನಸುಕು ಹರಿಯುವದರೊಳ ಗಾಗಿ ಎದ್ದು ಕಮಲಾಕಾಂತನು, ತನ್ನನಿತ್ಯಕರ್ಮಗಳನ್ನು ತೀರಿಸಿಕೊಂಡು ಒಕ್ಕಲಿಗರ ಮಕ್ಕಳು ತಂದುಕೊಟ್ಟ ಅಮೃತತುಲ್ಯವಾದ ಆವಿನ ಹಾಲನ್ನು ಎತೇಚ್ಛಕುಡಿದು, ಎಲ್ಲ ಒಕ್ಕಲಿಗರ ಸಮಾಚಾರವನ್ನುಕೇಳಿ, ಬೇಸಾಯದ ವಿಷಯಕ್ಕೆ ತನಗೆ ಗೊತ್ತಿದ್ದ ಹಲಕೆಲವು ವಿಷಯುಗಳನ್ನು ಅವರಿಗೆ ಮನದ ಟ್ಟಣಿಯಾಗುವಂತೆ ಹೇಳಿ ಮನೆಗೆಬಂದು ತನ್ನ ನಿತ್ಯದಕೆಲಸದಲ್ಲಿ ತೊಡಗು ತ್ತಿದ್ದನು. ಇದಲ್ಲದೆ ಆ ಹಳ್ಳಿಯಲ್ಲಿ ಕಮಲಾಕಾಂತನು ಬಂದನಂತರ ಒಂ ದು ವ್ಯಾಯಾಮ ಶಾಲೆಯೂ ಸ್ಥಾಪಿಸಲ್ಪಟ್ಟಿತು ಹೊತ್ತು ಮುಳುಗತಲೆ ವ್ಯಾಯಾಮಮಾಡುವ ಎಲ್ಲ ವಿದ್ಯಾರ್ಥಿಗಳು ಅಲ್ಲಿಗೆಬಂದು ತಮಗೆ ಬೇಕಾದ ಕುಸ್ತಿ, ಮಲಗಂಬ, ಲಾಠಿ, ಮೊದಲಾದ ಅಂಗಸಾಧನೆಯ ಕಲೆಗಳನ್ನು ಕ ಲಿಯುತ್ತಿದ್ದರು.

ಕಾಂತನಾದರೂ, ಅದರಲ್ಲಿಭಾಗತೆಗೆದುಕೊಳ್ಳುತ್ತಿದ್ದನು. ಒಟ್ಟನಮೇ ಲೆ ಕಮಲಾಕಾಂತನು ಬಂದಮೇಲೆ ಆಗ್ರಾಮದವರಿಗೆ ನವಚೈತನ್ಯವೇ ಬಂ ದಂತಾಗಿತ್ತು ಆಗ್ರಾಮದ ಒಂದುರೂಪಾಯಿಯ ಹತ್ತಿಯು ಸಹ ಪರೂರಿಗೆ ಹೋಗುತ್ತಿದ್ದಿಲ್ಲ. ಎಲ್ಲ ಹತ್ತಿಯೂ ಅಲ್ಲಿಯೇ ಖರ್ಚಾಗುತ್ತಿತ್ತು. ಮೂರು

ನಾಲ್ಕು ತಿಂಗಳುಗಳವರೆಗೆ ಕಮಲಾಕಾಂತನಿಗೆ ಕುಂತಳಪುರಕ್ಕೆ ಹೋಗಿ ಬಟ್ಟೆಯ ವಿಕ್ರಯವನ್ನು ಮಾಡಿಕೊಂಡು ಬರಬೇಕಾಗುತ್ತಿತ್ತು. ಬರಬರುತ್ತ ಖಾದಿಯುಸಲುವಾಗಿ ಜನರೇ ಅಲ್ಲಿಗೆಬರಹತ್ತಿದರು. ಐದಾರು ತಿಂಗಳ ಅವಧಿಯಲ್ಲಿ ಖಾದಿಯ ಭಾಂಡಾರವೇ ಅಲ್ಲಿಸ್ಥಾಪಿಸಲ್ಪಟ್ಟಿತು. ಎಲ್ಲಕಡೆಯಿಂದ ವ್ಯಾಪಾರಸ್ತರ ಕೇಳಿಕೆಗಳು ಬರಹತ್ತಿದವು. ವ್ಯಾಪಾರವು ಹೆಚ್ಚುತ್ತ ಹೋದಂತೆ ಜನವಸ್ತಿಯೂ ಬೆಳೆಯಲಾರಂಭಿಸಿತು. ನೇಕಾರರೂ ಬಂದು ವಾಸ ಮಾಡಹತ್ತಿದರು. ವರ್ಷಾರುತಿಂಗಳಲ್ಲಿ ಕಮಲಾಕಾಂತನ ಕೈಕೆಳಗೆಐವತ್ತು ಆರವತ್ತು ಮಗ್ಗಗಳು ಒಂದೇಸವನೆ ನಡೆಯುಹತ್ತಿದವು. ಮೊದಲು ಇವನನ್ನು ದೂಷಿಸುತ್ತಿದ್ದ ಜನರೇ ಇವನನ್ನು ಈಗ ಕೊಂಡಾಡುತ್ತಿದ್ದರು. ಕಮಲಾಕಾಂತನ ಸತತ ಪ್ರಯತ್ನದಿಂದಲೂ ಕರ್ತವ್ಯದಕ್ಷತೆಯಿಂದಲೂ ವರ್ಷೆರಡು ವರುಷಗಳಲ್ಲಿ ಆಗ್ರಾಮವು ಆಪ್ರಾಂತಕ್ಕೆ ಆದರ್ಶಭೂತವಾಗಿ ಕಾಣಹತ್ತಿತು. ಐವತ್ತುರೂಪಾಯಿ ಭಾಂಡವಲದಮೇಲೆ ತನ್ನಕಾರ್ಯಕ್ಷೇತ್ರಕ್ಕೆ ಹೋದ ಕಮಲಾಕಾಂತನು, ತನ್ನದೀರ್ಘೋದ್ಯೋಗದಿಂದ ಎರಡು ಎರಡುವರೆ ವರುಷಗಳಲ್ಲಿ ಏಳೆಂಟು ಸಾವಿರ ರೂಪಾಯಿಗಳಿಗೆ ಒಡೆಯನಾದನು. ಮೊದಲು ತನ್ನೊಬ್ಬನ ಉಪಜೀವನವು ಸಾಗುವದು ಕಠಿಣವಾಗಿದ್ದು ಈಗ್ಗೆ ನೂರಾರುಜನರು ತನ್ನಿಂದ ಉಪಜೀವಿಸುತ್ತಿರುವದನ್ನು ಕಂಡು ಅವನಿಗೆ ಹೇಳಕೂಡದಷ್ಟು ಹರುಷವಾಗಿತ್ತು. ಇಂತಸುಖಮಯ ಪರಿಸ್ಥಿತಿಯಲ್ಲಿಕೂಡ, ತನಗೆ, ಅನ್ನಕ್ಕೆ ಮಾರ್ಗಮಾಡಿಕೊಟ್ಟು ತನನ್ನು, ಹಾದಿಗೆ ಹಚ್ಚಿದ್ದ ಚಂದ್ರಿಕೆಯ ನೆನಪನ್ನು ಅವನು ಎಂದೂ ಮರೆತಿದ್ದಿಲ್ಲ. ಅವನು ಅವಳ ಉಪಕಾರವನ್ನು ಪದೇ ಪದೇ ಸ್ಮರಿಸುತ್ತಿದ್ದನು. ಈ ಅವಧಿಯಲ್ಲಿ ತನಗೆ ಮಾರ್ಗದರ್ಶಕಳಾದ ಚಂದ್ರಿಕೆಯ ಬೆಟ್ಟಿಯನ್ನು ತೆಗೆದುಕೊಳ್ಳುವ, ಸುಯೋಗವು, ಕಮಲಾಕಾಂತನಿಗೆ ಇದುವರೆಗೂ ಬಂದಿದ್ದಿಲ್ಲ.

✣ ✣ ✣ ✣ ✣ ✣ ✣ ✣

ಕಮಲಾಕಾಂತನು ಚಂದ್ರಿಕೆಯ ಬೆಟ್ಟಿಯಅಪೇಕ್ಷೆಯಿಂದ ಒಂದುದಿವಸ ಪಾದಚಾರಿಯಾಗಿ ಕುಂತಳ ಪುರದಕಡೆಗೆ ಹೊರಟಿದ್ದನು. ಇತ್ತ ಚಂದ್ರಿಕೆಯೂ ಹೊಲಕ್ಕೆ ಹೋಗಬೇಕೆಂದು ಹೊರಟಿದ್ದಳು, ನಡುದಾರಿಯಲ್ಲಿ ಅವ

ರಿಬ್ಬರ ಬೆಟ್ಟಿಯಾಯಿತು. ಹರ್ಷಾತಿರೇಕದಿಂದ ಒಬ್ಬರ ಮುಖದಿಂದಲೂ ಮಾತುಗಳು ಹೊರಬೀಳದಾದವು. ಪರಸ್ಪರರ ನೇತ್ರಗಳಿಂದ ಆನಂದಾಶ್ರುಗಳು ಹೊರಸೂಸಹತ್ತಿದವು. ಕೆಲಹೊತ್ತಿನವರಿಗೆ ಒಬ್ಬರನ್ನೊಬ್ಬರು ನೋಡುತ್ತ, ಇಬ್ಬರೂ ಸುಮ್ಮನೇ ನಿಂತುಬಿಟ್ಟರು. ತುಸುಹೊತ್ತಿನಮೇಲೆ ಕಾಂತನು ಇಷ್ಟು ಹೊತ್ತಿನ ವರೆಗೆ ತಾನುಮಾತಾಡಿಸದೆ ಸುಮ್ಮನೆ ನಿಂತುದಕ್ಕೆ ನಾಚಿ " ಏನು ದೇವಿಯವರೇ ಎಲ್ಲವೂ ಕುಶಲವಷ್ಟೇ? ಆವಕಡೆಗೆ ಹೊರಟಿರುವಿರಿ. ಬಹಳ ದಿವಸಗಳಿಂದ ತಮ್ಮ ದರ್ಶನವಾಗವೆ ಇದ್ದುದಕ್ಕೆ, ದರ್ಶನಾಪೇಕ್ಷಿಯಾಗಿ ಈ ಹೊತ್ತು ತಮ್ಮಕಡೆಗೆ ಹೊರಟದ್ದೆನು.

ಚಂದ್ರಿಕಾ— ತಮ್ಮ ಈ ಕೃತಜ್ಞತೆಗಾಗಿ ನಾನು ಅತ್ಯಂತ ತಮಗೆ ಋಣಿ ಯಾಗಿರುವೆನು.

ಕಾಂತ— ಇದೆಲ್ಲ ತಮ್ಮ ಉಪದೇಶ ಹಾಗೂ ಉಪಕಾರದ ಫಲವು.

ಚಂದ್ರಿಕಾ— ರಾಯರೆ! ಉಪದೇಶ ಮಾಡಲಿಕ್ಕೆ ನನ್ನಲ್ಲಿ ಸಲ್ಪಾದರೂ ಯೋಗ್ಯತೆ ಇಲ್ಲ. ಏನೋ ನನಗೆ ತಿಳಿದ ಎರಡು ಮಾತುಗಳನ್ನು ಹೇಳಿರಬಹುದು. ಇದರಲ್ಲಿ ಉಪಕಾರವೇನು? ನೀವು ನಿಮ್ಮ ಬಾಹುಬಲದಿಂದ ದುಡಿದು " ದುಡಿತವೇ ದುಡ್ಡಿನತಾಯಿ " ಎಂಬದನ್ನು ಸತ್ಯಮಾಡಿರುವಿರಿ. ತಮ್ಮ ಈ ಸ್ಥಿತಿಯನ್ನು ನೋಡಿ ನನ್ನಗೆ ಅತಿ ಆನಂದವಾಗಿದೆ.

ಕಾಂತ— ಚಂದ್ರಿಕಾದೇವಿ ಒಂದುಸಾರೆ ಬಡವನ ಗುಡಿಸಲದವರೆಗೆ ಬಂದು ಅವನ ಆದರಾತಿಥ್ಯವನ್ನು ಕೈಕೊಳ್ಳಬೇಕಾಗಿ ವಿನಯಪೂರ್ವಕ ಬೇಡಿಕೆ ಅದೆ. ಮನೆಯಂತೂ ತಮ್ಮದೇ ಇರುವದು. ನಾನು ತಮ್ಮವನೇ ಇದ್ದೇನೆ ಬರಲು ಸಂಕೊಚವೇಕೆ?

ಚಂದ್ರಿಕಾ— ಬರಲು ಯಾವತರದ ಸಂಕೋಚವಿಲ್ಲ! (" ತಮ್ಮ ಅರ್ಧ ಅಂಗವೇ ನನ್ನಂಗ ವಿರುವದೆಂದಮೇಲೆ ಮನೆಯಿರುವದಂತೂ ಸಹಜವು." ಎಂದು ಮನದಲ್ಲಿಅಂದು ನಸುನಾಚಿಕೆಯಿಂದತಲೆಬಾಗಿ ಸುಮ್ಮನೆ ನಿಂತುಕೊಂಡಳು. ಆವುದೋ ವಿಷಯದಕಡೆಗೆ ಕಾಂತನ ಲಕ್ಷವಿದ್ದುದರಿಂದ ಚಂದ್ರಿಕೆ ಯಾಡಿದ ಮಾತಿನ ಕೊನೆಯ ಶಬ್ದಗಳಕಡೆಗೆ ಅವನಲಕ್ಷವಿದ್ದಿಲ್ಲ

ಇದನ್ನು ತಿಳಿದು ಚಂದ್ರಿಕೆಯು ಗಟ್ಟಿಯಾಗಿ " ರಾಯರೇ! ಇಷ್ಟೆಲ್ಲಾಯಿತು ಇನ್ನು ವಿವಾಹವು?

ಕಾಂತ— " ವಿವಾಹವೇ! ನನ್ನಂಥ ದರಿದ್ರನನ್ನು ಲಗ್ನಮಾಡಿಕೊಳ್ಳಲು ಯಾವಯುವತಿಯು ಒಡಂಬಡುವಳು. ವಿದ್ಯಾವಂತನೂ ಅಲ್ಲ, ಬುದ್ಧಿವಂತನಲ್ಲ, ಧನಿಕನಲ್ಲ; ಅಂದಮೇಲೆ ವಿವಾಹವಾಗುವ ಬಗೇಹೇಗೆ?

ಚಂದ್ರಿಕಾ— ( ನಸುನಗುತ್ತ ) ರಾಯರೇ! ಇಂಥ ಮಾತುಗಳನ್ನು ಯಾರಿಗೆ ಕಲಿಸುವಿರಿ, ತಮ್ಮಂಥ ರೂಪವಾನ್ ವಿದ್ವಾನ್ ಧನವಾನ್ ಮನುಷ್ಯರನ್ನು ಮದುವೆ ಯಾಗದವಳುನಿರ್ಭಾಗ್ಯವನಿತೆಯೇಸರಿ. ತಾವುಸಮ್ಮತಿಸಿದರೆ ತಮ್ಮನ್ನು ಮದುವೆಯಾಗಲು ಓರ್ವ ಯುವತಿಯು ಈ ಹೊತ್ತು ಸಿದ್ಧಳಿರುವಳು. ಕಾಂತ— " ಯಾವಳವಳು "

ಚಂದ್ರಿಕಾ— ಮತ್ತೊಬ್ಬಳಲ್ಲ. ತಮ್ಮೆದುರಿಗೆ ನಿಂತಿರುವವಳೇ ? ಎಂದು ನಾಚಿ ಅಂಗುಷ್ಟದಿಂದ ನೆಲವಗಿಯುತ್ತ ತಲೆಬಾಗಿನಿಂತುಕೊಂಡಳು.

ಕಾಂತ— ದೇವಿಯವರೇ! ಅನ್ನವನಿತ್ತ ತಮಗೆನಾನು ಅನ್ನದಾತೃಲಕ್ಷ್ಮಿಎಂದು ತಿಳಿದಿರುವೆನು.

ಚಂದ್ರಿಕಾ— (ಕಂಪಿತಸ್ವರದಿಂದ) ಹಾಗಾದರೆ ನನ್ನೊಡನೆ ಮದುವೆಯಾಗಲು ತಮಗೆ ಒಪ್ಪಿಗೆ ಇಲ್ಲವೋ?

ಕಾಂತ— (ಆನಂದದಿಂದ) ತಾನಾಗಿಯೇ ಮನೆಗೆ ಬಂದ ಲಕ್ಷ್ಮಿಯನ್ನು ಹಿಂದಕ್ಕೆ ದೂಡುವ, ನಿರ್ಭಾಗ್ಯನು ಈ ಜಗತ್ತಿನಲ್ಲಿ ಆವನಿರುವನು.

ಚಂದ್ರಿಕಾ— ಕೇಳಿಕೆಗೋಸುಗ ನಾಳಿನದಿವಸವೇ ಕುಂತಳಪುರಕ್ಕೆ ಬರಬೇಕಾಗುವದು.

ಕಮಲ— ನಿಮ್ಮ ಇಚ್ಛೆಯಮೇರೆಗೆ ನಾಳಿನದಿನವೇ ಬರುವೆನು.

ಚಂದ್ರಿಕಾ— ಇಶ್, ಇದೇನು! ಮೇಲಿಂದಮೇಲೆ ಬಹುವಚನದ ಪ್ರಯೋಗವು. ಇದುನನಗೆ ಸ್ವಲ್ಪಾದರೂ ಸರಿಬರುವದಿಲ್ಲ. ಒಳ್ಳೇದು ಬರುತ್ತೇನೆ ಎಂದು ಹೇಳಿ ಆವನಕಡೆಗೊಂದು ಕಡೆಗಣ್ಣೊಗೆದು ಊರಕಡೆಗೆ

ತಿರುಗಿದಳು. ಮನೆಗೆ ಬರುವಾಗ ಅವನ ಸುಂದರ ಸತೇಜ ಮುಖ ಕಮಲ ವು ಚಂದ್ರಿಕೆಯ ಕಣ್ಣೆದುರಿಗೆ ಕಟ್ಟಿದಂತಾಗಿತ್ತು,

ಮರುದಿವಸ ಕಮಲಾಕಾಂತನು ವಾಡಿಕೆಗಿಂತ ಬೇಗಎದ್ದು ಸ್ನಾನ ಮಾಡಿ ತನ್ನ ನಿತ್ಯಕರ್ಮಗಳನ್ನು ತೀರಿಸಿಕೊಂಡು ಅಲ್ಪಾಹಾರ ಮಾಡಿ ಕುಂತಳಪುರದಕಡೆಗೆ ಸಾಗಿದನು. ಮಾರ್ಗಕ್ರಮಿಸುವಾಗ ಆವಳವಿಷಯದ ವಿಚಾರಗಳೇ ಅವನತಲೆಯಲ್ಲಿ ನಡೆದಿದ್ದವು. ಒಂಬತ್ತು ಗಂಟೆಯಸುಮಾ ರಕ್ಕೆ ಕುಂತಳಪೂರಿಗೆ ಬಂದು ಮುಟ್ಟಿದನು. ಚಂದ್ರಕೆಯ ಹೇಳಿಕೆಯ ಮೇ ರೆಗೆ ರಘುನಾಥರಾಯರ ಮನೆಗೆ ಹೋದನು. ರಘುನಾಥರಾಯರೂ ಮನೆ ಯಲ್ಲಿದ್ದರು. ಯೋಗ್ಯತೆ ಗನುಸಾರವಾಗಿ ಆದರ ಸತ್ಕಾರವೂ ಆಯಿತು. ಊಟ ಉಡಿಗೆಗಳಾದಮೇಲೆ ಆಮಾತು ಈಮಾತು ಮಾತಾಡುತ್ತ, ಚಂದ್ರಿ ಕೆಯೊಡನೆ ವಿವಾಹ ವಾಗಬೇಕೆಂಬ ವಿಷಯಕ್ಕೆ ವಿಚಾರಿಸಿದನು. ರಘುನಾ ಥರಾಯರು ತುಸು ಅನುಮಾನಿಸಹತ್ತಿದರು. ಆಮೇಲೆ ಚಂದ್ರಿಕೆಯನ್ನು ವಿಚಾರಿಸಿ ಹೇಳುವೆನೆಂದು ಹೇಳಿದರು. ಅವರ ಮನಸ್ಸು ತಮ್ಮ ಸೋದರಳಿ ಯನಾದ ಉಪೇಂದ್ರನಿಗೆ ಕೊಡಬೇಕೆಂದು ಇತ್ತು. ಆಡರೆ ಚಂದ್ರಿಕೆಯ ಒಪ್ಪಿಗೆ ಇಲ್ಲದೆ ಯಾವಕೆಲಸವನ್ನು ಮಾಡಲಿಕ್ಕೆ ಬರುವಂತೆ ಇದ್ದಿಲ್ಲ. ಇದ ಲ್ಲದೆ ಮನಸಬದಾರರ ಮಿತ್ರನ ಬಳಿಯಲ್ಲಿ ಅವರ ಮೃತ್ಯು ಪತ್ರ ಒಂದು ಇತ್ತು. ಅದನ್ನು ನೋಡದೆ ಆವರು ಯಾವ ವಿಚಾರವನ್ನೂ ಮಾಡುವಹಾ ಗೆ ಇದ್ದಿಲ್ಲ. ಆದುದರಿಂದ, ಈಹೊತ್ತೇ ಮೃತ್ಯುಪತ್ರವನ್ನು ತೆಗೆದುಕೊಂಡು ಬರಬೇಕೆಂಬದಾಗಿ ಮಿತ್ರನಿಗೆ ಹೇಳಿ ಕಳುಹಿದರು. ಪತ್ರದಮೇರೆಗೆ ಮಿತ್ರ ನೂ ಬಂದನು. ನಾಲ್ಕುಮಂದಿ ಪ್ರಮುಖಗೃಹಸ್ಥರ ಎದುರಿನಲ್ಲಿ ಪತ್ರವು ಒಡೆಯಲ್ಪಟ್ಟಿತು. ಅದರೊಳಗಣ ವಿಷಯವು ಕೆಳಗೆ ಬರೆದ ಪ್ರಕಾರಇತ್ತು.

> " ನನ್ನ ಪಶ್ಚಾತ್ ನನ್ನ ಎಲ್ಲಸ್ಥಾವರ ಜಂಗಮ ಆಸ್ತಿಗೆ ನನ್ನ ಮಗಳು ಬಾಧ್ಯಳು. ಆದರಮೇಲೆ ಯಾರ ಓಡೆತನವೂ ಇಲ್ಲ ಅವಳು ತನ್ನವಯಸ್ಸಿನ ಹದಿನೆಂಟನೆಯ ವರುಷ ವಾದಮೇ ಲೆ ತನಗೆ ಬೇಕಾದ ಪುರುಷನೊಡನೆ ಲಗ್ನವಾಗಬಹುದು. ಆಮೇಲೆ ಆ ಎಲ್ಲ ಆಸ್ತಿಗೆ ಅವರಿಬ್ಬರೂ ಬಾಧ್ಯರಾಗಬಹುದು, "

ಇವೇ ಮೊದಲಾದ ವಿಷಯುಗಳು ಅದರಲ್ಲಿ ಅಡಕವಾಗಿದ್ದವು. ಪತ್ರವನ್ನೋದಿದಮೇಲೆ ರಘುನಾಥರಾಯರು ಒಳಗೆ ಹೋಗಿ ಚಂದ್ರಿಕೆಯನ್ನು ವಿಚಾರಿಸಿದರು. ಅವಳ ಒಪ್ಪಿಗೆಯೂ ಸಿಕ್ಕಿತು.

ಈ ಮೊದಲೇ ಇವರೀರ್ವರಲ್ಲಿ ಮಾತು ಕತೆಗಳಾಗಿದ್ದವು. ಬಹಿರಂಗದ ಒಪ್ಪಿಗೆಯಷ್ಟೇ ಬೇಕಾಗಿತ್ತು, ಅದೂ ದೊರೆಯಿತು. ಅನಿರ್ವಾಹ ಪಕ್ಷಕ್ಕೆ ಚಂದ್ರಿಕೆಯ ವಿವಾಹವನ್ನು ಇವನೊಡನೆ ರಘುನಾಥರಾಯರು ಮಾಡಲೇಬೇಕಾಯಿತು. ಲಗ್ನದ ಎಲ್ಲ ಹಿರಿಯತನವನ್ನು ತಮ್ಮ ಮೇಲೆ ತೆಗೆದುಕೊಳ್ಳದೆ ತಮ್ಮ ಮಿತ್ರನಮೇಲೆ ಹೊರಿಸಿದರು. ಮಿತ್ರನು ಸಂತೋಷದಿಂದ ಒಪ್ಪಿಕೊಂಡನು.

ಎರಡೂಕೂಡಿ ಮಾಘ ಶು|| ೫ ಶುಭದಿವಸವನ್ನೇ ಲಗ್ನಮುಹೂರ್ತಕ್ಕೆ ಶುಭ ದಿವಸವೆಂದು ನಿಶ್ಚಯಿಸಿದರು. ಮರುದಿವಸ ದಿಂದಲೆ ಎಲ್ಲ ಕಡೆಗೆ ಲಗ್ನ ಪತ್ರಿಕೆಗಳು ಹೋಗ ಹತ್ತಿದವು. ರೀತಿಯಪ್ರಕಾರ ದೇಸಾಯಿ ಯರಿಗೂ ಲಗ್ನಪತ್ರಿಕೆಯು ಕಳುಹಿ ಕೊಡಲ್ಪಟ್ಟಿತು. ನಿಮಂತ್ರಣಪತ್ರ ಮುಟ್ಟುತ್ತಲೆ, ಕಮಲಾಕಾಂತನ ಮೇಲಿದ್ದ ತಮ್ಮ ವಾತ್ಸಲ್ಯವನ್ನು ವ್ಯಕ್ತಪಡಿಸಿ ದೇಶಾಯಿಯವರು ತಮ್ಮಪ್ರಕೃತಿಯ ಅಸ್ವಸ್ಥತೆಯಮೂಲಕ ಲಗ್ನಕ್ಕೆ ಎರಡನೆಯ ಕಡೆಗೆ ಬರುವ ದಾಗದೆ, ವಿವಾಹ ಸಮಾರಂಭವು ತಮ್ಮ ಗ್ರಾಮದಲ್ಲಿಯೇ ನೇರವೇರ ಬೇಕೆಂಬದಾಗಿ ವಿನಂತೀಪತ್ರವನ್ನು ಬರೆದು ಮನಸಬದಾರರ, ಮಿತ್ರನಬಳಿಗೆ ಕಳುಹಿದರು. ದೇಶಾಯಿಯರ ಪತ್ನಿ ಕಮಲಾಬಾಯಯವರ ಇಚ್ಛೆಯಾದರೂ ವಿವಾಹಕಾರ್ಯವು ತಮ್ಮಗ್ರಾಮದಲ್ಲಿಯೇ ಜರುಗಬೇಕೆಂಬದಾಗಿ ಇತ್ತು. ಈ ಮೊದಲೇ ಕಮಲಾಕಾಂತನಮೇಲಿದ್ದ ಸಿಟ್ಟು ದೇಸಾಯಿ ಯವರಲ್ಲಿ ಇಲ್ಲದಂತಾಗಿತ್ತು. ಅವರು ತಾವುತೋರಿಸಿದ ಕಠೋರತನಕ್ಕಾಗಿ ಮೇಲಿಂದ ಮೇಲೆ ಪಶ್ಚಾತ್ತಾಪ ಬಡುತ್ತಿದ್ದರು. ಇದಲ್ಲದೆ ಕಮಲಾಕಾಂತನನ್ನು ಕರೆಯಿಸಿ ಅವನಮೇಲಿದ್ದ ತಮ್ಮ ಪ್ರೇಮವನ್ನು ವ್ಯಕ್ತಪಡಿಸಿ ದೇಸಗತಿಯ ಎಲ್ಲಸೂತ್ರಗಳನ್ನು ಅವನಕೈಯಲ್ಲಿ ಕೊಡಬೇಕೆಂದು ಸಹ ಮಾಡಿದ್ದರು; ಆದರೆ ಎಂದಾದರೊಂದುದಿನ, ತಮ್ಮ ಎಲ್ಲ

ಆಸ್ತಿಯು ಅವನಿಗಾಗದೆ ಅನ್ಯರಿಗೆ ಆಗುವದಿಲ್ಲೆಂದು ಮಾನಸಿಕತನ ಮಾಡಿ ಬಿಟ್ಟಿದ್ದರು.

ಲಗ್ನದ ತಿಥಿಗೆ ಒಂದೇದಿವಸವು ಉಳಿದಿತ್ತು. ಚೌತಿಯದಿನವೇ ಮನಸಬದಾರರ ಮಿತ್ರನು, ರಘುನಾಥರಾಯರನ್ನೊಡಗೊಂಡು ಚಂದ್ರಿಕೆಯನ್ನುಕರೆದುಕೊಂಡು ದೇಸಾಯಿಯರ ಗ್ರಾಮಕ್ಕೆ ತೆರಳಿದನು. ವತ್ಸಲಾ ಉಪೇಂದ್ರರು ಮಾತ್ರ ಈ ವರೀವರ್ರ ಶುಭಕಾರ್ಯಕ್ಕೆ ಹೋಗಲಿಲ್ಲ.

ಇತ್ತ ಕಮಲಾಕಾಂತನೂ ತನಗೆ ಬೇಕಾದ ಎಲ್ಲಜನರನ್ನೂ ಕರೆದುಕೊಂಡು ಬಂದಿದ್ದನು. ಪಂಚಮಿಯ ದಿವಸ ಬಹು ವಿಜ್ರುಂಭಣೆಯಿಂದ,

**ಚಂದ್ರಿಕಾ ಕಮಲಾಕಾಂತರ ವಿವಾಹವು ನೆರವೇರಿತು.**

ವಿವಾಹ ಮಹೋತ್ಸವಕ್ಕೆ ದೂರದೂರಿನ ಪ್ರಮುಖ ಸದ್ಗೃಹಸ್ಥರೆಲ್ಲರೂ ಬಂದಿದ್ದರು. ವಧುವಿಗೋಸ್ಕರ ಕಮಲಾಕಾಂತನು ತಾನು ಸ್ವತಃ ನೂತು ನೇಯಿಸಿದ ಖಾದಿಯ ಸೀರೆಯನ್ನು ತಂದಿದ್ದನು. ಲಗ್ನಸಮಾರಂಭಕ್ಕೆ ಬಂದವರ ಮೈಮೇಲೆ ಎತ್ತ ನೋಡಿದತ್ತಲ್ಲ ಖಾದಿಯ ಬಟ್ಟೆಯಗಳೇ ಕಾಣುತ್ತಿದ್ದವು. ಕಮಲಾಬಾಯಿಯವರು ತಮ್ಮ ಮೈಮೇಲಣ ಬಹುಮೂಲ್ಯ ಆಭರಣಗಳನ್ನು ಪ್ರೀತಿಯಿಂದ ಸೊಸೆಗೆ ಕೊಟ್ಟರು. ದೇಸಾಯಿಯರು ತಮ್ಮ ಎಲ್ಲಸ್ಥಾವರ ಜಂಗಮ ಆಸ್ತಿಯನೆಲ್ಲ ವಧುವರರಿಗೆ ಲಗ್ನಸಮಾರಂಭದಲ್ಲಿಯೇ ಕಾಣಿಕೆಯಾಗಿ ಕೊಟ್ಟರು.

ಇಲ್ಲಿ, ವತ್ಸಲಾ ಉಪೇಂದ್ರರ ವಿಷಯಕ್ಕೆ ಬರೆಯುವದು ತುಸು ಅತ್ಯಾವಶ್ಯಕವದೆ. ವತ್ಸಲೆಯು ತನ್ನ ಕೃತಕಾರ್ಯಕ್ಕೆ ನಾಚಿ ಪಶ್ಚಾತ್ತಾಪ ಬಟ್ಟು ತನ್ನಕಡೆಯಿಂದಾದ ಅಕ್ಷಮ್ಯತಪ್ಪನ್ನು ಕ್ಷಮಿಸಬೇಕೆಂಬದಾಗಿ, ಕಮಲಾಕಾಂತನಿಗೆ ಹೇಳಲು, ಚಂದ್ರಿಕೆಯು ಕುಂತಳಪುರಕ್ಕೆ ಬಂದಾಗ್ಗೆ ಅವಳನ್ನು ಬೇಡಿಕೊಂಡಳು.

ಚಂದ್ರಿಕೆಯು ಮರುಳಿ ಸುವರ್ಣಗಿರಿಗೆ ಹೋಗುವ ಕಾಲಕ್ಕೆ ಅವಳನ್ನು ಸಂಗಡ ಕರೆದುಕೊಂಡುಹೋಗಿ, ಅವಳನ್ನು ಕ್ಷಮಿಸಲೇ ಬೇಕೆಂಬದಾಗಿ ಗಂಡನನ್ನು ಬೇಡಿಕೊಂಡಳು.

ವತ್ಸಲೆಯು ತನ್ನ ದುಶ್ಚಟ ದುರ್ಗುಣಗಳನ್ನು ತ್ಯಜಿಸಿ ಒಳ್ಳೇಮಾರ್ಗ ವನ್ನವಲಂಬಿಸಿದ್ದಕ್ಕಾಗಿ, ಕಮಲಾಕಾಂತನಿಗೆ ಮಿತಿಮೀರಿದ ಆನಂದವಾಯಿತು.

ಪೂರ್ವದಲ್ಲಿ ಅವರೀರ್ವರಲ್ಲಿದ್ದ ಗಂಡ ಹೆಂಡರ ಪ್ರೇಮವು ಪೂರ್ಣ ಅಳಿದು, ಈಹೊತ್ತು ಅದು ಅಣ್ಣ ತಂಗಿಯರ ನಿಷ್ಕಲಂಕ ಪ್ರೇಮವಾಗಿ ಪರಿಣಮಿಸಿತು.

ಕಮಲಾಕಾಂತನು ಅವಳಿಗೆ ಉಪೇಂದ್ರನೊಡನೆ ಲಗ್ನವಾಗಲು ಸೂಚಿಸಿದನು. ಉಪೇಂದ್ರನಾದರೂ ತನ್ನ ಮೊದಲಿನ ನೀಚಸ್ವಾರ್ಥ ತನವನ್ನು ಬಿಟ್ಟಿದ್ದನು.

ಮುಂದೆ ತುಸು ದಿವಸಗಲಲ್ಲಿಯೇ ವತ್ಸಲೆಯ ವಿವಾಹವು ಉಪೇಂದ್ರನೊಡನೆ ಕುಂತಳಪುರದಲ್ಲಿ ಜರುಗಿತು, ಲಗ್ನಸಮಾರಂಭದ ಎಲ್ಲಭಾರವನ್ನು ಚಂದ್ರಿಕಾ ಕಮಲಾಕಾಂತರೇ ವಹಿಸಿದ್ದರು.

✣ ✣ ✣ ✣ ✣ ✣ ✣ ✣

ಈಗ್ಗೆ ಇವರೀರ್ವರ ಲಗ್ನವಾಗಿ ಅನುಕ್ರಮವಾಗಿ ಮೂರು ನಾಲ್ಕು ವರುಷಗಳಾದವು, ಕಮಲಾಕಾಂತನು, ಕಮಲಾಕಾಂತರಾವ ದೇಸಾಯಿಯಾಗಿದ್ದಾನೆ, ಆದರೂ ಅವನು ಖಾದಿಹುಟ್ಟುವಳಿ ಅದರ ಪ್ರಚಾರಕಾರ್ಯವನ್ನು ಬಿಟ್ಟಿಲ್ಲ. ಉಪೇಂದ್ರನನ್ನು ಅದರ ವ್ಯವಸ್ಥಾಪಕನನ್ನಾಗಿ ಮಾಡಿ, ಆಯವ್ಯಯದ ವ್ಯವಸ್ಥೆಯನ್ನು ತಾನು ನೋಡುತ್ತಲಿದ್ದಾನೆ. ಇವರೀರ್ವರಿಗೆ ಈರ್ವರ ಹೆಂಡರಂದಿರ ಸಹಾಯವೂ ಅದೆ.

ಪ್ರಿಯಬಾಂಧವರೇ! ಇದೆಲ್ಲ ಯಾತರ ಫಲವು?

ದುಡಿತದಫಲವು; ಆದುದರಿಂದ,

**“ ದುಡಿತವೇ ದುಡ್ಡಿನ ತಾಯಿ ಅಲ್ಲವೇ? ”**

———

# ಚಂದ್ರಹಾರ.



ಎಳೂವರಿ ಗಂಟೆಯ ಸುಮಾರಕ್ಕೆ, ಮಾಧವನು ಮನೆಗೆ ಬಂದು ಮುಟ್ಟಿದನು. ದಾರಿಯಲ್ಲಿ ಮಾಣಕಜಿಕಡೆಯಿಂದ ದೊರತ ಅವಾಚ್ಯ ಶಬ್ದ ಗಳಿಂದ ಅವನ ಮೋರೆಯು ಕಪ್ಪಿಟ್ಟಿತ್ತು. ಮನೆಗೆಬಂದವನೇ ಮೇಲುಪ್ಪರಿ ಗೆಯ ಮೇಲೆ ಹೋಗಿ ಅರಿವೆಗಳನ್ನು ತೆಗೆದಿಟ್ಟು ಕುರ್ಚಿಯಮೇಲೆ ಉಸ್ಸೆಂ ದು ಕುಳಿತುಕೊಂಡನು.

ರಮೆಯು ಚಹದಪಾತ್ರೆಯನ್ನು ಮೇಲೆ ತೆಗದುಕೊಂಡು ಬಂದಳು. ಈ ಹೊತ್ತು ಅವಳ ಮುಖಮುದ್ರೆಯು ಉದಾಸವಾಗಿ ಕಾಣುತ್ತಿತ್ತು. ಮು ಖವು ಮ್ಲಾನವಾಗಿತ್ತು. ಕಣ್ಣುಗಳು ದದ್ದರಿಸಿದಂತೆ ಕಾಣುತ್ತಿದ್ದವು. ಹೆಳ ಲನ್ನು ಹಾಕಿಕೊಳ್ಳದೆ ಇದ್ದುದರಿಂದ ಕೇಶಕಲಾಪವು ಅಸ್ತವ್ಯಸ್ತವಾಗಿದ್ದಿತ್ತು ಮಾಧವನು ಮೋರೆಯೆನ್ನೇ ನೊನೆಗುಹಿದನು; ಆದರೆ ಅವನಲ್ಲಿ ಹೆಂಡತಿ ನ್ನು ನೋಡುವ ಧೈರ್ಯವು ಮಾತ್ರ ಇದ್ದಿಲ್ಲ. ಅವನು ಕೈಯನ್ನು ಮುಂದ ಕ್ಕೆಚಾಚಿ ಚಹದ ಪಾತ್ರೆಯನ್ನು ತೆಗೆದುಕೊಂಡು ಅನುಮಾನಿಸುತ್ತ ಕುಡಿ ದುಬಿಟ್ಟನು. ಎಷ್ಟು ಹೊತ್ತಾದರೂ ಮಾಧವರಾಯರ ಮುಖದಿಂದ ಒಂದು ಶಬ್ದವೂ ಹೊರಡಲಿಲ್ಲ.

ಕಡೆಗೆ ರಮೆಯು ಪತಿಯನ್ನುದ್ದೆಶಿಸಿ, "ನಿನ್ನಿನದಿವಸ ಮನೆಗೆ ಬ ರಲಿಕ್ಕೆ ತಡವಾಗುವದೆಂದು ಬರೆದುತಿಳಿಸೋಣವಾಗಿತ್ತು. ಆದರೆರಾತ್ರಿಯೂ ಕೆಬರಲಿಲ್ಲ? ರಾಮಚಂದ್ರ ರಾಯರಲ್ಲಿ ಏನಾದರೂ ವಿಶೇಷವಿತ್ತೇನು?"

ಮನೆಗೆ ಬರುತಲೆ ಇಂಥಪ್ರಶ್ನವು ಉಪಸ್ಥಿತವಾಗುವದೆಂದು ಮಾಧ ವನು ಮೊದಲೇ ಉಹಿಸಿದ್ದನು. ಆದರೆ ಅದಕ್ಕೆ ಉತ್ತರ ಏನುಕೊಡಬೇಕೆಂ ಬುದು ಇದುವರೆಗೂ ಅವನಿಗೆ ತೋಚಿದ್ದಿಲ್ಲ, ಕಡೆಗೆ ಏನಾದರೂ ಉತ್ತರ ವನ್ನು ಕೊಡಲೇ ಬೇಕಾಗುವದು ಎಂದು ವಿಚಾರಮಾಡುತ್ತ,

"ನಿನ್ನೆ! ಹೌದು, ಅವರಮನೆಯಲ್ಲಿ ಗಾಯನವಿತ್ತು.

ರಮೆ— ಇದೇನುಚಂದ! ಮೊನ್ನೆ ಚಾಕರಿ ಹೋದದಂದಿನಿಂದ ಎರಡ ನೆಯುವರ ಮನೆಗೆ ಗಾಯನಕ್ಕೆ ಹೋಗುವದಿಲ್ಲ, ಇದಲ್ಲದೆ ಶರೆಯನ್ನಂತೂ ಮುಟ್ಟುವದಿಲ್ಲವೆಂದು ತಾವೇ ಅಂದಿದ್ದಿರಿ, ಅದರೆಪುನಃ ನಿನ್ನೆಯಾಕೆ ಹೋಗಿದ್ದಿರಿ? ಇದರಂತೆ ನಡಿಯಿತೆಂದರೆ ಇನ್ನು ಮೂರುನಾಲ್ಕು ದಿನಗಳವರೆಗೆ ನಡೆದೀತು. ಮುಂದೆ ಹೇಗೆ ನಡೆಯುಬೇಕು? ಉಪವಾಸವೇಸರಿ! ಅಲ್ಲವೆ? ಈ ಹೊತ್ತು ಸಾಹುಕಾರ ಭೀಮರಾಯರ ಕಡೆಯಿಂದ ಕಸೂತೀ ಕೂಲಿಯ ರೂಪಾಯಿಗಳು ಬರುವವು, ಅವುಗಳನಷ್ಟೇ ಖರ್ಚುಮಾಡಿ ಮನೆಯೊಳಗೆ ಇಲ್ಲದ ಧಾನ್ಯಗಳನ್ನು ತರಬೇಕು, ಇಲ್ಲದಿದ್ದರೆ ಅವನ್ನಷ್ಟು ಆ ಮಾಣಿಕಜಿಯ ಹೆಣಕ್ಕೆ"—

ಮಾಧವನು ಪತ್ನಿಯಾಡುತ್ತಿದ್ದ ಮಾತುಗಳನ್ನು ಶಾಂತ ಚಿತ್ತದಿಂದ ಕೇಳುತ್ತ ಕುಳಿತುಕೊಂಡಿದ್ದನು. ಮತ್ತು ಅವನು ಕೇಳಲೇಬೇಕಾಗಿತ್ತು.

ಪತ್ನಿಯು ನಿರಾಶಾಜನಕ ಶಬ್ದಗಳಿಂದ ಮಾಣಿಕಜಿಯ ಹೆಸರನ್ನು ಎತ್ತಿದಕೂಡಲೆ ಸಂತಾಪಾತಿಶಯದಿಂದ ಅವನಿಗೆ ತಲೆನೋವುಎದ್ದಿತು. ರಾತ್ರಿಯ ಮದಿರೆಯ ಶೇವನೆಯಿಂದ ಮೊದಲೇಅವನ ಅಂಗಾಂಗವು ಲಿಕಿಲಿಕಿಯಾಗಿತ್ತು, ಇದಲ್ಲದೆ ದಾರಿಯಲ್ಲಿ ಮಾತಾಡಿದ ಮಾಣಕಜಿಯ ಕಟುಶಬ್ದಗಳು, ಇವೆಲ್ಲ ನೆನಪಿಗೆ ಬರುತಲೆ ಅವನಿಗೆ ಒಂದು ಪ್ರಕಾರದ ಅಸಹ್ಯವೇದನೆಯಾಗ ಹತ್ತಿತು. ಮಾಧವನು ತಟ್ಟನೆ ಕುರ್ಚಿಯಿಂದೆದ್ದು ಹತ್ತರ ಇಟ್ಟಿದ್ದ ಹಾಸಿಗೆಯ ಸುರುಳಿಯಮೇಲೆ ತಲೆಯನಿಟ್ಟು ಬಿದ್ದುಕೊಂಡನು.

ತಾನುಮಾತಾಡಿದ ಮಾತಿನ ಕೊನೆಯಶಬ್ದಗಳು, ತನ್ನ ಪತಿಯಮನಸ್ಸಿಗೆ ವೇದನೆ ಮಾಡಿರುವ ವೆಂದು ತಿಳಿದು, ರಮೆಗೆ ಬಹಳೇ ಅಸಮಾಧಾನವಾಯಿತು. ಆವಳು ಅವನ ಹತ್ತರವೇ ಕುಳಿತು ಮೈಮೇಲೆ ಕೈಯಾಡಿಸುತ್ತ "ಏಕೆ ಏನಾಗಿದೆ ತಲೆಗಿಲೆ ನೋಯುತ್ತಿದೆಯೋ ಹೇಗೆ? ಸ್ವಲ್ಪ ಶುಂಠಿಯನ್ನಾದರೂ ತರುತ್ತೇನೆ" ಎಂದಳು.

ಮಾಧವ— ಬೇಡ! ಏನೂಬೇಡ ನನಗೆ ತುಸು ಸಂಕಟವಾದಂತಾಗುತ್ತದೆ, ಹೋಗು, ನೀನುತೀವ್ರ ಅಡಿಗೆಮಾಡು ಏಳು. ನಾನು ಹೀಗೆಯೆ

ಸ್ವಲ್ಪ ಅಡ್ಡಾಗುತ್ತೇನೆ. ತುಸು ಹೊತ್ತಿನಮೇಲೆ ಸಮಾಧಾನ ವೆನಿಸುತಲೆ ಕೆಳಗೆ ಸ್ನಾನಕ್ಕೆ ಬರುವೆನು.

ರಮೆ— ಒಳ್ಳೇದು, ನಾನು ಕೆಳಗೆ ಹೋಗುತ್ತೇನೆ; ಆದರೆ ಹಾಗೆಯೇ ನೆಲದಮೇಲೆ ಮಲಗುವದಕ್ಕಿಂತ, ಹಾಸಿಗೆ ಹಾಸಿಕೊಂಡು ಮಲಗುವದು ನೆಟ್ಟಗಲ್ಲವೇ.

ಮಾಧವ— ನನಗೇ ಏನೂಬೇಡ ಹೋಗು ಸಲ್ಪ ಆಯಾಸವು ಕಡಿಮೆ ಯಾಗುತಲೆ ಕೆಳಗೆ ಬರುವೆನು.

ರಮೆಯು ಹೆಚ್ಚಿಗೆ ಮಾತಾಡಲಿಲ್ಲ. ಪತಿಯು ನಿನ್ನನದಿವಸ ಮನಬಂದಂತೆ ಸುರಾಪಾನ ಮಾಡಿರಬಹುದೆಂದು ತಿಳಿದು, ಕೆಳಗೆಬಂದು, ತನ್ನ ನಿತ್ಯದ ಕೆಲಸಗಳಲ್ಲಿ ತೊಡಗಿದಳು. ಇತ್ತ ಮಾಧವನ ಮನಸ್ಥಿತಿ ಕ್ಷಣಕ್ಷಣಕ್ಕೆ ಬದಲಾಗ ಹತ್ತಿತು. ಈ ಹೊತ್ತು ತಾನು ಏನಾದರು ವ್ಯವಸ್ಥೆಮಾಡದೆ ಹೋದರೆ, ಮುಂದೆ, ತನ್ನಗತಿಯು, ನೆಟ್ಟಗಾಗಲಕ್ಕಿಲ್ಲ ವೆನಿಸಹತ್ತಿತು. ಆದರೆ ಮುಂದೆ ಏನು ಮಾಡಬೇಕೆನ್ನುವದು, ಅವನಿಗೆ ತೋಚದಾಯಿತು. ಕಡೆಗೆ ರಾವ ಬಾಹದ್ದೂರ ಧರ್ಮವೀರ ಪ್ರತಾಪರಾಯರ ಹತ್ತರ ಹೋಗಿ ಅವರ ಕೈಕಾಲು ಹಿಡಿದುಕೊಂಡು ಕಳೆದುಹೋದ ಚಾಕರಿ ಪುನಃ ದೊರಕೊವ ಬಗ್ಗೆ ಬಿನ್ನಹ ಮಾಡಿಕೊಂಡರೆ ಸ್ಥಳವನ್ನು ಕೊಟ್ಟರೂ ಕೊಡಬಹುದೆಂದು ಮನಸ್ಸಿಗೆ ಸಮಾಧಾನವನ್ನು ಹಚ್ಚಿಕೊಂಡನು. ಆದರೆ ಅದು ಕ್ಷಣಿಕ ಸಮಾಧಾನವಾಗಿತ್ತು.

ಏಕಂದರೆ ಚಾಕರಿ ದೊರೆತ ಮೇಲೆಯಾದರೂ, ಮಾಣಕಜಿಯ ವ್ಯವಸ್ಥೆ ಮಾಡುವಬಗೆ ಆವುದು? ಒಂದುವೇಳೆ ಒಂದೆರಡು ದಿವಸಗಳಲ್ಲಿ, ಅವನಿಗೆ ಸಲ್ಲಬಹುದಾದ ರೂಪಾಯಿಗಳೊಳಗೆ ನೂರು ರೂಪಾಯಿಗಳನ್ನಾದರೂ ಸಲ್ಲಿಸದೆ ಹೋದರೆ, ಏನಾದರೂ ಕಠಿಣ ಪ್ರಸಂಗತರುವನು. ಮತ್ತು ಈ ನೂರು ರೂಪಾಯಿಗಳನ್ನಾದರೂ ಎಲ್ಲಿಂದ ಕೊಡುವದು ತಂದು ? ಇವೆಲ್ಲ ವಿಷಯಗಳು ಅವನ ಸ್ಮರಣಪಥಕ್ಕೆ ಬರುತ್ತಲೆ, ಆವನಿಗೆ ಏನೂ ತಿಳಿಯದಂತಾಯಿತು. ಒಂದುವೇಳೆ ಹೆಂಡತಿಯು, ಕೊಡುವದಿಲ್ಲೆಂದು ಹೇಳಿದ,

ಚಂದ್ರಹಾರವನ್ನು ಪುನಃಕೊಡು ಎಂದು ಕೇಳುವದರಲ್ಲಿ ಅರ್ಥವಿಲ್ಲ; ಆದರೂ ಇನ್ನೊಮ್ಮೆ ಪ್ರಯತ್ನಮಾಡಿ ನೋಡೋಣ ವೆನ್ನುತ್ತ, ಕೂಡಲೇ ಎದ್ದು, ಹೆಂಡತಿಯು ಅಡಿಗೆಮಾಡುವ ಸ್ಥಳಕ್ಕೆಬಂದು,

ಮಾಧವ— ಇದುನೋಡು! ಈ ಚಂದ್ರಹಾರವನ್ನು ನನಗೆ ಕೊಡುವೆಯೋ ಹೇಗೆ? ಇಷ್ಟುದಿವಸದಮೇಲೆ ಪುನಃ ಚಂದ್ರಹಾರವು ಪತಿಯ ದೃಷ್ಟಿಗೆ ಬಿದ್ದದ್ದು ರಮೆಗೆ ಸಖೇದ ಆಶ್ಚರ್ಯವಾಯಿತು.

ರಮಾ— ಇದೇನು? ಪುನಃಚಂದ್ರಹಾರದ ದಶೆಯಿಂದ ಕೇಳುವಿರಲ್ಲ ನನ್ನ ತವರು ಮನೆಯವರುಕೊಟ್ಟ ಚಂದ್ರಹಾರವನ್ನು ನಾನು ಕೊಡುವದಿಲ್ಲೆಂಬದಾಗಿ, ಒಂದುಸಾರೆ ಹೇಳಿರುವೆನಲ್ಲವೇ? ಈಹೊತ್ತಿಗೆ ಎಂಟುವರ್ಷಗಳಾದವು, ನನ್ನತಂದೆಯ ಪ್ರತ್ಯಕ್ಷ ದರ್ಶನವಂತೂ ಇಲ್ಲ. ಕಡೆಗೆ ಆತನು ಕೊಟ್ಟ ಚಂದ್ರಹಾರವು, ಗುರ್ತಿಗಾಗಿಸಹ ಇರಬಾರದೇ? ಮತ್ತು ಇದೊಂದು ಚಂದ್ರಹಾರದಿಂದಾಗುವ ದಾದರೂ ಏನು? ಎಲ್ಲ ವಸ್ತುಗಳು ಹೋದಕಡೆಗೆ ಇದಾದರೂ ಹೋಗುವದು, ಕಡೆಯವಾಕ್ಯವು ಮಾಧವನ ಮನಸ್ಸಿಗೆ ಬಹಳೇ ವ್ಯಥೆಯನ್ನುಂಟು ಮಾಡಿತು. ಅವನು ಮನಸಿಲ್ಲಿಯೇ ಚಡಪಡಿಸುತ್ತ ಬಂದ ಸಿಟ್ಟನ್ನು ನುಂಗಿಕೊಂಡು, ಈ ಹೊತ್ತಿನ ದುರ್ಧರ ಪ್ರಸಂಗವು ಬೇರೆ ತರದ್ದಿದೆ. ನೂರುರೂಪಾಯಿಗಳನ್ನು ನಾನು ಒಬ್ಬರಿಗೆ ಕೊಡಬೇಕಾಗಿದೆ. ಈದಿನ ಅಥವಾ ನಾಳೆಕೊಡಲೇಬೇಕು. ಇಲ್ಲವಾದರೆ"—

ಮಾಣಕಜಿಯ ಮುಂದೆಮಾಡಿದ ಗೊತ್ತುವಳಿಯು ರಮೆಗೆ ತಿಲಮಾತ್ರವೂ ಗೊತ್ತಿದ್ದಿಲ್ಲ ಮಾಧವನು ತನ್ನ ಹತ್ತರವಿದ್ದ ಚಂದ್ರಹಾರವನ್ನು ಎಳೆದುಕೊಳ್ಳುವದಕ್ಕಾಗಿ, ನಾನಾಪ್ರಕಾರದ ಕಾರಣಗಳನ್ನು ಹೇಳುತ್ತಿದ್ದನು. ಅದರೊಳಗಿನ ದೊಂದು ಇದಾದರೂ ಇರಬಹುದೆಂದು, ಅವಳುಕಲ್ಪಿಸಿದ್ದು, ಆಶ್ಚರ್ಯವಲ್ಲ.

ರಮಾ— "ಮನೆಗೆಬೆಂಕಿ ಹತ್ತಿದಾಗ ಬಾವೀಕಡಿಯಲಿಕ್ಕೆ ಹೋದರು" ಎಂಬಗಾದಿಯಂತೆ, ನೀವು ಯೋಚಿಸಿದಯುಕ್ತಿಯು ಇರುತ್ತದೆ. ನೂರು ರೂಪಾಯಿಗಳನ್ನು ಈ ಹೊತ್ತು ನಾಳೆ ಇಷ್ಟರಲ್ಲೇ ಕೊಡುವದು ಇ

ದ್ದದ್ದು ಇಂದೇ ನೆನಪಾಗಿರಬಹುದಲ್ಲವೇ? ನಿನ್ನಿನರಾತ್ರಿ ಸೀರೆನೀರು ಉಡಿಯುವಕಾಲಕ್ಕೆ ಯಾರಿಗೆ ಏನು ಕೊಡಬೇಕೆಂಬುವದು ಹೇಗೆ ತಾನೆ ನೆನಪಾಗಬಹುದು. ಅದೇನು ಇಲ್ಲ. ನನ್ನ ತವರುಮನೆಯವರು ಕೊಟ್ಟ, ಚಂದ್ರಹಾರವು ತಮಗೆ ಸಿಗಲಿಕ್ಕಿಲ್ಲೆಂಬದಾಗಿ, ನಾನು ನಿರ್ಭಿಡೆಯಿಂದ ಹೇಳುತ್ತೇನೆ. ತಮ್ಮ ಮನಸ್ಸಿಗೆ ಬಂದಂತೆ ಮಾಡಿರಿ.

ರಮೆಯ ನಿರ್ಭಿಡೆಯ ಮಾತುಗಳು ಮಾಧವನ ಕ್ರೋಧಾಗ್ನಿಯನ್ನು ಹೆಚ್ಚಿಸಿದವು. ಅವನು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಮೈಮೇಲೆ ಬಂದು ಸುಟ್ಟಿತು ನಿನ್ನ ತವರುಮನೆಯ ವಾತ್ಸಲ್ಯವು! ನನ್ನಮೇಲೆ ಸೆರೆಮನೆಗೆ ಹೋಗುವ ದುರ್ಧರ ಪ್ರಸಂಗ ಒದಗಿದ್ದರೂ ಕೂಡ ನೀನು ನಿನ್ನ ತವರು ಮನೆಯವರು ಕೊಟ್ಟ ಚಂದ್ರಹಾರದ ಹಂಬಲವನ್ನು ಬಿಡಲೊಲ್ಲಿಯಲ್ಲವೇ ?

ತವರು ಮನೆಯ ವಿಷಯಕ್ಕೆ ಆಡಿದ ಅಭದ್ರ ಮಾತುಗಳು, ರಮೆಗೆ ರುಚಿಸಲಿಲ್ಲ. ಮಾಧವನ ಕೋಪವು ಈಹೊತ್ತು ಹೊಸದೆನ್ನುವ ಹಾಗಿದ್ದಿಲ್ಲ ತನ್ನ ತವರುಮನೆಯ ವಿಷಯದಲ್ಲಿ ಇಂಥ ಕಟುಭಾಷಣ ಗಳನ್ನಾಡಿದ್ದು ಕಂಡು ಅವಳು ಸಂತಪ್ತಳಾದಳು. ಕಂಪಿತಸ್ವರದಿಂದ,

ರಮೆಯು— ಇಕೋ ನೋಡಿರಿ ! ನಾನು ನಿಮ್ಮೆದುರಿಗೆ ನಿಂತಿದ್ದೇನೆ !! ಹೊಡೆಯಿರಿ ಬಡಿಯಿರಿ ಮನಸ್ಸಿಗೆ ಬಂದಂತೆ ನಡೆಯಿಸಿಕೊಳ್ಳಿರಿ. ಆದರೆ ನಡುನಡುವೆ ತವರುಮನೆಯ ಹೆಸರು ಮಾತ್ರ ತೆಗೆಯಬೇಡಿರಿ. ತವರು ಮನೆಯ ಹೆಸರು ತೆಗೆದರೆ ಮಾತ್ರ ನನಗೆ ಸರಿಬರುವದಿಲ್ಲ. ಅವರನ್ನು ಬಯ್ಯುವದಕ್ಕೆ, ಅವರೇನುನಿಮಗೆ ಅಂಥವಿಷವನ್ನೆರದಿರುವರು? ಪ್ರೇಮದಿಂದ ಮಗಳು ಇಟ್ಟುಕೊಳ್ಳಲೆಂದು ಕೊಟ್ಟ ಚಂದ್ರಹಾರನನ್ನು ನಿಮಗೆ ಕೊಡಲಿಲ್ಲೆಂದು ಅವರನ್ನು ಬಯ್ಯುವಿರೋ ? ನನ್ನನ್ನು ತಮಗೆ ಕೊಡುವಕಾಲಕ್ಕೆ ಸೆರೆಕುಡಿಯುವದಕ್ಕೆ ಹಣವನ್ನು ಪೂರೈಸುವೆವೆಂದು ಅವರೇನು ಗುತ್ತಿಗೆ ಹೊತ್ತಿಲ್ಲ ತಿಳಿಯಿತೇ?

ರಮೆಯು ಸಿಟ್ಟಿನ ಭಾರವು ಕಡಿಮೆಯಾಗಿ, ಅದು ಅಶ್ರುರೂಪದಿಂದ ಹೊರಬೀಳ ಹತ್ತಿತು. ಆಮೇಲೆ ಮಾಧವರಾಯರು ಸಿಟ್ಟಿನ ಆವೇಶದಲ್ಲಿ ಮೇಲುಪ್ಪರಿಗೆಯ ಮೇಲೆಹೋಗಿ, ಮನಸ್ಸಿನಲ್ಲಿ ಸಮಾಧಾನ ವಿಲ್ಲದುದರಿಂದ ಆಗೋಡೆಯಿಂದ ಈಗೋಡೆಗೆ, ಈಗೋಡೆಯಿಂದ ಆಗೋಡೆಗೆ ಎಡತಾಕ ಹತ್ತಿದರು. ಚಂದ್ರಹಾರದ ವಿಷಯವು ಅದು ಸಿಗುವದು ಅಸಂಭವವೆಂದು ಮೊದಲೇ ಕಲ್ಪಿಸಿದಂತೆ ಯಾಯಿತು. ಆದರೆ ರಾವ ಬಹಾದ್ದೂರ ಧರ್ಮವೀರರ ಹತ್ತರ ಹೋಗಿ ಇನ್ನೊಮ್ಮೆಕಡೆಯ ಪ್ರಯತ್ನವಂತೂ ಮಾಡಬೇಕು. ಇದರ ಮೇಲೆ ಸೋಕ್ಷ ಮೋಕ್ಷ ಬೇಕಾದದ್ದು ಆಗಲಿ, ಒಂದು ವೇಳೆ ನಕಾರವು ದೊರೆಯುತೆಂದರೆ ಮಾತ್ರ ಹತ್ತು ಜನರಲ್ಲಿ ಮೋರೆತೋರಿಸದಂತಾಗುತ್ತದೆ.

✥ ✥ ✥ ✥ ✥ ✥ ✥ ✥

ಮಾಧವನಗ್ರಾಮವು ರಾಯಚೂರು, ಶಿಕ್ಷಣವು ಬಿ. ಕಾಮ್.ದವರೆಗೆ ಆಗಿತ್ತು. ಇಷ್ಟರಲ್ಲಿತಂದೆಯು ಅಕಸ್ಮಾತ್ ಹೃದಯಕ್ರಿಯ ಬಂದಾಗಿ ಸ್ವರ್ಗಸ್ಥನಾದನು. ಮನೆತನದಸ್ಥಿತಿ ಸಾಧಾರಣವಿದ್ದುದರಿಂದ, ತಂದೆಯು ಸಲ್ಪ ಸಾಲಸಂಬಂಧ ಮಾಡಿಯೇ ಇದ್ದನು. ಈ ಪೂರ್ವದಲ್ಲಿಯೇ ಮದುವೆ ಮಾಡಿದ್ದರಿಂದ, ಹೆಂಡತಿಯ ಸಂರಕ್ಷಣೆಯ ಭಾರವೊಂದು ಇವನಮೇಲೆಯೇ ಬಿದ್ದಿತ್ತು. ಆದ್ದರಿಂದಯಾವುದಾದರೊಂದುಕೆಲಸಕ್ಕೆಸೇರಿ ಸಂಬಳದೊರಿಕಿಸಬೇಕೆಂದುನಿಶ್ಚಯಿಸಿದನು ಪ್ರಯತ್ನ ನಡಿಸಲಾಗಿ ಯೋಗ್ಯತೆಮೇರೆಗೆ ನೂರಾಐವತ್ತು ರೂಪಾಯಿಯ ಸ್ಥಳವೂ ಸ್ವಗ್ರಾಮದಲ್ಲಿ ಸಿಕ್ಕಿತು.

ಆದರೆದಾರಿದ್ರ್ಯವುಮಾತ್ರ ಈ ನವದಂಪತಿಗಳ ಬೆನ್ನು ಬಿಡಲಿಲ್ಲ. ಮುಂದೆ ಕೆಲವು ದಿವಸಗಳಲ್ಲಿಯೇ ಒಬ್ಬ ದುರ್ವ್ಯಸನಿಯ ಸಹವಾಸದಿಂದ ಮಾಧವನಿಗೆ ಸುರಾಪಾನದ ವ್ಯಸನವು ಹತ್ತಿತು. ಮಾಧವನ ಹೆಂಡತಿಯಾದ ರಮೆಯ ತಂದೆ ವಸಂತರಾಯರು ಕಲಬುರ್ಗಿಯಲ್ಲಿಯ ಓರ್ವ ಸುಪ್ರಸಿದ್ಧ ಇಂಜನಿಯರರು. ಇವರಿಗೆ ರಮೆಯು ಒಬ್ಬಳೇಮಗಳು. ಚಿಕ್ಕಂದಿನಲ್ಲಿಯೇ ತಾಯಿಯು ತೀರಿದ್ದರಿಂದ ಮಗಳನ್ನು ವಸಂತರಾಯರು ಬಹು ಪ್ರೇಮದಿಂದ ಜೋಕೆ ಮಾಡಿದ್ದರು. ಆದುದರಿಂದ ಲಗ್ನವಾಗುವವರೆಗೆ ರಮೆಯು ತನ್ನ ತಂದೆಯ ಹತ್ತರವೇ ಇದ್ದಳು.

ತಂದೆಯಾದರೂ ಆಪರದೇಶಿಮಗಳಿಗೆ ಯಾವಪ್ರಕಾರದ ಕುಂದು ಕೊರತೆ ಬಾರದಂತೆ ಅಕ್ಕರತೆಯಿಂದ ಜೋಪಾನ ಮಾಡುತ್ತಿದ್ದನು. ಇದಲ್ಲದೆ ಅವಳಿಗೆ ಸ್ತ್ರೀಯರಿಗುಚಿತವಾದ ಶೀಕ್ಷಣವಾದರೂ ದೊರೆತಿತ್ತು. ಹೆಂಡತಿಯ ನಿಧನದ ನಂತರ ವಸಂತರಾಯರಿಗೆ ಎಷ್ಟೋಮಿತ್ರರು ಪುನಃಲಗ್ನ ಮಾಡಿಕೊಳ್ಳುವದಕ್ಕಾಗಿ ಬಲತ್ಕಾರ ಮಾಡಿದರು. ಅವರ ವಯಸ್ಸಾದರೂ ಬಹಳವಾಗಿದ್ದಿಲ್ಲ. ಬಹಳವಾದರೆ ಇಪ್ಪತ್ತೇಳು ಇಪ್ಪತ್ತೆಂಟು ವರ್ಷಗಳಾಗಿದ್ದವು. ಅವರಾದರೂ ಒಂದೆರಡುಸಾರೆ ಆಗುವದಕ್ಕೆ ಅನುಮತಿಯನ್ನಾದರೂ ಕೊಟ್ಟಿದ್ದರು, ಆದರೆ ಮಗಳಿಗೆ ಸುಖವಾಗಲಿಕ್ಕಿಲ್ಲೆಂದು ತಿಳಿದು ಮಗಳು ಅತ್ತಿಯ ಮನೆಗೆ ಹೋಗುವವರೆಗೆ ತಮ್ಮ ಲಗ್ನದ ವಿಷಯವನ್ನು ಬಿಟ್ಟು ಕೊಟ್ಟಿದ್ದರು.

ವೆಂಕಟ ರಾಯರೆಂಬ ವಸಂತರಾಯರ ಸಹಾಧ್ಯಾಯಿಗಳೊಬ್ಬರು ಇದ್ದರು. ಅವರ ಹದಿಮೂರು ಹದಿನಾಲ್ಕು ವರ್ಷದ ತಂಗಿಯೋರ್ವಳು ಮದುವಿಗಾಗಿದ್ದಳು. ತಂಗಿಯ ಲಗ್ನವಾಗುವದಕ್ಕೆ ವೆಂಕಟರಾಯರು ವಸಂತರಾಯರಿಗೆ ಒಂದೇಸವನೇ ಹೇಳಿಕಳುಹತ್ತಿದ್ದರು. ಇವರಾದರೂ ಆವಿಷಯವನ್ನು ಹಾಗೆಯೇ ಮುಂದಕ್ಕೆ ಹಾಕುತ್ತ ನಡೆದಿದ್ದರು.

ಮುಂದೆ ಸ್ವಲ್ಪ ದಿನಗಳಲ್ಲಿಯೇ ರಮೆಯ ಲಗ್ನವಾಗಿ ಆಕೆಯುತನ್ನ ಪತಿಯ ಗೃಹಕ್ಕೆ ಹೋದಳು. ಈಗ್ಗೆ ಲಗ್ನವಾಗಿ ಸುಮಾರು ೬, ೭, ವರ್ಷಗಳಾಗಿದ್ದವು. ಈ ಅವಧಿಯಲ್ಲಿ ಅವಳಿಗೆ ತನ್ನ ತವರುಮನೆಗೆ ಹೋಗುವ ಸುಯೋಗವು ಒಮ್ಮೆಯಾದರೂ ದೊರೆತಿದ್ದಿಲ್ಲ. ಪತಿಯದುರ್ವ್ಯಸನದ ಪರಮಾವಧಿಯು; ಇದಲ್ಲದೆ ಮೇಲಿಂದ ಮೇಲೆ ಆಗುವ ಸ್ಥಳಾಂತರ ಇವು ಅವಳನ್ನು ತವರು ಮನೆಗೆ ಹೋಗ ಗೊಡಲಿಲ್ಲ.

ರಮೆಯು ಬಹು ಪತಿ ಪರಾಯಣಳು. ಹೆಂಡತಿಯ ಪಾತಿವ್ರತ್ಯದ ದರ್ಪವು ಅವನನ್ನು ಆಗಿಂದಾಗ್ಗೆ ತೊಂದರೆ ಗೊಳಿಸುತ್ತಿತ್ತು. ಅವನು ಅವಳಿಗೆ ಕೆಲಮಟ್ಟಿಗೆ ಹೆದರುತ್ತಿದ್ದನು. ಇಲ್ಲದಿದ್ದರೆ ಇಷ್ಟುಹೊತ್ತಿಗೆ ಅವನಸ್ಥಿತಿಯು, ಹೇಳಹೆಸರಿಲ್ಲದಂತೆ ಆಗಿಹೋಗುತ್ತಿತ್ತು.

ಸದ್ಯಕ್ಕೆ ಭಾಗಾನಗರಿಯಲ್ಲಿ ರಾವಬಹದ್ದೂರ ಧರ್ಮವೀರ ಪ್ರತಾಪರಾವ ಇವರ ಆಫೀಸಿನಲ್ಲಿ, ಎರಡುನೂರು ರೂಪಾಯಿಯ ವೇತನವು ದೊರೆಯುತ್ತಿತ್ತು. ಈ ಊರಲ್ಲಂತೂ ಇವನ ವ್ಯಸನವು ಘನತೆಗೇರಿತ್ತು. ಇದಲ್ಲದೆ ವ್ಯಸನದ ಸಂಗಡ ಸಾಲವೂ ಹೆಚ್ಚಾಗ ಹತ್ತಿತು. ಮನಬಂದಂತೆ ವರ್ತಿಸುವ ದುರ್ವಿಚಾರಗಳೂ, ಸೋಮಾರಿಗಳೂ, ಆದ ಮಿತ್ರರ ಸಹವಾಸದಿಂದ ಇವನು ಕಚೇರಿಯಲ್ಲಿಯ ಕೆಲಸವನ್ನು ಲಕ್ಷ್ಯಪೂರ್ವಕ ಮಾಡುತ್ತಿದ್ದಿಲ್ಲ. ಕಡೆಗೆ, ನಿಮ್ಮ ದುರ್ವರ್ತನದಮೂಲಕ ನಿಮ್ಮನ್ನು ಕೆಲಸದಿಂದ ತೆಗೆದುಹಾಕಿರುತ್ತದೆಂಬದಾಗಿ ರಾವಬಹದ್ದೂರವರಕಡೆಯಿಂದ ಸೂಚನಾ ಪತ್ರಿಕೆಯು ಬರಲ್ಪಟ್ಟಿತು. '' ಸಾಲವನು ಕೊಂಬಾಗ ಹಾಲೋಗರುಂಡಂತೆ, ಸಾಲಿಗನು ಬಂದೆಳೆಯುವಾಗ ಕಿಬ್ಬದಿಯ ಕೀಲು ಮುರಿದಂತೆ '' ಎಂಬ ಸರ್ವಜ್ಞ ಕವಿಯ ಉಕ್ತಿಗನುಸರಿಸಿ, ಸಾಲಿಗರು ಮನೆಗೆ ಬರುತ್ತಲೆ ಮಾಧವನಿಗೆ ಅಸಹ್ಯ ವೇದನೆಯಾಗುತ್ತಿತ್ತು. ಈ ವೇಳೆಯಲ್ಲಿ ಮಾತ್ರ ಅವನಿಗೆ ತನ್ನ ನಿಜಪರಿಸ್ಥಿತಿಯ ತಿಳಿಯುತ್ತಿತ್ತು.

ಅವನು ತನ್ನ ಪತ್ನಿಯ ಎದುರಿಗೆ ಇನ್ನು ಮುಂದೆ ಮದಿರೆಯನ್ನು ಸೇವಿಸುವದಿಲ್ಲೆಂಬದಾಗಿ, ಪ್ರತಿಜ್ಞೆಯನ್ನೂ ಮಾಡಿದನು; ಆದರೆ ಇದೆಲ್ಲ ಶುನಕನ ಬ್ರಹ್ಮಜ್ಞಾನದಂತೆ ತುಸು ಹೊತ್ತಿನವರಿಗೆ ಇರುತ್ತಿತ್ತು. ಋಣವಿಮೋಚನೆಯ ಯುಕ್ತಿಯು ಸಾಧಿಸಿದಕೂಡಲೇ ಅವನ ಮೊದಲಿನ ಬ್ರಹ್ಮಜ್ಞಾನವು ಅಳಿದು ಹೋಗುತ್ತಿತ್ತು. ಮತ್ತು ವ್ಯಸನವು ಪುನಃ ಅವನನ್ನು ಆವರಿಸತ್ತಿತ್ತು. ಈ ಯುಕ್ತಿಎಂದರೆ ಋಣವೆಂಬ ಅಗ್ನಿ ಕುಂಡದಲ್ಲಿ ಹೆಂಡತಿಯ ವಸ್ತುಗಳನ್ನು ಆಹುತಿ ಕೊಡೋಣವೇಸರಿ. ಕಟ್ಟಕಡೆಗೆ ಹೆಂಡತಿಯ ಕೊರಳೊಳಗಿನ ಪವಿತ್ರ ಮಾಂಗಲ್ಯ ಹಾಗೂ ಅವಳ ತಂದೆಯುಕೊಟ್ಟ ಚಂದ್ರಹಾರ ಇವುಗಳ ಹೊರ್ತಾಗಿ ಅವರ ಹತ್ತರ ಏನೂ ಇದ್ದಿಲ್ಲ. ಮಾಧವನು ಚಂದ್ರಹಾರದ ಪ್ರಾಪ್ತಿಗಾಗಿ ವಿಶ್ವಪ್ರಯತ್ನಮಾಡಿ ಕಡೆಗೆ ನಿರಾಶೆಪಟ್ಟನು.

ಮುನ್ನಿಣದಿವಸ ರಾಮಚಂದ್ರರಾಯರ ಮನೆಯಲ್ಲಿ ಒಬ್ಬ ಪ್ರಸಿದ್ಧ ವಾರಾಂಗನೆಯುಗಾಯನವಿತ್ತೆಂದು ಮಾಧವನು ಅತ್ತಕಡೆಗೆ ಹೋಗಿದ್ದನು

" ನನಗೆ ಮನೆಗೆಬರಲಿಕ್ಕೆ ತಡವಾಗುವದು, ನೀನು ಊಟ ಉಡಿಗೆಗಳನ್ನು ತೀರಿಸಿಕೋ " ಎಂಬದಾಗಿ ಮಾಧವನು ತನ್ನ ಹೆಂಡತಿಗೆ ಚೀಟಿಯನ್ನೇನೋ ಕಳುಹಿದ್ದನು; ಆದರೆ ವಾರಾಂಗನೆಯ ಗಾಯನಹಾಗೂ ಮದಿರಾದೇವಿಯ ಸುಪ್ರಸನ್ನತೆಯ ಮುಂದೆ ಅವನಿಗೆ ಮನೆಯ ವಿಷಯಕ್ಕೆ ಎಚ್ಚರಿಕೆಯು ಉಳಿಯಲಿಲ್ಲ ಇದಲ್ಲದೆ ಹೊತ್ತಾದರೂ ಬಹಳವಾಗಿತ್ತು. ಆದುದರಿಂದ ಇಡೀ ರಾತ್ರಿಯನ್ನು ಅಲ್ಲಿಯೇ ಕಳೆದನು.

ಮುಂಜಾನೆ ಶರೆಯಅಮಲು ಇಳಿಯುತಲೆ, ಮನೆಯ ಹಾದೀ ಹಿಡಿದನು. ಸ್ವಗೃಹಕ್ಕೆ ತೆರಳುವ ದಾರಿಯಲ್ಲಿ ಮಾಣಿಕಜಿ ಎಂಬ ಅವನ ಸಾವುಕಾರನ ದರ್ಶನವಾಯಿತು. ಅವನನ್ನು ನೋಡುತಲೆ ಮಾಧವನಿಗೆ ಬಲವಾದ ಆಘಾತವಾಗಿ ಆಕಾಶ ಕೊಡ್ಲಿಯೇ ಬಿದ್ದಂತಾಯಿತು.

ಈ ಹೊತ್ತಿನ ಮಾಣಿಕಜಿಯ ವರ್ತನವು ಅವನಕಡೆಗೆ ಬೇರೆತರದ್ದಾಗಿ ಪರಿಣಮಿಸುತ್ತಿತ್ತು

ಮಾಣಿಕಜಿ— ಏನು! ರಾಯರೇ!! ತಮ್ಮಮನೆಗೆ ಹತ್ತುಹದಿನೈದು ಸಾರೆ ಬಂದರೂ ತಮ್ಮ ದರ್ಶನ ಲಾಭವಾಗಲಿಲ್ಲ, ದಾರಿಯಲ್ಲಿಸಹ ಮೋರೆ ತಪ್ಪಿಸಿಕೊಂಡು ಅಡ್ಡಾಡುವಿರಿ ಇದರ ಅರ್ಥವೇನು? ಇನ್ನುಮೇಲೆ ಇದನ್ನೆಲ್ಲ ಕೇಳುವಹಾಗಿಲ್ಲ. ಇನ್ನೆರಡು ದಿನಗಳಲ್ಲಿ ಎರಡುನೂರು ರೂಪಾಯಿಗಳೊಳಗೆ ಒಂದು ನೂರು ರೂಪಾಯಿಗಳನ್ನಾದರೂ ಕೊಡಲೇ ಬೇಕು; ಇಲ್ಲದೆ ಹೋದರೆ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ.

ಮಾಣಕಜಿಯ ಕರ್ಕಶಧ್ವನಿಗೆ ರಾಯರ ಎದೆಯುಬಿಚ್ಚಿನೀರಾಯಿತು ಇನ್ನು ದಾರಿಯಲ್ಲಿ ಸುಮ್ಮನೆ ಜಗಳಾಡುವದು ನೆಟ್ಟಗಲ್ಲವೆಂದು ತಿಳಿದು,

ಮಾಧವನು— " ಸೆಟಜಿಯವರೇ ನಾಳಿನದಿನ ಖಂಡಿತವಾಗಿ ತಂದುಕೊಡುವೆನು. " ಅನ್ನುತ್ತ ಮೋರೆಯನ್ನು ತೆಗ್ಗಿಸಿಕೊಂಡು ಮುಂದಕ್ಕೆ ಸಾಗಹತ್ತಿದನು. ಬರಬರುತ್ತ ಅವನ ತಲೆಯಲ್ಲಿ ಇದೇವಿಚಾರಗಳು ನಡೆಯ ಹತ್ತಿದವು. ಎತ್ತನೋಡಿದತ್ತೆಲ್ಲ ಸಾಲಿಗರೇ ಇದ್ದು ನಾಳಿದಿನ ನೂರು

ರೂಪಾಯಿಗಳನ್ನು ಹೇಗೆ ದೊರಕಿಸಬೇಕು, ಇನ್ನುಮುಂದೆ ಒಬ್ಬರೂಸಹ ಒಂದುಪೈ ಕೊಡುವದಿಲ್ಲ; ಆದುದರಿಂದ ಏನು ಮಾಡಬೇಕು, ಇದೇವಿಚಾರದಲ್ಲಿ ಅಂತೂ ಇಂತು ಮನೆಗೆ ಬಂದು ಮುಟ್ಟಿದನು ಮುಂದೆ ವರ್ಣಿಸಿದ ಸಂಗತಿಯನ್ನು ಮೊದಲೇ ಹೇಳಿಬಿಟ್ಟಿದೆ.

✣ ✣ ✣ ✣ ✣ ✣ ✣ ✣

ಚಂದ್ರಹಾರದ ವಿಷಯಕ್ಕಂತೂ ಮೊದಲೇ ನಕಾರ ಶಬ್ದಗಳು ಹೊರಬಿದ್ದಿದ್ದವು. ಇನ್ನು ಚಾಕರಿಯ ದಶೆಯಿಂದ ಏನಾಗುವದೋ ನೋಡೋಣ ವೆನ್ನುತ್ತ, ಮಾಧವರಾಯನು ಒಂದುಸಾರೆ ಧರ್ಮವೀರ ಪ್ರತಾಪರಾಯನನ್ನು ಕೇಳಿಯೇ ತೀರಬೇಕೆಂದು ವಿಚಾರಮಾಡಿ ಬಟ್ಟೆಬರೆಗಳನ್ನು ಹಾಕಿಕೊಂಡು ಮನೆಯಿಂದ ಹೊರಟನು.

ಪ್ರತಾಪರಾಯರ ಮನಿಯು ಸಮೀಪಕ್ಕೆ ಬಂದಹಾಗೆಲ್ಲ ಮಾಧವನ ಕಾಲುಗಳು ನಿರಾಶೆಯಿಂದ ಹಿಂದಕ್ಕೆಳಿಯ ಹತ್ತಿದವು. " ರಾವಬಹದ್ದೂರರವರು ತನ್ನ ಕೂಡ ನೆಟ್ಟಗೆ ಮಾತಾಡುವರೋ ಇಲ್ಲವೋ? ಇದಲ್ಲದೆ ತನ್ನ ಬೇಡಿಕೆಯನ್ನು ಶಾಂತ ಚಿತ್ತದಿಂದ ಕೇಳುವರೋಇಲ್ಲವೋ? ಛೇ ! ಮುದಕನು ಬಹು ಕಠಿಣ ಹೃದಯನು ಅವನು ತನ್ನ ಹೇಳುವಿಕೆಯನ್ನು ಕೇಳಲಿಕ್ಕಿಲ್ಲ, ಆದರೆ ಮಾಡಬೇಕೇನು ?

ಇವೇ ಮೊದಲಾದ ತರ್ಕ ವಿತರ್ಕ ಮಾಡುತ್ತ, ಹಾಗೂ ಹೀಗೂ ಮಾಧವನು ತಲೆ ಬಾಗಿಲೊಳಗೆ ಪ್ರವೇಶಮಾಡಿದನು. ಮುಂದೆ ಪಾವಟಿಗೆಗಳನ್ನು ಹತ್ತಿ ಸಭಾಗೃಹದಲ್ಲಿ ಹೋದನು. ಸಭಾಗೃಹಕ್ಕೆ ಹೊಂದಿ ಅವರದು ಒಂದು ಸ್ವತಂತ್ರ ಕೋಣೆಯು ಇತ್ತು. ಮಾಧವನು ಮೆಲ್ಲಗೆ ಕೋಣಿಯೊಳಗೆ ಮೋರೆ ಚಾಚಿದನು, ಪ್ರತಾಪರಾಯರು ಅಡ್ಡಾಡಿ ಬಂದು ಮಂಚದಮೇಲೆ ಅದೇ ಅಡ್ಡಾಗಿದ್ದರು. ಅವರ ಮುಖಮುದ್ರೆಯು ವಿಕಸಿತವಾಗಿ ಕಾಣುತ್ತಿತ್ತು. ಮಾಧವನು ಅಂಜುತ್ತ ಅಂಜುತ್ತ ಒಳಗೆ ಪ್ರವೇಶಿಸಿದನು ಆದರೆ ದುರ್ದೈವವು, ಅವನ ಬೆನ್ನು ಬಿಡಲಿಲ್ಲ, ಏಕಂದರೆ ಮಾಧವನ ಮುಖಶ್ರೀಯನ್ನು ನೋಡಿದ ಕೂಡಲೆ ಅವರ ಮುಖಚರ್ಯವೇ ಬೇರೆಯಾಯಿ

ತು, ಕಣ್ಣುಗಳು ಕೆಂಪಾದವು. ಆದರೂ ಶಾಂತವನ್ನುತಾಳಿ ತಿರಸ್ಕಾರಯುಕ್ತ ಸ್ವರದಿಂದ,

"ಏನು ! ಮಾಧವರಾಯರೇ ! ತಮ್ಮ ಮದಿರಾದೇವಿಯ ಪೂಜೆಯು ಹೇಗೆ ಸಾಗಿದೆ ? ಏಕೆ ಇಲ್ಲವೇ? ಶನಿವಾರ ರಾತ್ರಿ ರಾಮಚಂದ್ರರಾಯರ ಮನೆಗೆ ಗಣಿಕೆಯ ಗಾಯನವನ್ನು ಕೇಳಲಿಕ್ಕೆಹೋದವರು, ಹೀಗೆಯೇ ಏನೋ ಅನ್ನುತ್ತಿದರು ಇಷ್ಟರಲ್ಲಿ ಏನೋ ನೆನಪಾಗುತಲೆ, ಪುನಃ- ಏಲೋಗೃಹಸ್ಥನೆ ಮನೆಯಲ್ಲಿ ಹೊತ್ತಿಗೆ ಸರಿಯಾಗಿ ಅನ್ನವನ್ನು ಸಹಕಾಣುವದಿಲ್ಲ. ಇಷ್ಟಾದರೂ ನಿನ್ನ ದುಶ್ಚಟವು ಕಡಿಮೆಯಾಗಿಲ್ಲವೇ ? ಸುಮ್ಮನೆ ತಿರುಗಾಡಿ ಕಾಲುದಾವತಿಯನ್ನು ಮಾಡಿಕೊಳ್ಳಬೇಡ. ನನ್ನ ಕಚೇರಿಯಲ್ಲಿ ನಿನಗೆ ಚಾಕರಿಯು ಸರ್ವಥಾ ಸಿಗಲಾರದು." ಎಂದು ಹೇಳಿ ಮೋರೆ ತಿರುವಿ ಮಲಗಿಕೊಂಡರು.

ಮುಗಿಯಿತು. ಮಾಧವರಾಯರ ಮಹಾತ್ವಾಕಾಂಕ್ಷೆಯು ನಿಷ್ಫಲವಾಯಿತು. ಕೆಲಸದ ವಿಷಯಕ್ಕೆ ನಿರಾಶನಾದಮೇಲೆ ಅವನಿಗೆ ತನ್ನ ಇರುವಿಕೆಯು ಬಹು ಬೇಸರವೆನಿಸಿತು."ಇನ್ನುಮೇಲೆ ಈ ಮುದಿಹದ್ದಿನ ಮುಖಾವಲೋಕನವನ್ನು ಎಂದಿಗೂ ಮಾಡುವದಿಲ್ಲ" ವೆಂದು, ಮನಸ್ಸಿನಲ್ಲಿ ಒಟಗುಟ್ಟುತ್ತಾ ಬಂದಹಾದಿಗೆ ಸುಂಕವಿಲ್ಲ' ವೆಂಬಂತೆ ಮರಳಿ ಮನೆಯದಾರಿ ಹಿಡಿದನು. ತಿರುಗಿ ಸಭಾಗೃಹದಲ್ಲಿ ಬರುತ್ತಲೆ ಒಮ್ಮಿಂದೊಮ್ಮೆ ಅವನಚಿತ್ತವೃತ್ತಿಯು ಬೇರೆಯಾಯಿತು.

ವಾಚಕರೇ! ಅಂಥ ಯಾವಪದಾರ್ಥವು ಅವನ ದೃಷ್ಟಿಗೆ ಬಿದ್ದಿರಬಹುದು? ಮನೆಯೊಳಗಣ ಹೆಣ್ಣು ಹುಡುಗರು ಆಟಆಡುವ ವೇಳೆಯಲ್ಲಿ ಸಭಾಗೃಹದ ನಡುವೆ ಇಟ್ಟಿದ್ದ ದೊಡ್ಡಮೇಜಿನಮೇಲೆ ಪವನದ ಸರವನ್ನಿಟ್ಟು ಮರೆತು ಒಳಗೆ ಹೋಗಿದ್ದರು ಈಹೊತ್ತಿನಲ್ಲಿ ಸಭಾಗೃಹದಲ್ಲಿ ಯಾರೂ ಇದ್ದಿಲ್ಲ ಹೋಗ ಹೋಗುತ್ತ ಕೈಚಾಚಿ ಆಸರವನ್ನು ತೆಗೆದುಕೊಳ್ಳಬೇಕೆಂಬ ಪ್ರಭಲ ಇಚ್ಛೆಯು ಅವನನ್ನು ಆವರಿಸಿತು. ಮುದುಕನ ನಿರಾಶಾಜನಕ ಮಾತುಗಳು ತನ್ನ ಭವಿಷ್ಯಕಾಲದ ಬಿಡುಗಡೆಯೂ ನೆನಪಿಗೆ ಬಂದ 'ಕೂಡಲೆ ಅವನ ವಿವೇಕಬುದ್ಧಿಯು ನಷ್ಟವಾಯಿತು. ಎಲ್ಲಕಡೆಗೂ ದೃಷ್ಟಿಯನ್ನು

ತಿರುಗಿಸಿ, ಯಾರೂ ದೃಷ್ಟಿಗೆ ಬೀಳದುದನ್ನು ಕಂಡು ಮೇಜಿನ ಹತ್ತರ ಹೋಗಿ ಆ,ಸರವನ್ನು ತೆಗೆದುಕೊಂಡು ಕಿಸೆಯಲ್ಲಿ ಹಾಕಿಕೊಂಡು ಮೇಲಿಕ ರವಸ್ತ್ರವನ್ನಿರಿಸಿ ಮತ್ತೊಮ್ಮೆ ಎಲ್ಲಕಡೆಗೂ ನೋಡಿ ಸಪ್ಪಳವಾಗದಂತೆ ಮೆಲ್ಲಗೆ ಹೆಜ್ಜೆಯನ್ನಿಡುತ್ತ ಸಭಾಗೃಹದ ಹೊರಗೆಬಂದು ಮುಂದೆ ನಿಮಿಷಾರ್ಧದಲ್ಲಿ ಆಭವ್ಯ ಮನೆಯ ತಲೆಬಾಗಿಲ ಹೊರಗೆ ಬಂದನು. ಎಜಮಾನರಕೋಣೆಯೊಳಗಿಂದ ಹೊರಗೆ ಬರಬೇಕಾದರೆ ಸುಮಾರು ಒಂದೆರಡು ಮಿನೀಟುಗಳಷ್ಟೇ ಹತ್ತಿರಬಹುದು.

ನೋಡಿರಿ! ಮೊದಲಿನ ಮಾಧವರಾಯರಿಗೂ ಈಗಿನಮಾಧವರಾಯರಿಗೂ ಎಷ್ಟು ಸ್ಥಿತ್ಯಂತರವದೆ ಎಷ್ಟೇದುರ್ವ್ಯಸನಿ ಇದ್ದರೂ ಮಾಧವರಾಯನಲ್ಲಿ ಕಳವುಮಾಡುವಷ್ಟು ಯೋಗ್ಯತೆಯು ಬಂದಿದ್ದಿಲ್ಲ. ಆದರೆ ಒಂದೆರಡು ಮಿನೀಟುಗಳಲ್ಲಿ ಅವನು ಒಳ್ಳೆ ಎದೆಗಾರನಾದ ಕಳ್ಳನಾದನು. ಮನೆಯಹೊರಗೆ ಬಂದನಂತರ ಅವನಿಗೆ ಸ್ವಲ್ಪಹೊತ್ತಿನವರೆಗೆ ಮಾತ್ರ ಸಮಾಧಾನವೆನಿಸಿತು, ಆದರೆ ಅದು ಕ್ಷಣಿಕ, ಯಾಕಂದರೆ ಅವನ ಸದಸದ್ವಿವೇಕ ಬುದ್ಧಿಯು ಇನ್ನೂ, ಪೂರ್ಣ ಅಳಿದಿದ್ದಿಲ್ಲ. ಅವನ ಅಂತಃಕರುಣದಲ್ಲಿ ನಾನಾಪ್ರಕಾರದ ಕುಕಲ್ಪನೆಗಳು ಬರಹತ್ತಿದವು. ಅವನ ಮುಖಚರ್ಯವಂತೂ ತೀರ ಬದಲಾಯಿತು. ನೋಡುತಲೆ ಒಬ್ಬ ಕ್ರೂರಕರ್ಮಿಯ ಮುಖದಂತೆ ಭಾಸವಾಗಹತ್ತಿತು. ಎತ್ತ ಹೊರಟಿರುವೆನೆಂಬ ಅರಿವುಸಹ ಅವನಲ್ಲಿದ್ದಿಲ್ಲ ಕ್ಷಣಾರ್ಧದಲ್ಲಿ ಸುಮ್ಮನೆ ನಿಲ್ಲುತ್ತ ಕ್ಷಣಾರ್ಧದಲ್ಲಿ ಕಿಸೆಯಲ್ಲಿ ಕೈಯಾಕಿ ತನ್ನಷ್ಟಕ್ಕೆ ತಾನೇ ನಗುತ್ತ ಮುಂದಕ್ಕೆ ಸಾಗಿದನು. ಕಡೆಗೆ ತನ್ನಮಾರ್ಗವನ್ನು ಬದಲಾಯಿಸಿ ಕೆರೆಯಕಡೆಗೆ ಸಾಗಿದನು.

✣ ✣ ✣ ✣ ✣ ✣ ✣ ✣

ರಮೆಯು ಅಡಿಗೆಯನ್ನು ಮುಗಿಯಿಸಿಕೊಂಡು, ಮಾಧವನು ಕೆಳಗೆ ಬರುವದಾರಿಯನ್ನು ನೋಡುತ್ತ ಕುಳಿತುಕೊಂಡಿದ್ದಳು. ಹೊತ್ತಾದರೂ ಬಹಳವಾಗಿತ್ತು. ಮಾಧವನು ಸಿಟ್ಟಿನಭರದಲ್ಲಿ ಮೇಲೆಹೋದವನು, ಇದುವರೆಗೂ ಕೆಳಗೆ ಬರಲಿಲ್ಲ. ಬಾರದಿರುವದನ್ನುನೋಡಿ, ರಮೆಯು ಮೇಲೆಹೋಗಿ ನೋಡುತ್ತಾಳೆ. ಅಲ್ಲಿ ಮಾಧವನು ಇರಲಿಲ್ಲ. ಎತ್ತೋ ಹೊರಟು

ಹೋಗಿದ್ದನು ತನ್ನಮೇಲೆ ಸಿಟ್ಟಾಗಿ ಪತಿಯು ಉಪವಾಸವೇ ಎಲ್ಲಿಯೋ ಹೊರಟು ಹೋದದ್ದು ನೋಡಿ ಅವಳಿಗೆಬಹಳ ವಿಷಾದ ವೆನಿಸಿತು. ಊಟದ ಸಮಯದಲ್ಲಿ ಜಗಿಯುವ ಬದಲು ಊಟವಾದಮೇಲೆ ಸಮಾಧಾನದಿಂದ ತಿಳಿಯಹೇಳಿದ್ದರೆ ಒಳಿತಾಗುತ್ತಿತ್ತೆಂದು ಅವಳಿಗೆ ಅನಿಸ ಹತ್ತಿತು. ಆದರೆ ಮಾಡುವದೇನು? ಮಾಧವರಾಯನು ಎಲ್ಲಿಗೆ ಹೋದನು ಮತ್ತು ಯಾವಾಗಬರುವನು ಎಂಬಸಂಗತಿ ಆಕೆಗೆ ಗೊತ್ತಾಗುವಂತೆ ಇದ್ದಿಲ್ಲ. ಸಿಟ್ಟಿನ ಭರದಲ್ಲಿ ಒಂದುವೇಳೆ ಜೀವಕ್ಕೆ ಅಪಾಯಮಾಡಿ ಕೊಳ್ಳಲಿಕ್ಕಿಲ್ಲವಷ್ಟೇ ? ಇವೇಮುಂತಾದ ನಾನಾತರದ ಕುಕಲ್ಪನೆಗಳು ಬರಹತ್ತಿದವು. ಆಕೆಯ ಮೈನಡಗಿತು, ಅವಳು ಪುನಃ ಅಡಿಗೆಮನೆಗೆಹೋಗಿ ಎಲ್ಲ ಪದಾರ್ಥಗಳನ್ನು ಸುವ್ಯವಸ್ಥಿತವಾಗಿ ಮುಚ್ಚಿಟ್ಟು ಮೇಲುಪ್ಪರಿಗೆಯ ಮೇಲೆ ಹೋಗಿ, ಕಿಡಿಕಿಯೊಳಗೆ ಮೋರೆ ಹಾಕಿ ಪತಿಯುಬರುವ ಮಾರ್ಗವನ್ನು ನಿರೀಕ್ಷಿಸುತ್ತ ಕುಳಿತುಕೊಂಡಳು ಅವಳೇನು ಸ್ಥಿರವಾಗಿ ಕುಳಿತುಕೊಂಡಿದ್ದಳು, ಆದರೆ ಅವಳಮನಸ್ಸಿನಲ್ಲಿ ತಿಳಮಾತ್ರವೂ ಸಮಾಧಾನವಿದ್ದಿದ್ದಿಲ್ಲ ತನ್ನ ವರ್ತಮಾನ ಸ್ಥಿತಿ ಗತಿಯು ಸ್ಮರಣಪಥಕ್ಕೆ ಬರುತ್ತಲೆ ಅವಳ ಬುದ್ಧಿಯು ಭ್ರಂಶವಾಗುತ್ತಿತ್ತು. ಮನೆಯಲ್ಲಿ ಕಾಳು ಕಡಿಗಳು ಮುಗಿಯುತ್ತ ಬಂದದ್ದೊಂದು ಚಿಂತಿ ದುಡ್ಡು ಇಲ್ಲದ್ದು ಎರಡನೆಯ ಚಿಂತಿ, ಪತಿಯ ದುರ್ವ್ಯಸನವು ಎಲ್ಲಕ್ಕೂ ಹೆಚ್ಚಿನ ಚಿಂತೆ, ಹೀಗಾಗಿ ಅವಳು ಒಂದೇಸವನೇ ಅಳುತ್ತ ಕುಳಿತು ಕೊಂಡಳು. ಕಡೆಗೆ ಅವಳು ತನ್ನ ದುಃಖವೇಗವನ್ನು ಕಡಿಮೆ ಮಾಡಿಕೊಂಡು, ಭಾಗವತ ಪುಸ್ತಕವನ್ನು ತೆಗೆದುಕೊಂಡು ಓದುತ್ತ ಕುಳಿತು ಕೊಂಡಳು.

ಆದರೆ ಈಹೊತ್ತು ಪುಸ್ತಕದಲ್ಲಿ ಸ್ವಲ್ಪಾದರೂ ಲಕ್ಷ್ಯ ಹೋಗಲಿಲ್ಲ. ತಾಸು ಅಯಿತು, ಎರಡುತಾಸು ಆಯಿತು, ನಾಲ್ಕುತಾಸು ಆಯಿತು, ಎಂಟು ತಾಸು ಆಯಿತು. ಆದರೂ ಪತಿಯ ಸುಳುವೇ ಹತ್ತಲಿಲ್ಲ ಹೊತ್ತು ಮುಳುಗಿತು ಆದರೂ ಮಾಧವನು ಬರುವ ಚಿನ್ಹವೇ ತೋರಲಿಲ್ಲ. ಹಾಗೆ ಮನೆಯಲ್ಲಿ ದೀಪ ಹಚ್ಚಿದಳು. ರಾತ್ರಿ ಎಂಟು ಹೊಡೆಯಿತು. ಇಷ್ಟು ಹೊತ್ತಿನವರೆಗೆ ಅವಳು ವೇಳೆಯನ್ನು ಹೇಗೆ ಕಳೆದಿರಬಹುದು ?

ಇದನ್ನು ವಾಚಕರೇ ತರ್ಕಿಸಬಹುದು!

ಎಲ್ಲಿಗೆ ಹೋಗಬೇಕು ಯಾರಿಗೆ ಅಂಡೊಲಿಯಬೇಕು. ಇದು ಅವಳಿಗೆ

ತಿಳಿಯುದ ಹಾಗಾಗಿ ಬಹಳ ಗೊಂದಲದಲ್ಲಿ ಬಿದ್ದಳು. ಕಡೆಗೆ ರಾತ್ರಿ ಹತ್ತು ಗಂಟೆಯಾಯಿತು. ಆಗ್ಗೆ ಬಾಗಿಲ ಚಿಲಕ ಅಲ್ಲಾಡಿಸಿದ ಸಪ್ಪಳವು ಕೇಳಬಂತು. ರಮೆಯು ವಿಚಾರದೊಳಗಿಂದ ಗಡಿಬಿಡಿಸಿ ಎದ್ದು ಬಹಳವಾಡಿ ಪತಿರಾಜರೇ ಇರಬಹುದೆಂದು ಉಹಿಸಿದಳು. ಹಾಗೆಯೇ ಅವಸರದಿಂದ ಕೆಳಗೆಬಂದು, ಬಾಗಿಲ ತೆಗೆದು ನೋಡಲಾಗಿ ಅವಳ ತರ್ಕವು ನಿಜವಿದ್ದದ್ದು ಕಂಡುಬಂತು. ಅವರು ನಿಜವಾಗಿ ಮಾಧವರಾಯರೇ; ಆದರೆ—

ಈ ವೇಳೆಯಲ್ಲಿ ಅವರು ಯಾವಸ್ಥಿತಿಯಲ್ಲಿದ್ದರು? ಅವನ ಸರ್ವಾಂಗವು ಧೂಳದಿಂದ ಮುಸುಗಿ ಹೋಗಿತ್ತು. ಕಣ್ಣುಗಳು ಕೆಂಪಗೆ ಕಾಣುತ್ತಿದ್ದವು ಮೈಯಲ್ಲಿ ವಿಲಕ್ಷಣ ಬೆವರು ಒಡೆಯುತ್ತಿತ್ತು. ಮತ್ತು ಅವನಕಾಲುಗಳು ಸೆಟ್ಟಗೆ ನಿಲ್ಲುತ್ತಿದ್ದಿಲ್ಲ. ಈ, ಅವನ ಸ್ಥಿತಿಯನ್ನು ನೋಡಿ ಅವಳಿಗೆ ಏನುತಾನೇ ಅನಿಸಿರಬಹುದು? ಮಾಧವನು ಒಳಗೆ ಬಂದಕೂಡಲೆ ಬಾಗಿಲಿಗೆ ಕೊಂಡಿಯನ್ನುಹಾಕಿ ನಡುಗುತ್ತ ಜೋಲೆ ಹೊಡೆಯುತ್ತ ಒಳ್ಳೇದು, ನಡೆ. ಒಳಗೆಹೋಗಿ ಒಂದು ದೊಡ್ಡದಾದ ಬೀಗವನ್ನು ತಂದುಕೊಡು ನೋಡುತ್ತೇನೆ. ಈ ಬಾಗಿಲ ಕೊಂಡಿಯು ಗಟ್ಟಿಯಾಗಿಇಲ್ಲ. ಹೊರಗಿನಿಂದ ಯಾರಾದರೂ ಗಟ್ಟಿಯಾಗಿ ಒದೆಯಲು ಬಾಗಿಲು ಒಮ್ಮಿಂದೊಮ್ಮೆ ತೆಗೆಯುವಂತಿದೆ. ರಮೆಗೆ ಪತಿಯ ಈ ಮಾತುಗಳು ವಿಲಕ್ಷಣವಾಗಿ ಕಾಣಹತ್ತಿದವು. ಕೊಂಡಿಯು ಗಟ್ಟಿಯಾಗಿ ಇದ್ದೂ, ಈ ಹೊತ್ತು ಕೀಲಿಯನ್ನುಹಾಕುವದಾಗಿ ಏಕೆ ಹೇಳೋಣವಾಯಿತು? ಇದು ಅವಳಿಗೆ ತಿಳಿಯದ ಹಾಗಾಯಿತು. ಬಹಳವಾಡಿ ಸೆರೆಯ ಗುಂಗಿನಲ್ಲಿ ಹೀಗೆ ಮಾಡುತ್ತಿರಬಹುದೆಂದು, ತಿಳಿದಳು. ಇಷ್ಟರಲ್ಲಿ ಮಾಧವನು ಪುನಃ—

“ ಒಳ್ಳೇದು ಬೀಗವು ಸಿಗದೆ ಇದ್ದಪಕ್ಷದಲ್ಲಿ, ಒಂದು ದೊಡ್ಡ ಮಳಿಯನ್ನಾದರೂ ತಂದುಕೊಡು ಕೊಂಡಿಯಲ್ಲಿ ಹಾಕುತ್ತೇನೆ. ” ಕೇವಲ ಪತಿಯ ಅಪ್ಪಣೆಯ ಮೇರೆಗೆ ಒಂದು ಕೀಲಿಯನ್ನು ತಂದು ಕೊಟ್ಟಳು. ಕೂಡಲೆ ಅದನ್ನು ಕೊಂಡಿಯಲ್ಲಿಹಾಕಿ ಬಾಗಿಲವನ್ನು ಎರಡು ಮೂರುಸಾರೆ ಒದೆದು ಗಟ್ಟಿಯಾಗಿ ಕುಳಿತಿರುವದೆಂದು ಮನಗಂಡಮೇಲೆ, ಹೆಂಡತಿಯನ್ನು ಕರೆದು—ಇಗೋ! ಯಾರಾದರು ನಾನು ಮನೆಯಲ್ಲಿರುವೆನೆಂದು ಕೇಳಿದರೆ

ನಿಜವಾಗಿ ಮನಿಯಲ್ಲಿರುವದಿಲ್ಲೆಂದು ತಟ್ಟನೆಹೇಳಿಬಿಡು ತೀರಿಯಿತೇ? ಜೋಲಿಯನ್ನು ಹೊಡೆಯುತ್ತ ಮಾಧವನು ತನ್ನ ಮಲಗುವ ಕೋಣೆಯನ್ನು ಹೊಕ್ಕನು.

ರಮೆಯಾದರೂ ಪತಿಯ ಬೆನ್ನುಹತ್ತಿ ಒಳಗೆ ನಡೆದಳು. ಮಾಧವನು ಒಳಗೆಹೋದವನೇ ಬಟ್ಟೆಗಳನ್ನೆಲ್ಲ ತೆಗೆದು ಗೂಟಕ್ಕೆಹಾಕಿ, ಮತ್ತು ಕಿಸೆಯೊಳಗೆ ಕೈಹಾಕಿ ಕರವಸ್ತ್ರದಲ್ಲಿ ಕಟ್ಟಿದ ಪದಾರ್ಥವನ್ನು ಹೆಂಡತಿಯ ಕೈಯಲ್ಲಿಕೊಟ್ಟು, ಯಾರಿಗಾದರೂ ಕೈಗಡ ಕೊಡುವದಿದ್ದರೆ ಕೊಡು ಎಂಬದಾಗಿ ಹೇಳಿ ಸುಮ್ಮನಾದನು. ತುಸು ಹೊತ್ತಿನಮೇಲೆ "ಅಪ್ಪಯ್ಯಾ, ಅವ್ವಯ್ಯಾ, ನಾನು ಇಲ್ಲಿಯೇ ಮಲಗುತ್ತೇನೆ. ನನ್ನ ಕಣ್ಣಿಗೆಕತ್ತಲೆ ಕವಿದಂತಾಗುತ್ತದೆ." ಎನ್ನುತ್ತ ಅಲ್ಲಿಯೇ ನೆಲದಮೇಲೆ ಉರುಳಿದನು. ಈಹೊತ್ತು ಮದಿರಾ ದೇವಿಯ ಸೇವೆಯು ಚೆನ್ನಾಗಿ ಆಗಿರುವದೆಂದು ಮನಸ್ಸಿಗೆ ತಾಳು ಹಾಕಿಕೊಂಡು, ರಮೆಯು — ಹೀಗೇಕೆ? ನೆಲದಮೇಲೆ ಏಕೆ ಮಲಗುವಿರಿ? ಸ್ವಲ್ಪ ಸರೆದು ರತ್ನ ಗಂಬಳಿಯ ಮೇಲೆ ಕುಳಿತುಕೊಂಡರ ಹಾಸಿಗೆಯನ್ನಾದರೂ ಹಾಸಿಕೊಡುತ್ತೇನೆ. ಮಾಧವನು ಸ್ವಲ್ಪ ಸರೆದು — ಇರುವಲ್ಲದೇಕೆ. ನಾನು ಇಲ್ಲಿಯೇ ಮಲಗುತ್ತೇನೆ, ಮಾತ್ರ ಕರವಸ್ತ್ರವನ್ನು ಜತನದಿಂದಿಡು.

ರಮೆಯ ದೃಷ್ಟಿಯು, ಕೂಡಲೆ, ಕಟ್ಟಿಟ್ಟದ್ದ ಕರವಸ್ತ್ರದ ಕಡೆಗೆ ಹೋಯಿತು. ಅವಳು ಅದನ್ನು ತೆಗೆದುಕೊಂಡು ದೀವಿಗೆಯ ಬೆಳಕಿನಲ್ಲಿ ಬಿಚ್ಚಿ ನೋಡಲಾಗಿ ನೂರುನೂರು ರೂಪಾಯಿಗಳ ನಾಲ್ಕು ನೋಟುಗಳೂ ಇದಲ್ಲದೆ ನಾಲ್ವತ್ತು ರೂಪಾಯಿಗಳೂ ಅದರಲ್ಲಿದ್ದವು.

ರಮೆಯು ವಿಚಾರ ಮಾಡುತ್ತ ಚಿಂತಾಯುಕ್ತ ಸ್ವರದಿಂದ "ಇದು ಏನು? ಎಲ್ಲಿಯ ರೂಪಾಯಿಗಳು?" ಎಂದು ಕೇಳಿದಳು. ಮಾಧವನು ತ್ರಾಸದಾಯಕ ಸ್ವರದಿಂದ "ಎಲ್ಲಿಯ ರೂಪಾಯಿಗಳೇ ಇರುವಲ್ಲವೇಕೆ? ನಿನಗೆ ಇಲ್ಲದ ಒಣಕಾರಭಾರವು ಬಹಳಬೇಕು. ಒಂದುವೇಳೆ ನಿನಗೆ ಹೇಳಿರುವೆ ನಲ್ಲವೆ? ನೆಟ್ಟಗೆ ವ್ಯವಸ್ಥಿತದಿಂ ದಿಡುವದಾಗಿ, ಹೇಳಿದಹಾಗೆ ಮಾಡಿದರಾಯಿತು" ಎಂದು ಹೇಳಿದನು.

ರಮೆ— ಇವು ಎರಡನೆಯವರ ರೂಪಾಯಿಗಳೇನು ?

ಮಾಧವ— ಇಲ್ಲ! ಇಲ್ಲ!! ನಮ್ಮವೇ; ನನಗೆ ಸಲ್ಪುಹೊತ್ತು ಸುಮ್ಮನೆ ಮಲಗಗೊಡುವಿಯೋ ಇಲ್ಲವೋ?

ಇಷ್ಟರಿಂದ ರಮೆಯು ಸಮಾಧಾನವಾಗುವಬಗೆ ಹೇಗೆ ? ಯಾಕಂದರೆ ಇಷ್ಟು ಹೊತ್ತಿನವರೆಗೆ ಸ್ವಲ್ಪಾದರೂ ಸುಳುವುಇಲ್ಲದೆ ಹೋದವರು ಹೀಗೆ ಒಮ್ಮಿಂದೊಮ್ಮೆ ಸೆರೆಯ ಗುಂಗಿನಲ್ಲಿ ಇಷ್ಟು ರೂಪಾಯಿಗಳನ್ನು ಎಲ್ಲಿಂದ ತಂದಿರಬಹುದು, ಎಂಬದಾಗಿ ಇದೇವಿಚಾರದಲ್ಲಿ ಮಗ್ನಳಾದಳು.

ರಮೆ — ನಾನು ನಿಮಗೆ ಒಂದು ಮಾತು ವಿಚಾರಿಸುತ್ತೇನೆ. ಈ ರೂಪಾಯಗಳನ್ನು ಎಲ್ಲಿಂದ ತಂದಿರಿ?

ಮಾಧವರಾಯನು ಬಹಳ ಗೊಂದಲದಲ್ಲಿ ಬಿದ್ದು, ಏನು? ಏನನ್ನುವಿ? ಏನು ! ಈರೂಪಾಯಿಗಳೇ ಹೌದು !! ಯಾರಿರುವರು ಅಲ್ಲಿ? ನಮ್ಮ ಮನೆಯ ಹಿಂದಣ ಓಣಿಯಲ್ಲಿ ಹೊಸದಾಗಿ ಒಬ್ಬರು ಬಂದಿರುವರಲ್ಲ ಅವರೇ! ಇಂಜನಿಯರರು.

ರಮೆ— ಇರಬಹುದು, ಯಾರಾದರೂ ಇರಬಹುದು. ಅದರೆ ಅವರಿಗೂ ಈ ರೂಪಾಯಿಗಳಿಗೂ ಸಂಬಂಧವೇನು ? ರಮೆ ! ಹೀಗೆ ಸಿಟ್ಟಿಗೆ ಬರಬೇಡ, ನಾನು ಈಹೊತ್ತು ಸೆರೆಯನ್ನೇನು ಕುಡಿದಿರುತ್ತೇನೆ, ಇನ್ನು ಮುಂದೆ ಮಾತ್ರ ಎಂದಿಗೂ ಮುಟ್ಟುವದಿಲ್ಲ.

ರಮೆ — ನನಗೇಕೆ ಸಿಟ್ಟು, ಆದರೆ ಈ ರೂಪಾಯಿಗಳಿಗೂ ಈ ಹೊಸದಾಗಿ ಬಂದ ಇಂಜನಿಯರರಿಗೂ ಏನು ಸಂಬಂಧ ?

ಮಾಧವ— ಹೌದು ಹೊಸದಾಗಿ ಬಂದವರಲ್ಲವೆ? ಅವರು ಒಬ್ಬಪ್ರಸಿದ್ಧ ಇಂಜನಿಯರಿರುವರು. ಅವರಿಗೂ ನಮಗೂ ಕೆಲವು ಗೊತ್ತುವಳಿಗಳಾಗಿ, ಅವರಲ್ಲಿ ಈ ರೂಪಾಯಿಗಳನ್ನು ತಂದಿರುತ್ತೇನೆ. ಏನು? ಕೆಳಗೆ ಬಾಗಿಲಸಪ್ಪಳವಾದಂತಾಗುತ್ತದೆ, ಹೋಗು ಯಾರಾದರೂ ಬಂದಿದ್ದರೆ ಮಾಧವರಾಯರು ಮನಿಯಲ್ಲಿಲ್ಲವೆಂದು ಸ್ಪಷ್ಟವಾಗಿ ಹೇಳಿಬಿಡು. ಇದಲ್ಲದೆ ಯಾವಾಗ ಮನೆಗೆ ಬರುವರೋ ಅದುಸಹ ನನಗೆ ಗೊತ್ತಿಲ್ಲೆಂದು ಹೇಳು, ಹೋ

ಗು, ನನಗೆ ಆರಭಿಟ್ಟೆಯ ಇಚ್ಛೆಯೂ ಇಲ್ಲ. ತೀವ್ರವೇ ಇಲ್ಲಿಂದ ಹೊರಟು ಹೋಗು'' ಈ ಕಡೆಯ ಶಬ್ದಗಳನ್ನು ಉಚ್ಚರಿಸುವಾಗ, ಮಾಧವರಾಯನ ಮುಖಮುದ್ರೆಯು ವಿಲಕ್ಷಣವಾಗಿ ಕಾಣುತ್ತಿದ್ದದುದನ್ನು ಕಂಡು ರಮೆಗೆ ಇಲ್ಲದ ಕೆಟ್ಟ ಕೆಟ್ಟ ಆಲೋಚನೆಗಳು ಬರಹತ್ತಿದವು.

ರಮೆ— ಕೆಳಗಿನ ಮನೆಯಲ್ಲಿ ಬೆಕ್ಕುಗಳು ಒದರಾಡಿ ಗದ್ದಲವನ್ನು ಮಾಡುತ್ತಿರಬಹುದು. ಇದಕ್ಕೇಕೆ? ಇಷ್ಟು ಅಂಜುವದು, ಬಾಗಿಲದ ಸಪ್ಪಳವೂ ಆಗಿಲ್ಲ. ಯಾರೂ ಬಂದಿಲ್ಲ. ಯಾರೂ ಹೋಗಿಲ್ಲ.

ಇದನ್ನು ಕೇಳಿದನಂತರ ಮಾಧವನಿಗೆ ತುಸು ಸಮಾಧಾನವಾಯಿತು ಒಳ್ಳೇದು. ತಾವು ಈಹೊತ್ತು ಊಟಮಾಡುವದಿಲ್ಲವೇನು? ಮುಂಜಾವಿನಿಂದ ಇಷ್ಟು ಹೊತ್ತಿನವರೆಗೆ ಉಪವಾಸವಿರುವಿರಿ. ಮಾಧವ:—ಇಲ್ಲಇಲ್ಲ! ನಾನು ಇಷ್ಟುಹೊತ್ತಿನವರೆಗೆ ಉಪವಾಸ ವಿರುವೆನೇ? ನನ್ನ ಊಟವು ಆಗಿರುವದು. ನೀನು ತೀವ್ರ ನಿನ್ನ ಊಟವನ್ನು ಮುಗಿಯಿಸಿಕೋ, ಹೊತ್ತು ಬಹಳಾಗಿರುವದು.

ರಮೆ— ಇರಲಿ, ಹಾಸಿಗೆಯನ್ನಾದರೂ ಹಾಸಿ ಕೊಡುತ್ತೇನೆ ಮಲಗುವಿರಂತೆ. ರಮೆಯು ಕೂಡಲೆ ಹಾಸಿಗೆಯನ್ನು ಹಾಸಿದಳು. ಮಾಧವರಾಯನು, ಎದ್ದವನೆ ಜೋಲೆಹೊಡೆಯುತ್ತ ರಮೆಯು ಸಹಾಯದೊಂದಿಗೆ ಹಾಸಿಗೆಯ ಮೇಲೆ ಹೋಗಿ ಮಲಗಿದನು. ರಮೆಯು ಗಂಡನ ಮೈತುಂಬ ಶಾಲನ್ನು ಹೊದಿಸಿ ಕೆಳಗೆ ಬಂದು ಉಣ್ಣುವದಕ್ಕೆ ಕುಳಿತು ಕೊಂಡಳು: ಗಂಡನ ಪ್ರತ್ಯಕ್ಷ ಸ್ಥಿತಿಯನ್ನು ನೋಡಿದವಳಾದ ಅವಳಿಗೆ ಊಟವುಚೆನ್ನಾಗಿ ರುಚಿಸಲಿಲ್ಲ. ಅಂತೂ ಇಂತೂ ಅವಸರದಿಂದ ಊಟವನ್ನು ಮುಗಿಯಿಸಿಕೊಂಡು ಬಾಗಿಲನ್ನು ಗಟ್ಟಿಯಾಗಿ ಇಕ್ಕಿಕೊಂಡು ಪತಿಯ ಬಳಿಗೆ ಹೋದಳು. ಇಷ್ಟು ಹೊತ್ತಿನಲ್ಲಿ ಮಾಧವನ ಸ್ಥಿತಿಯು ವಾತ ಪ್ರವೇಶಿಸಿದ ರೋಗಿಯಂತೆ ಯಾಗಿತ್ತು. ಸೆರೆಯ ಗುಂಗಿನಲ್ಲಿ ಅವನು ಮನಬಂದಂತೆ ಬಡಬಡಿಸುತ್ತಿದ್ದನು.

ಸೋಪಾನ ಏರುವಾಗಲೇ ಗಂಡನ ಬಡಬಡಿಕೆಯು, ಅವಳನ್ನು, ಅಸಮಾಧಾನಳನ್ನಾಗ ಮಾಡಿತು. ಮೇಲೆ ಹೋದವಳೇ ದೀಪವನ್ನು ಚಾಚಿ ಪತಿಯ ತಲೆಗಿಂಬದಿಶೆಯಲ್ಲಿ ಹೋಗಿ ಕುಳಿತು, ಪತಿಗೆ ಆಗಿರುವ ದಣುವಿಕೆಯನ್ನು ನಿವಾರಿಸುವದಕ್ಕಾಗಿ ಮೆಲ್ಲಗೆ ತಲೆ ಒತ್ತುವದಕ್ಕೆ ಪ್ರಾರಂಭಿಸಿದಳು ಕೈಯನ್ನು ಹಣೆಯಮೇಲಿಡುತಲೆ ಕೆಂಡದಮೇಲೆ ಇಟ್ಟಂತೆ ಭಾಸವಾಯಿತು; ಕೂಡಲೆ ಒಂದು, ಒದ್ದಿ ಬಟ್ಟೆಯನ್ನು ತಂದು ಹಣೆಯಮೇಲೆ ಇಟ್ಟಳು. ಮಾಧವನ ಬಡಬಡಿಕೆಯು ಹಾಗೆಯೇ ನಡೆದಿತ್ತು.

"ಏನು! ನೀನು ಅನ್ನುವದಾದರೂ ಏನು? ರಾಪಾಯಿಗಳನ್ನು ಎಲ್ಲಂದ ತಂದಿರುವಿರೆಂದು ಕೇಳುವಿಯೋ? ಎಲ್ಲಿಂದಾದರೂ ತಂದಿರುವೆನು. ಕಳವುಮಾಡಿ ತಂದಿರುವಿರೆಂದು ಬೇರೆ ಊಹಿಸುವ ದಿಲ್ಲವಲ್ಲ"?

ಪುನಃ ಮಾಧವನು, ಸಲ್ಪ ಹೊತ್ತಿನವರೆಗೆ ನಿಶ್ಚೇಷ್ಟನಾಗಿ ಬಿದ್ದು ಕೊಂಡನು. ಆಮೇಲೆ ಆಮಗ್ಗಲಿಂದೀಮಗ್ಗಲು ಈಮಗ್ಗಲಿಂದಾಮಗ್ಗಲು ಹೊರಳಾಡುತ್ತ, ಪುನಃ ಒದರಾಡುವದಕ್ಕೆ ಪ್ರಾರಂಭಿಸಿದನು. ಅವ್ವಾ, ಏ ಅವ್ವಾ, ನಾನು ನಿಮ್ಮ ಮನೆಗೆ ಸಂಜೆಯಮುಂದೆ ಬಂದಿದ್ದೇನು ನಿಜ, ಆದರೆ - ಮೇಜಿನಕಡೆಗೆ ನಾನು ಹಣಿಕಿಸಹ ಹಾಕಿರುವದಿಲ್ಲ ಹೌದು— ನನ್ನ ಹೆಸರು ಭೀಮರಾವ ದೇಶಪಾಂಡೆ ಬೇಕಾದರೆ ಬರೆದುಕೊಡುವೆನು, ತೆಗೆದು ಕೊಳ್ಳು. ರಮೆಗೆ ಭೀಮರಾವ ದೇಶಪಾಂಡೆ ಎಂಬ ಹೆಸರನ್ನು ಕೇಳದ ಕೂಡಲೆ ಒಳ್ಳೇ ಸಖೇದಾಶ್ಚರ್ಯ ವಾಯಿತು.

ವಾಚಕರೇ! - ಈ ಹೊತ್ತು ಮಾಧವನು ಏಕೆ ಬಡಬಡಿಸುತ್ತಿದ್ದನೆಂಬುದು ಬೇರೆ ಹೇಳುವ ಕಾರಣವಿಲ್ಲ. ಕಳವು ಮಾಡಿದನಂತರ ಅವನ ಸದಸದ್ವಿವೇಕ ಬುದ್ಧಿಯು ಒಂದೇಸವನೆ ಅವನಿಗೆ ಇಲ್ಲದ ಉಪದ್ರವ ಕೊಡುತ್ತಿತ್ತು. ಯಾವ ಮಾತಿನಿಂದಲೂ ಅವನಿಗೆ ಈಹೊತ್ತು ಸಮಾಧಾನ ವಿದ್ದಿಲ್ಲ. ಆದುದರಿಂದಲೇ ಈ ಹೊತ್ತು ಅವನು ಬುದ್ಧ್ಯಾ ಹೆಚ್ಚು ಸೆರೆಯನ್ನು ಕುಡಿದಿದ್ದನು. ಆದರೆ ಸರೆಯ ಗುಂಗಿನಲ್ಲಿ ಅವನ ಮನಸ್ಸು ಅವನ ಹಿಡಿಕೆಯೊಳಗೆ ಇದ್ದಿಲ್ಲ. ಯಾವವಿಷಯವನ್ನು ಗೌಪ್ಯ ವಿಡುವದಕ್ಕಾಗಿ ಜನರು ಪ್ರಯತ್ನಿಸುವರೋ; ಆವಿಷಯಗಳು ಮದಿರೆಯ ಮಬ್ಬಿನಲ್ಲಿ ಹೊರಬೀಳುತ್ತವೆ.

ಆವನ ಈ ಬಡ ಬಡಿಕೆಯಿಂದ ರೂಪಾಯಿಗಳನ್ನು ತಂದಿದ್ದರಲ್ಲಿ ಏನಾವತೂ ತಥ್ಯಾಂಶ ವಿರಬಹುದೆಂದು ಅವಳು ಸಹಜವಾಗಿ ತರ್ಕಿಸಿದಳು.

ಆವನ ಬಡ ಬಡಿಕೆಯು ಕೆಲ ಹೊತ್ತಿನವರೆಗೆ ಹಾಗೆಯೇ ನಡೆದಿತ್ತು. ಕಡೆಗೆ ಬೆಳಗು ಮುಂಜಾನೆ ವಿರಾಮು ಎನಿಸಿದಂತಾಗಿ ಅವನಿಗೆ ತುಸು ನಿದ್ರಿ ಹತ್ತಿತು.

ಮಾರನೇದಿನ ಚಹದಕಾಲಕ್ಕೆ ರಮೆಯು ಮಾಧವನನ್ನುದ್ದೇಶಿಸಿ ನಿಜವಿದ್ದದ್ದನ್ನು ಹೇಳಿರಿ. ನಿನ್ನಿನ ದಿನ ರೂಪಾಯಿಗಳನ್ನು ಎಲ್ಲಿಂದ ತಂದಿದ್ದಿರಿ ಮತ್ತು ಇಷ್ಟು ಸ್ಥಿತಿಯು ಆಗಿದ್ದರೂ ಸಹ, ಸೆರೆಕುಡಿಯುವದನ್ನು ಬಿಡಬಾರದೇಕೆ?

ನಿನ್ನಿನ ರಾತ್ರಿ ಮಿತಿಮೀರಿದ ಜ್ವರಬಂದಿದ್ದವು. ಇದಲ್ಲದೆ ಸನ್ನಿಮುಚ್ಚಿದವರಂತೆ ಒಂದೇಸವನೆ ಬಡ ಬಡಿಸುತ್ತಿದ್ದಿರಿ.

ಪತ್ನಿಯು ಮಾತಾಡಿದ ಮಾತಿನ ಕಡೆಯ ಮಾತುಗಳನ್ನುಕೇಳಿ ಅವನ ಮೋರೆಯು ಸರ್‍ರನೆ ಇಳಿಯಿತು. ಮನಬಂದಂತೆ ಮಾತಾಡಿರಬಹುದೆಂದು ಅನಿಸಿ ಆವನಿಗೆ ಬಹಳೇ ವಿಷಾದವಾಯಿತು. ಇದಲ್ಲದೆ ಮೊದಲಿನ ದಿವಸ ನಡೆದ ವೃತ್ತಾಂತವು ಅವನ ಕಣ್ಣೆದುರಿಗೆ ಕಟ್ಟಿದಂತಾಗಿ ಅವನು ನಾಚಿಗೊಂಡು ಇನ್ನು ತಾನು ಮನೆಯಲ್ಲಿ ಬಹಳಹೊತ್ತು ಇದ್ದರೆ, ಯಾರಾದರೂ ಬಂದು ಮಾತಾಡಿಸ ಬಹುದೆಂದು ತಿಳಿದು ಬಟ್ಟೆಗಳನ್ನು ಧರಿಸಿ ಹೊರಗೆ ಹೋಗಬೇಕೆಂದು ಹೊರಟನು. ಹೆಂಡತಿಯು ಕೇಳಿದ ಮಾತಿಗೆ ಉತ್ತರ ಕೊಡುವದು ಸಹ ಅವನಿಗೆ ತಿಳಿಯದ ಹಾಗಾಯಿತು.

ಕಡೆಗೆ ಮಾಧವನು ರಮೆಗೆ "ನಿನ್ನಿನರಾತ್ರಿ ನನ್ನ ಮನಸ್ಸಿನೊಳಗೆ ಇಲ್ಲದ ಕುಕಲ್ಪನೆಗಳು ಬರಹತ್ತಿದ ಕಾರಣ ಬಧ್ಯಪೂರ್ವಕವಾಗಿ ಸುರೆಯನ್ನು ಶೇವಿಸಿದೆನು. ಆದರೆ ಪ್ರಿಯೇ! ಇನ್ನುಮುಂದೆ ಪ್ರತಿಜ್ಞಾಪೂರ್ವಕವಾಗಿ ಹೇಳುತ್ತೇನೆ; ಅದರ ದರ್ಶನವನ್ನು ಸಹ ತೆಗೆದುಕೊಳ್ಳುವದಿಲ್ಲ" ಮಾಧವನು ಇದರಂತೆ ಸಾವಿರಾರು ಸಾರೆ ಆಣೆಪ್ರಮಾಣಗಳನ್ನು ಮಾಡಿದ್ದನು. ಆದುದರಿಂದ ರಮೆಯು ಈ ಆಣೆಪ್ರಮಾಣಗಳಿಗೆ ವಿಶೇಷ ಮಹತ್ವವನ್ನು ಕೊಡಲಿಲ್ಲ. ಯಾಕಂದರೆ ಸೆರೆಗುಡುಕರ ಸ್ವಭಾವವೇ ಹೀಗೆ.

ರಮೆ— ಇಷ್ಟುತೀವ್ರ ಹೋಗುವದೆಲ್ಲಿಗೆ? ನಿನ್ನಿನಂತೆ ಈ ಹೊತ್ತಾದರೂ ಬರಲಿಕ್ಕೆ ತಡವಾಗಲಿಕ್ಕಿಲ್ಲ ವಲ್ಲವೇ ?

" ಛೀ! ಛೀ!! ನಾನು ತೀವ್ರವೇ ಬರುವೆನು. ಆದರೆ ಯಾರಾದರೂ ನನ್ನನ್ನು ಕೇಳಲಿಕ್ಕೆಬಂದರ ಮನೆಯಲಿಲ್ಲ. ಹೊರಗೆ ಹೋಗಿರುವರು. ತಿರುಗಿ ಯಾವಾಗಬರುವರೋ ಹೇಳಲಿಕ್ಕೆ ಬರುವಂತೆ ಇಲ್ಲ." ಈರೀತಿಯಾಗಿ ಹೇಳುವವಕ್ಕೆ ಹೆಂಡತಿಗೆ ಹೇಳಿದನು.

ರೂಪಾಯಿಗಳ ವಿಷಯಕ್ಕೆ ಸುದ್ದಿಯನ್ನು ತೆಗೆಯದೆ ಮಾಧವನು ಹಾಗೆಯೇ ಹೋದನು. ಇತ್ತ ರಮೆಯು ಯಾವಾಗಾದರೂ ಪಿಚಾರಿಸಿದರೆ ಬಂದೀತೆಂದು ತನ್ನ ಮನೆಗೆಲಸಗಳಲ್ಲಿ ತೊಡಗಿದಳು.

ಸುಮಾರುಒಂಬತ್ತು ಗಂಟೆಯಾಗಿತ್ತು. ಹೊರಗೆ ಕಟ್ಟೆಯಮೇಲೆ ನಿಂತುಕೊಂಡು ಯಾರೋ ಮಾಧವರಾಯನನ್ನು ಒದರುವ ಸಪ್ಪಳವು ಒಳಗೆ ರಮೆಗೆ ಕೇಳಬಂತು. ಕೆಲಸಗಳನ್ನು ಹಾಗೆಯೇಬಿಟ್ಟು ರಮೆಯು ಹೊರಗೆ ಬಂದಳು. ನೋಡುತ್ತಾಳೆ ಒಬ್ಬಮನಷ್ಯನು ನಿಂತಿದ್ದನು. ಅವನು ರಮೆಯನ್ನು ನೋಡುತಲೆ, ಮರ್ಯಾದೆಯಿಂದ ಮುಜರೆಮಾಡಿ, " ಅವ್ವನವರೇ, ಮಾಧವರಾಯರು ಇಲ್ಲೇ ಇರುವರಲ್ಲವೇ?" 'ಹೌದು ಏನು ಕೆಲಸವಿದೆ' ? " ಧರ್ಮವೀರರಾಯರು ಮಾಧವರಾಯರನ್ನು ಇದ್ದಕ್ಕಿದ್ದಹಾಗೆಯೇ ಕರೆದುಕೊಂಡು ಬರುವದಾಗಿ ಹೇಳಿದರು. ಅವರು ಮನೆಯಲ್ಲಿರುವರೇ ? "

" ಇಲ್ಲ, ಅವರು ಮನೆಯಲಿಲ್ಲ, ಮತ್ತು ಯಾವಾಗ ತಿರುಗಿ ಬರುವರು ಅದೂ ಗೊತ್ತಿಲ್ಲ" ಧರ್ಮವೀರರಾಯರು ಇಷ್ಟು ತರಾತುರಿಯಿಂದ ಕರೆಕಳುಹಿಸಿದ್ದು ಅವಳಿಗೆ ತಿಳಿಯದಾಯಿತು. ಮೊನ್ನಿನ ದಿವಸ ಅವರ ಕಡೆಗೆ ಚಾಕರಿಯ ದಶೆಯಿಂದ ಹೋಗಿದ್ದರು. ಅದೇವಿಷಯವಾಗಿ ಕರೆಯ ಕಳುಹಿಸಿರಬಹುದೆಂದು ಕಲ್ಪಿಸಿ, ಮನುಷ್ಯನನ್ನುದ್ದೇಶಿಸಿ, ಏನೋ! ಧನಿಯರು ಇಷ್ಟುತ್ವರೆಯಿಂದ ಕರೆಕಳುಹಿಸಿದ ಕಾರಣವೇನು ?

ಅವನು ಮೊದಲು ತುಸುಗೊಂದಲದಲ್ಲಿ ಬಿದ್ದನು. ಆಮೇಲೆ ವಿಚಾರ ಮಾಡುತ್ತ, ತಾಯೀ! ಅವರಮೇಲೆ ಒಂದು ದೊಡ್ಡಆರೋಪವು ಬಂದಿದೆ.

ಧರ್ಮವೀರ ರಾಯರ ಮನೆಯಲ್ಲಿ ಒಂದು ಪುತ್ಥಳಿಯ ಸರವು ಹೋಗಿದ್ದು, ಅವರ ಸಂಶಯವು ಸಂಪೂರ್ಣ ಮಾಧವರಾಯರ ಮೇಲೆಯೇ ಇದೆ.

" ರಾಯರ ಮನೆಯಲ್ಲಿ ಸರವು ಹೋಗಿದ್ದು, ಅದರ ಆರೋಪವು ಇವರಮೇಲೆ ಬಂದಿದೆ. " " ಇದು ಇರುವದಾದರೂ ಏನು? " ದಿನ ದಿನ, ಹೊಸ ಹೊಸ ಸಂಕಟಗಳು ಬರುತ್ತಿದ್ದು ಇದರ ಪರ್ಯಾವಸಾನವಾದರೂ ಏನು ಎಂಬುದು ರಮೆಗೆ ತಿಳಿಯದ ಹಾಗಾಯಿತು. ಆದಾಗ್ಯೂ ಅವಳು ಸ್ಥಿರ ಮನಸ್ಸಿನಿಂದ " ನಿಮ್ಮ ಧನಿಯರ ಮನೆಯಲ್ಲಿ ಪುತ್ಥಳಿಯಸರವು ಹೋದದ್ದು ಇವರೇ ಒಯಿದಿರುವರೆಂದು ಏದರಮೇಲೆ ಸಂಶಯ ಕಟ್ಟುತ್ತೀರಿ ? ವಿಚಾರ ಮಾಡದೆ ಎರಡನೆಯವರಮೇಲೆ ವೃಥಾ ಆರೋಪವು "

" ಅವ್ವನವರೇ ನಮ್ಮಹತ್ತಿರ ಸಾಕ್ಷಿಯೇ ಇರುವದಿಲ್ಲವೇ? ತೆಗೆದು ಕೊಳ್ಳಿರಿ ಈ ಪತ್ರವನ್ನು, ತಾವು ಎಂದಾದರೂ ನೋಡಿರುವಿರೋ ? " ಹೀಗೆ ಅನ್ನುತ್ತ ಮಾಧವನ ಮೇಲ್ವಿಳಾಸವಿರುವ ಒಂದು ಪತ್ರವನ್ನು ಅವಳಿಗೆ ತೋರಿಸಿದನು.

ತೋರಿಸಿದ ಪತ್ರವನ್ನು ಅವಳು ಕೂಡಲೇ ಗುರ್ತಿಸಿದಳು. ಅದೇ ಪತ್ರವನ್ನು ಅವಳು ಎರಡು ಮೂರು ದಿವಸದ ಪೂರ್ವದಲ್ಲಿ ಮಾಧವನ ಹತ್ತಿರ ಇದ್ದದ್ದನ್ನು ನೋಡಿದ್ದಳು.

"ಒಳ್ಳೇದು! ಅವರ ಹೆಸರಿನ ಪತ್ರವು ನಿಮ್ಮ ಕಡೆಗೆ ಬಂದಿತುಹೇಗೆ?"

"ಯಾವಸ್ಥಳದಲ್ಲಿಪುತ್ಥಳಿಯಸರವು ಹೋಗಿರುವದೋ ಅದೇಸ್ಥಳದಲ್ಲಿ ಈ ಪತ್ರವು ಬಿದ್ದಿತ್ತು. ಇದರ ಮೇಲಿಂದ ಅದರಹತ್ತಿರ ಇವರ ಹೊರ್ತು ಅನ್ಯರು ಯಾರೂ ಹೋಗಿರುವ ದಿಲ್ಲವೆಂದು ಸಿದ್ಧವಾಗಿಯೇ ಆಗುತ್ತದೆ."

ಆಪತ್ರವು ನಿಜವಾಗಿ ಮಾಧವನದೇ ಇತ್ತು ಸರವನ್ನು ಅವಸರದಿಂದ ಕಿಶೆಯಲ್ಲಿ ಹಾಕಿಕೊಳ್ಳುವದಕ್ಕಾಗಿ ಕರವಸ್ತ್ರವನ್ನು ಹೊರಗೆ ತೆಗೆಯಲು ಅದರಕೂಡಬಂದ ಆ ಪತ್ರವು ಕಾಣದೆ ಅಲ್ಲಿಯೇ ಬಿದ್ದಿತು. ಇದು ಅವನ ಲಕ್ಷದಲ್ಲಿ ಬರಲಿಲ್ಲ.

ಆ ಪತ್ರದ ಸಾಕ್ಷಿಯನ್ನು ನೋಡಿ ತನ್ನ ಪತಿಯು ಕಳವು ಮಾಡಿದ್ದ

ರೂ ಮಾಡಿರ ಬಹುದೆಂಬ ವಿಚಾರವು ಅವಳಲ್ಲಿ ಉತ್ಪನ್ನ ವಾಯಿತು ಕೂಡಲೆ ಮೊದಲನೇದಿನದ ಮಾಧವನ ವರ್ತನವೂ ರಾತ್ರಿಯಲ್ಲಿಯ ಅವನ ಬಡ ಬಡಿಕೆಯೂ ಒಂದರ ಹಿಂದೊಂದು ನೆನಪಾಗುತ್ತ ನಡೆದವು. 'ಚಾಕರರು ಮುಂತಾದವರು ತನ್ನ ಪತಿಗೆ, ಕಳ್ಳನೆಂದು ಅನ್ನುವದು, ಅವಳಿಂದ ಸಹನವಾಡುವದು ಆಗಲಿಲ್ಲ. ಅವಳು ಚಾಕರನನ್ನು ಮುಂದಕ್ಕೆ ಕರೆದು,

ಹೋಗು! ಯಾರಾದರೂ ಕಳವುಮಾಡಿ ತಮ್ಮಮೇಲೆ ಅಪವಾದ ಬರಬಾರದೆಂದು ತಿಳಿದು, ಅವರಲ್ಲಿದ್ದ ಚೀಟಿಯನ್ನು ತಂದು ಕೆಳಗೆಹಾಕಿ ಹೊಗಿರಬಹುದು. ಪ್ರತ್ಯಕ್ಷನೋಡಿದರೂ ಪ್ರಮಾಣಿಸಿ ನೋಡುವದನ್ನು ಮರೆತು ಎರಡನೆಯವರಮೇಲೆ ಸುಮ್ಮನೆ ಆರೋಪ ಹೊರಿಸಿರುವಿರಿ. ಈಗ ಅವರು ಮನೆಯಲ್ಲಿ ಇಲ್ಲ. ಎಲ್ಲಿಹೋಗಿರುವರು ಮತ್ತು ಯಾವಾಗ್ಗೆ ತಿರುಗಿಬರುವರು ಹೇಳಲಿಕ್ಕೆ ಬರುವಂತೆ ಇಲ್ಲ.

ಪಾಪ ಸೇವಕನು ವಿಷಣ್ಣವದನನಾಗಿ ಅವಳಕಡೆಗೆನೋಡುತ್ತ ನಿಂತನು. ರಮೆಯು ಮಾತಾಡುವದರಲ್ಲಿಯ ತಪ್ಪು ಅವನಿಗೆ ತಿಳಿಯದಾಯಿತು. ಅವಳು ಒಳಗೆ ಹೋದದ್ದು ನೋಡಿ ಅವನೂ ಬಂದದಾರಿಯಿಂದತಿರುಗಿಹೋದನು. ಇತ್ತ ರಮೆಯ ಸ್ಥಿತಿಯು ಏನಾಗಿರಬಹುದು ?

ಇದನ್ನು ವಾಚಕರೇ ತರ್ಕಿಸಬೇಕು ! ಪತಿಗೆ ಕಳುವುಮಾಡುವ ಪ್ರಸಂಗವು ಒದಗಿದ್ದು ನೋಡಿ, ಅವಳಿಗೆ ಬಹಳೇ ವಿಷಾದ ವಾಯಿತು. ಮಾಧವನು ಕಳವುಮಾಡಿದ್ದು ನಿಜವಿರಬಹುದೆಂದು ಅವಳಿಗೆ ಪೂರ್ಣ ಮನವರಿಕೆಯಾಯಿತು. ಮೊದಲನೇದಿನ ಮನೆಗೆ ಬರುತಲೆ ಬಾಗಿಲು ಹಾಕುವದಕ್ಕಾಗಿ ಮಾಡಿದ ಅವಸರವೂ, ಯಾರಾದರೂ ಬಂದುಕೇಳಿದರೆ ಮನೆಯಲಿಲ್ಲ ಯಾವಾಗ ಮನೆಗೆ ಬರುವರೋ ನಿಯಮವಿಲ್ಲವೆಂದು ಹೇಳು, ಎನ್ನುವದಾಗಿ ಮೇಲಿಂದಮೇಲೆ ಹೇಳುವದೂ, ಮತ್ತು ಅದರಲ್ಲಿ ವಿಶೇಷ ಮಹತ್ವದ ಮಾತೆಂದರೆ, ಮುನ್ನೂರು ರೂಪಾಯಿಗಳನ್ನು ಒಮ್ಮಿಂದೊಮ್ಮೆತಂದು ತನ್ನ ಕೈಯಲ್ಲಿ ಇಟ್ಟದೂ, ಇದಲ್ಲದೆ ರಾತ್ರಿಯ ವೇಳೆಯಲ್ಲಿ ಸೆರೆಯ ಗುಂಗಿನಲ್ಲಿ ಮನಬಂದಂತೆ ಬಡಬಡಿಸುವದೂ, ಇವೆ ಮೊದಲಾದ ವಿಷಯಗಳು ಕಣ್ಣಿಗೆ

ಕಟ್ಟಿದಂತಾಗಿ, ಕೇಳಿದರೆ ಹೇಳದೆಇದ್ದುದರಿಂದ,ಅವಳ ಸಂಶಯವು ದೃಢವಾಗುತ್ತ ನಡೆಯಿತು. ಒಂದುವೇಳೆ ಪತಿಯು ದೋಷಿಯಾದರೆ ಮುಂದೆ ಆವನ ಗತಿ ಏನು? ಇವೇ ಮುಂತಾದ ನಾನಾ ವಿಷಯುಗಳು ಅವಳಲ್ಲಿ ಬರ ಹತ್ತಿದವು. ಈಗ ಪತಿಯು ಮನೆಗೆಬಂದರೆ ಅವನಿಗೆ ಹೇಳುವದಾದರೂ ಏನು? ಇನ್ನು ಹೇಳುವದೇತಕ್ಕೆ? ಧರ್ಮವೀರ ರಾಯರಕಡೆಯಿಂದ ನಾಲ್ಕೈದು ಶಿಪಾಯಿಗಳು ಬಂದು ಹಿಡಿದುಕೊಂಡು ಹೋಗಬಹದು ನಂತರ ಚೌಕಶಿಯಾಗಿ ಶೀಕ್ಷೆಯಾಗಬಹುದು, ಆಮೇಲೆ ಕೈಕಾಲುಗಳಲ್ಲಿ ಸಂಕೋಲೆಗಳನ್ನು ಹಾಕಿಕೊಂಡು ಬಾಡಿಗೆ ಇಲ್ಲದ ಮನೆಯಲ್ಲಿ ಕುಳಿತು ಕೊಳ್ಳ ಬೇಕಾಗುವದು. ಈಕಡೆಯ ವಿಚಾರಗಳು ಮನಸ್ಸಿನಲ್ಲ ಉದ್ಭವಿಸುತಲೆ ಕತ್ತಲೆ ಗಡಿಸಿದಂತಾಗಿ ದೊಪ್ಪನೆ ನೆಲಕ್ಕೆ ಬಿದ್ದಳು.

'ತುಸು ಹೊತ್ತಿನಮೇಲೆ ಚೇತರಿಸಿಕೊಂಡು ಎದ್ದು ಬಿಕ್ಕಿ ಬಿಕ್ಕಿ ಅಳ ಹತ್ತಿದಳು. ತನ್ನ ತಂದೆಯು ಈ ವಿಷವೇಳೆಯಲ್ಲಿ ಎಲ್ಲಿರಬಹುದು. ಒಂದು ವೇಳೆ ತಾನು ಇದ್ದಲ್ಲಿ ಇದ್ದರೆ ಇಂಥಪ್ರಸಂಗವನ್ನು ಅವನು ಎಂದಿಗೂ ತರಗೊಡುತ್ತಿದ್ದಿಲ್ಲ;' ಈ ಪ್ರಕಾರ ಅವಳಿಗೆ ತನ್ನ ತಂದೆಯ ನೆನಪುಆಗಿ ಅವಳ ಶೋಕಾಗ್ನಿಯು ಇಮ್ಮಡಿಸಿತು. ಬಹಳಹೊತ್ತು ಅತ್ತಮೇಲೆ ದುಃಖದ ಆವೇಗವು ಕಡಿಮೆಯಾಯಿತು ಬಂದಪ್ರಸಂಗಕ್ಕೆ ಯಾವರೀತಿಯಿಂದ ಎದೆಗೊಟ್ಟು ನಿಲ್ಲಬೇಕೆಂದು ಅವಳು ವಿಚಾರಮಾಡ ಹತ್ತಿದಳು.

' ಪದಾರ್ಥವಂತೂ ನಿನ್ನೇ ಹೋಗಿರುತ್ತದೆ. ಪತಿಯು ಮನೆಗೆ ಬರುತಲೆ ಯಾರಹತ್ತರ ಪದಾರ್ಥವನ್ನು ವಿಕ್ರಯಮಾಡಿ ತಂದಿರುವರೋ ಅವರಿಗೆ ನಿನ್ನೆತಂದ ರೂಪಾಯಿಗಳನ್ನು ಕೊಟ್ಟು ಪದಾರ್ಥವನ್ನು ತಿರುಗಿ ಬಿಡಿಸಿಕೊಂಡು ಬಂದು ರಾಯರ ಪದಾರ್ಥವನ್ನು ಅವರಿಗೆ ಮುಟ್ಟಿಸಬೇಕು ಬಹಳವಾದರೆ ಅವರಿಷ್ಟು ಬಯ್ಯುವರು; ಆದರೂ ತುರಂಗವಾಸಕ್ಕಿಂತ ಒಳಿತಲ್ಲವೇ?' ಈ ಯುಕ್ತಿಯು ಚೆನ್ನಾಗಿ ಅವಳಮನಸ್ಸಿಗೆ ಬಂದಿತು. ಅದರೆ, ಪತಿರಾಜರಿಗೆ ಈ ವಿಷಯುವು ಮನಸ್ಸಿಗೆ ಬಾರದೆ ಎಲ್ಲರೂಪಾಯಿಗಳನ್ನು ತೆಗೆದುಕೊಂಡು ಎಲ್ಲಾದರೂ ಪರಊರಿಗೆ ಹೋದರೆ ಏನುಗತಿಎಂಬ ಸಂಶಯುವೂ ಬಂದಿತು. ಯಾಕಂದರೆ ಯಾವದಾದರೊಂದು ರೀತಿಯಿಂದ ಕಳವನ್ನು ಮುಚ್ಚಿಕೊಳ್ಳುವ ಯುಕ್ತಿಯು ಕಳ್ಳರಿಗೆ ಕೂಡಲೆ ತೋಚುವದು.

ಆದುದರಿಂದ ಈ ಯುಕ್ತಿಯು ಅವಳ ಮನಸ್ಸಿಗೆ ಬರಲಿಲ್ಲ. ಅವಳಿಗೆ ತಕ್ಷಣವೇ ಮತ್ತೊಂದು ಯೋಚನೆಯು ತೋಚಿತು. ಅದೇನಂದರೆ, ಈ ರೂಪಾಯಿಗಳನ್ನು ಇದ್ದಕಿದ್ದ ಹಾಗೆಯೇ ತೆಗೆದುಕೊಂಡುಹೋಗಿ ಧನಿಯರ ಹೆಂಡತಿಯ ಸ್ವಾಧೀನ ಮಾಡಬೇಕು. ಮತ್ತು ವಸ್ತು ಸ್ಥಿತಿಯನ್ನು ಇದ್ದಕ್ಕಿದ್ದ ಹಾಗೆಯೇ ಹೇಳಿ, ಪತಿಯ ಬಿಡುಗಡೆಯಬಗ್ಗೆ ಯಾಚಿಸಬೇಕು. ಯಜಮಾನಿಯು ಬಹಳ ಸಭ್ಯಳೂ, ಉದಾರ ಮನಸ್ಸಿನವಳೂ ಇದ್ದುದರಿಂದ, ಮಾಧವನು ಭಾಗ್ಯನಗರಿಗೆ ಹೋದನಂತರ ತುಸು ದಿವಸಗಳಲ್ಲಿಯೇ ರಮೆಗೂ ಅವಳಿಗೂ ನಿಕಟ ಪರಿಚಯವಾಗಿತ್ತು. ಆದರೆ ಈ ವಿಷಯದಲ್ಲಿಯೂ ರಮೆಯು ನಿರಾಶಳಾದಳು. ಯಾಕಂದರೆ ಯಜಮಾನಿಯೂ ಮೊನ್ನೆ ಮೊನ್ನೆ ಎರಡನೆಯಊರಿಗೆ ಹೋಗಿರುವಳೆಂಬ ಸುದ್ದಿಯು ರಮೆಗೆ ತಿಳಿಯ ಬಂದಿತ್ತು ಅವಳಿಗೆ ಎಷ್ಟು ವಿಚಾರಮಾಡಿದರೂ ಈ ವಿಷಯವು ಬಗೆಹರಿಯದಂತಾಯಿತು. ಕಟ್ಟಕಡೆಗೆ ಪುತ್ಥಳಿಯಸರವನ್ನು ಇದ್ದಕ್ಕಿದ್ದ ಹಾಗೆಯೇ ಧರ್ಮವೀರ ರಾಯರಿಗೆ ಕೊಡದ ಹೊರ್ತು ಪತಿಯ ಬಿಡುಗಡೆ ಯಾಗುವದು ಅಸಂಭವವೆಂದು ಅವಳಿಗೆ ಅನಿಸಹತ್ತಿತು.

ಸರವು ತನ್ನ ಕೈಗೆ ಹೇಗೆ ಬರಬೇಕೆಂಬುದೊಂದು ಹೊಸ ಪ್ರಶ್ನೆಯು ಉಪಸ್ಥಿತವಾಯಿತು. ಅದಕ್ಕೆ ಒಂದೇ ಉಪಾಯವಿತ್ತು. ಅದು ಅವಳಿಗೆ ತಿಳಿಯಿತೂ ಸಹ. ಸರವನ್ನು ಯಾವ ಗೃಹಸ್ಥರಿಗೆ ಕೊಟ್ಟಿರುವರೋ ಅವರಕಡೆಯಿಂದ ಪುನಃದೊರಕಿಸಿದರೆ ಮಾತ್ರ ಯುಕ್ತಿಯು ಸಾಧಿಸುತ್ತಿತ್ತು ಆದರೆ ಮಾರಲಿಕ್ಕೆ ತೆಗೆದುಕೊಂಡ ಗೃಹಸ್ಥರು ತಿರುಗಿ ಕೊಡುವರೋ ಇಲ್ಲವೋ ಎಂದು ಪುನಃ ಸಂಶಯವು ಅವಳನ್ನಾವರಿಸಿತು ಅದರಹೊರ್ತು ಎರಡನೆಯ ಹಂಚಿಕೆಯು ಹೊರಡಲಿಲ್ಲ. ಕಡೆಗೆ ಇದೇ ಪ್ರಯತ್ನವನ್ನು ಮಾಡಿ ನೋಡಬೇಕು. ಇಲ್ಲದಿದ್ದರೆ ದೈವದಲ್ಲಿ ಇದ್ದಂತೆ ಆಗುತ್ತದೆ.

ಏನೇಆಗಲಿ ಪತಿರಾಜನು ಮನೆಗೆ ಬರುವದರೊಳಗೆ ಕೆಲಸವನ್ನು ಮುಗಿಯಿಸಿ ಕೊಳ್ಳಬೇಕು. ಯಾಕಂದರೆ ಪತಿಯು ಮನೆಗೆ ಬಂದಮೇಲೆ ಕಳವು ಮುಚ್ಚಿಕೊಳ್ಳುವದು ಸಹಜಕವು. ಈ ವಿಷಯವು ಅವಳಿಗೆ ಸಂಪೂರ್ಣ ಗೊತ್ತು ಇತ್ತು. ಕಳವು ಮಾಡಿದ್ದೊಂದು. ಇದಲ್ಲದೆ ಮುಚ್ಚಿಡುವದು

ಒಂದು. ಹೀಗೆ ಎರಡು ಪಾಪದ ಕೆಲಸಗಳನ್ನು ತನ್ನ ಎದುರಿಗೆ ತನ್ನ ಪತಿಯು ಮಾಡುವದು ಆಸ್ವಾಭಿಮಾನ ಸ್ತ್ರೀಗೆ ಸರಿಬರಲಿಲ್ಲ. ಈಗ ಆಸರವನ್ನು ಹೇಗೆ ಸಂಪಾದಿಸಬೇಕು. ಮತ್ತು ಸಂಪಾದಿಸ ಹೋದಲ್ಲಿ ಏನುಮಾತಾಡಬೇಕು. ಎಂಬುದಾಗಿ ವಿಚಾರಮಾಡ ಹತ್ತಿದಳು.

ತಮ್ಮ ಮನೆಯ ಹಿಂದಿನ ಬೀದಿಯಲ್ಲಿ, ಹೊಸದಾಗಿ ಒಬ್ಬ ಇಂಜನಿಯರರು ಬಂದಿರುವರು. ಅವರ ಹತ್ತರವೇ ತಂದೆನೆಂದು ಮಾಧವನು ತನಗೆ ಹೇಳಿದ್ದು ಅವಳಿಗೆ ನೆನಪಾಯಿತು. ಕೂಡಲೆ ರೂಪಾಯಿಗಳನ್ನು ತೆಗೆದುಕೊಂಡು ಅತ್ತ ಕಡೆಯೇ ಶೋದಾರ್ಥವಾಗಿ ಹೊರಡ ಬೇಕೆಂದು ನಿರ್ಧರಿಸಿದಳು.

ಓದುಗರೇ! ಇತ್ತ ಮಾಧವರಾಯನು ಆ ಸರವನ್ನು ಸ್ವಲ್ಪಾದರೂ ಬೊಬ್ಬಾಟವಾಗದಂತೆ ಒಯಿದು ಮೇಲ್ಕಂಡ ಸದ್ಗೃಹಸ್ಥರಿಗೆ ಮಾರಿದ್ದನು ಪುತ್ಥಳಿಯ ಸರದ ಮಾರಾಟವೂ ಆಯಿತು. ಅದರ ರೂಪಾಯಿಗಳೂ ಮಾಧವರಾಯನ ಕೈಸೇರಿದವು. ಆದುದರಿಂದ ಸಲ್ಪುಮಟ್ಟಿಗೆ ಮಾಧವರಾಯನು ನಿರ್ಭೀತನಾದನು. ಆದರೆ ಅವನ ಮನಸ್ಸಿಗೆ ಪೂರ್ಣವಿರಾಮು ಮಾತ್ರ ಇಲ್ಲದ್ದಿಲ್ಲ,ಅವನು ಮಾಡಿದ ಕೆಲಸವು ಅತಿಶಯ ಹೀನವಾದದ್ದು,ಇದ್ದು ಅದು ಒಂದೇಸವನೆ ಇವನ ಎದೆಯಲ್ಲಿ ಚುಚ್ಚುತ್ತಿತ್ತು. ಪುತ್ಥಳಿಯ ಸರವನ್ನು ತಿರುಗಿ ತೆಗೆದುಕೊಂಡುಹೋಗಿ ರಾಯರ ಮನಿಯಲ್ಲಿ, ಮೊದಲು ಅದನ್ನು ಇಟ್ಟಿದ್ದ ಸ್ಥಳದಲ್ಲಿಯೇ ಇಡಬೇಕು. ಇಲ್ಲವೆ ಅವರಿಗೆ ಬೆಟ್ಟಿಯಾಗಿ ತಪ್ಪು ಒಪ್ಪಿಕೊಂಡು ಅವರ ಕಾಲಮೇಲೆ ಬಿದ್ದು, ಇಂಥ ಕೆಟ್ಟ ಕೃತ್ಯಗಳನ್ನು ಪ್ರತಿಜ್ಞಾ ಪೂರ್ವಕವಾಗಿ ಮಾಡುವದಿಲ್ಲ ವೆಂಬದಾಗಿ ಹೇಳಿಕೊಳ್ಳ ಬೇಕೆಂದು ಮಾಧವನಿಗೆ ಅನಿಸಹತ್ತಿತು.

ಈ ವಿಚಾರಗಳು ಸ್ವಲ್ಪು ಕಾಲದ ವರೆಗೆಯೇ ಮಾತ್ರ ಇರುತ್ತಿದ್ದವು ಯಾಕಂದರೆ ತಾನಾಗಿಯೇ ಅಲ್ಲಿಯವರಿಗೆ ಹೋಗಬೇಕು. ಅವರಾದರೂ ತನ್ನ ಶೋಧದಲ್ಲಿಯೇ ಇದ್ದರೆ ತೀರಿತು. ತಟ್ಟನೆ ಹೋಗಿ ಹುಲಿಯ ಬಾಯಿಗೆ ಬಿದ್ದಂತೆಯೇ ಸರಿ ಆದುದರಿಂದ ಕಳವು ಮುಚ್ಚಿಕೊಳುವದೇ ನೆಟ್ಟಗೆ. ಯಾಕಂದರೆ ಮಾಣಕಜಿಯ ಕಾಟವು ತಪ್ಪುತ್ತದೆ. ಒಂದುತಿಂ

ಗಳದ ವರೆಗೆ ಸಮಾಧಾನದಿಂದಾದರೂ ಇರಲಿಕ್ಕೆ ಬರುವದು. ಇದಲ್ಲದೆ ಉಳಿದ ರೂಪಾಯಿಗಳನ್ನು ಯಾವದಾದರೊಂದು ಉದ್ಯೋಗದಲ್ಲಿ ವಿನಿಯೋಗಿಸಲಿಕ್ಕೆ ಬರುತ್ತದೆ. ಹೀಗೆ ಸಲ್ಪಕಾಲದ ವರೆಗೆಯೇ ಮಾತ್ರ ವಿಚಾರಿಸುತ್ತಿದ್ದನು. ಆದರೆ ಪುನಃಅವನನ್ನು ಸಂಶಯ ಪಿಶಾಚಿಯು ಆವರಿಸುತ್ತಿತ್ತು

'ತುಸುದಿವಸಗಳಲ್ಲಿ ಇದರನಿಜವು ಹೊರಬೀಳುತಲೆ ತನಗೆ ಕಾರಾವಾಸ ಬಂದೇ ಬರುವದು. ಇದಲ್ಲದೆ ನಾಲ್ಕು ಜನರೊಳಗೆ ತಾನು ಛೀ, ಥೂ, ಆಗುವದು ಸತ್ಯವೇ ಸತ್ಯವು.'

ಒಟ್ಟನಮೇಲೆ ಏನು ಮಾಡಿದರೂ ಅವನ ಮನಸ್ಸಿಗೆ ಸಮಾಧಾನವಾಗದಂತಾಯಿತು. ಅವನ ಮನಸ್ತಾಪವು ಪ್ರತಿ ಕ್ಷಣಕ್ಷಣಕ್ಕೆ ಹೆಚ್ಚಾಗಹತ್ತಿತು. ಅದನ್ನು ಕಡಿಮೆ ಮಾಡುವದಕ್ಕಾಗಿ ಅವನಿಗೆ ಒಂದೇ ಒಂದು, ಮಾರ್ಗವು ತೋರಿತು. ಕೂಡಲೆ ಅವನು ಮಾಣಿಕಜ್‌ಯ ಅಂಗಡಿಯದಾರೀ ಹಿಡಿದನು. ಅಲ್ಲಿಹೋಗಿ ಮೊದಲೇ ಹೇಳಿದಪ್ರಕಾರ ಅವನಿಗೆ ನೂರು ರೂಪಾಯಗಳನ್ನುಕೊಟ್ಟು, ಒಂದು ಕುರ್ಚಿಯಮೇಲೆ ಹೋಗಿ ಕುಳಿತುಕೊಂಡು ಸುರೆಯನ್ನು ತರುವದಕ್ಕಾಗಿ ಹೇಳಿದನು. ಆಮೇಲೆ ಒಂದರಮೇಲೊಂದು ಪೇಲೆಯಂತೆ ತೃಪ್ತಿಯಾಗುವವರೆಗೆ ಎಥೇಚ್ಛ ಸುರೆಯನ್ನು ಸೇವನೆಮಾಡಿ, ಅದರ ಬೆಲೆಯನ್ನು ಕೊಟ್ಟು, ಜೋಲಿಹೊಡೆಯುತ್ತ ಮನೆಯದಾರೀ ಹಿಡಿದನು. ಮನಕ್ಕೆ ಶಾಂತಿ ಸಿಗಬೇಕು. ಉದ್ವಿಗ್ನಕಾರಕ ವಿಚಾರಗಳು ಮರೆಯಬೇಕೆಂಬದಾಗಿ ಅವನು ಸುರೆಯನ್ನು ಸೇವಿಸಿದನು. ಆದರೆ ಅದು ಸಫಲವಾದಂತಾಗಲಿಲ್ಲ. ಸುರೆಯ ಅಮಲಿನಲ್ಲಿ, ಅವನಿಗೆ ಇಲ್ಲದ ತ್ರಾಸ ವಾಗಹತ್ತಿತು, ಇದಲ್ಲದೆ ಬಡಬಡಿಕೆಯೂ ಪ್ರಾರಂಭವಾಯಿತು,

✧ ✧ ✧ ✧ ✧ ✧ ✧ ✧

ಇತ್ತ ಪದಾರ್ಥವನ್ನು ತಿರುಗಿ ದೊರಕಿಸಬೇಕೆಂಬ ವಿಚಾರವು ಮನಸಿನಲ್ಲಿ ದೃಢವಾಗುತಲೆ, ರಮೆಯು ಪೆಟ್ಟಿಗೆಯನ್ನುತೆರೆದು ಅದರಲ್ಲಿದ್ದ ನೋಟುಗಳ ಗಂಟನ್ನು ಹೊರಗೆ ತೆಗೆದುಕೊಂಡು ಉಡುಪು ತೊಡಪನ್ನು ಚೆನ್ನಾಗಿ ಧರಿಸಿಕೊಂಡು ಮನೆಯಿಂದ ಹೊರ ಹೊರಟಳು. ಹೊರಗೆ ಹೋಗುವ

ಆದರಲ್ಲೂ ಪರಪುರುಷರ ಸಂಗಡ ಮಾತಾಡುವ ವೇಳೆಯು ಆ ಪತಿ ಪ ರಾಯಣಳಿಗೆ ಇದೇ ಮೊದಲನೇದು. ಆದರೆ ಈವೇಳೆಯಲ್ಲಿ ಅವಳಿಗೆ ಹೋ ಗದೆ ಗತ್ಯಂತರವೇ ಇದ್ದಿಲ್ಲ. ಪತಿಯು ಸೆರೆಮನೆಗೆ ಹೋಗುವ ಮುಂದೆ ತಾನು ಹೊರಗೆ ಹೋಗುವದು ಅವಳಿಗೆ ಅಷ್ಟೇನು ಕೆಡಕು ಕಾಣಿಸಲಿಲ್ಲ ಆ ಹೊಸ ಸದ್ಗೃಹಸ್ಥರು ಆರು? ಅವರ ಹೆಸರು ಏನು? ಇದೆಲ್ಲ ಅವಳಿಗೆ ಲೇ ಶವಾದರೂ ಗೊತ್ತಿದ್ದಿಲ್ಲ "ಹಿಂದಿನ ಬೀದಿಯಲ್ಲಿ ಹೊಸದಾಗಿ ಬಂದ ಇಂ ಜನೀಯರರು" ಇಷ್ಟೇ ಹೆಸರುಮಾತ್ರ ಅವಳಿಗೆ ಗೊತ್ತಿತ್ತು.

ಇಷ್ಟೇ ಮೇಲ್ವಿಳಾಸದ ಮೇಲಿಂದ ಅವಳು ಆಮನೆಯನ್ನು ಹುಡುಕ ಬೇಕಾಗಿತ್ತು. ತುಸು ಅವಧಿಯಲ್ಲಿಯೇ ಹುಡುಕುತ್ತ ಆಮನೆಗೆಬಂದು ಮು ಟ್ಟಿದಳು ಹೊರಗೆ ಕುಳಿತಿದ್ದ ಸೇವಕನು ಒಳಗೆ ಹೋಗಲು ಹೇಳಿದನು. ಸೋಪಾನಗಳನ್ನು ಹತ್ತಿ ಒಳಗೆ ಪ್ರವೇಶಿಸುತಲೆ, ಅವಳ ದೃಷ್ಟಿಗೆ ಚಿಕ್ಕದಾ ದೊಂದು ಸಭಾಗೃಹವು ಬಿದ್ದಿತು. ಒಳಗೆ ಹೋಗಬೇಕೋ ಹೋಗಬಾರ ದೋ ಯಾರಾದರೂ ಅನ್ಯಪುರುಷರು ಇದ್ದರೆ ಹೇಗೆ? ಇದೇ ವಿಚಾರದಲ್ಲಿ ಅವಳು ಅರ್ಧತಾಸಿನವರೆಗೆ ಹೊರಗೆ ನಿಂತುಕೊಂಡಳು. ಇಷ್ಟರಲ್ಲಿ ಒಬ್ಬ ಒಕ್ಕಲಗಿತ್ತಿಯು ಬಂದು "ಒಳಗೆ ಅವ್ವನವರು ಒಬ್ಬರೇ ಇರುವರು. ಅವ- ರಹೊರ್ತು ಅನ್ಯರುಯಾರೂ ಇಲ್ಲವೆಂದು ಹೇಳಿದಳು."

ರಮೆಯು ಒಳಹೊಕ್ಕಳು. ಸಭಾಗೃಹವು ಚೆನ್ನಾಗಿ ಶ್ರಿಂಗರಿಸಲ್ಪಟ್ಟಿ ತ್ತು. ನಡುವೆ ಇದ್ದ ದೊಡ್ಡಮೇಜಿನ ಹತ್ತರ ಒಂದು ಉತ್ತಮಆಸನವು ವಿ ರಾಮಿಗಾಗಿ ಇದ್ದು, ಅದರಮೇಲೆ ಇಪ್ಪತ್ತೈದು ವರ್ಷದ ಓರ್ವ ತರುಣ ಸ್ತ್ರೀ ಯು, ವೃತ್ತ ಪತ್ರವನ್ನು ಓದುತ್ತ ಕುಳಿತುಕೊಂಡಿದ್ದಳು.

ರಮೆಯು ಒಳಗೆ ಬರುತಲೆ ಅವಳು ವೃತ್ತ ಪತ್ರವನ್ನು ಕೆಳಗಿಟ್ಟು, "ಬರ್ರಿ ಒಳಗೆ, ಕುಳಿತುಕೊಳ್ಳಿರಿ" ಎಂದು ಅತಿವಿನಯದಿಂದ ಹೇಳಿ ಕು ಳಿತುಕೊಳ್ಳಲು ಒಂದು ಆಸನವನ್ನು ಕೊಟ್ಟಳು. ರಮೆಯು ಅದರಮೇಲೆ ಕುಳಿತುಕೊಳ್ಳದೆ ಹಾಗೆಯೇ ನಿಂತುಕೊಂಡಳು.

ತಾವು ಯಾರಕಡೆಗೆ ಬಂದಿದ್ದಿರಿ? ಮತ್ತು ತಮ್ಮ ಕೆಲಸ ವೇನಿರುವ ದು? ಎಂದು ಆಸ್ತ್ರೀಯು ವಿಚಾರಿಸಿದಳು.

ರಮೆಗೆ ತನ್ನ ಉದ್ದೇಶವನ್ನು ಹೇಳಲು ದುಃಸಾಧ್ಯವಾಯಿತು. ಏನೇ ಇರಲಿ, ಆ ಅಪರಿಚಿತ ಸ್ತ್ರೀಯಳ ವಿಷಯಕ್ಕೆ ಆದರವು ಮಾತ್ರ ರಮೆಯಲ್ಲಿ ಉತ್ಪನ್ನವಾಗಹತ್ತಿತು. ಆದರೂ ಗುಕ್ಕುತ್ತ ಗುಕ್ಕುತ್ತ "ಹೌದು, ಒಂದು ಮಹತ್ವದ ಕೆಲಸವಿದೆ ಇರುವರೇನು ಇಂಜನಿಯರರು ಮನೆಯಲ್ಲಿ"

"ಇಲ್ಲ, ಅವರು ಮನೆಯಲ್ಲಿ ಇಲ್ಲ. ಆವುದೋ ಅಗತ್ಯದ ಕೆಲಸದಸಲುವಾಗಿ ಸಮೀಪದ ಹಳ್ಳಿಗಳೊಳಗೆ ಹೋಗಿದ್ದಾರೆ. ಈ ಹೊತ್ತು ಸಂಜೆಗೆ ಇಲ್ಲವೇ ನಾಳೆಮುಂಜಾನೆ ಬಂದೇಬರುವರು." ಎಂಬುದಾಗಿ ಹೇಳಿದಳು.

ಮುಗಿಯಿತು. ರಮೆಯ ಆಶೆಯು ನಿರಾಶೆಯಾಯಿತು. ಅವಳ ಕಣ್ಣುಗಳು ನೀರಿನಿಂದ ತುಂಬಿದವು. ಈವಿಷಯವು ಮಾತ್ರ ಆಸ್ತ್ರೀಗೆ ಕೂಡಲೆ ಹೊಳೆಯಿತು. ರಮೆಯ ಅಶ್ರು ಪೂರಿತ ಕಣ್ಣುಗಳನ್ನು ನೋಡಿ ಅವಳ ಹೃದಯವು ಕರಗಿತು.

"ಇಷ್ಟು ಅವಸರದ ಕೆಲಸವೇನಿದೆ? ನನ್ನ ಮುಂದೆ ಹೇಳಲಕ್ಕೆ ಬರುವಂತಿದ್ದರೆ ನಿಃಸಂಶಯವಾಗಿ ಹೇಳಲು ಅಡ್ಡಿ ಇಲ್ಲ"

'ರಮೆಯಲ್ಲಿ ಪುನಃ ಆಶಾಂಕುರವು ಉದ್ಭವಿಸಿತು. ಈಸ್ತ್ರೀಯಳಿಗೆ ಆ ಸರದವಿಷಯಕ್ಕೆ ಗೊತ್ತು ಇದ್ದರೂ ಇರಬಾರದೇಕೆ? ಇರುವದು. ಇನ್ನಾದರೂತುಸು ಆಶೆಯುಇರುವದು' ಇದನ್ನು ತಿಳಿದು ಅವಳಿಗೆ ತುಸು ಧೈರ್ಯ ಬಂದಂತಾಯಿತು. 'ನಿಜವಾಗಿ ಆಗೃಹಸ್ಥನ ಕಡೆಯಿಂದ ಹೊರಡದ ಕೆಲಸವು ಈ ಸುಸ್ವಭಾವದ ಸ್ತ್ರೀಯಳಿಂದ ಹೊರಡಲು ಶಕ್ಯವಿದೆ'

ರಮೆ— ನಿನ್ನಿನದಿವಸ ಯಾರಾದರೂ ತಮ್ಮಹತ್ತರ ಪುತ್ಥಳಿಯಸರವನ್ನು ತಂದಿದ್ದರೇ ಹೇಗೆ?

ಅಪರಿಚಿತಸ್ತ್ರೀ— ಹೌದು, ಯಾರೋ ತಂದಿದ್ದರು. ಏನು? ಅವರ ಅಡ್ಡಹೆಸರು ದೇಶಪಾಂಡೆ ಅಲ್ಲವೆ?

ದೇಶಪಾಂಡೆ ಎಂಬ ಹೆಸರನ್ನು ಕೇಳುತಲೆ ಮುನ್ನಾದಿನ ರಾತ್ರಿ ಭೀಮರಾವ ದೇಶಪಾಂಡೆ ಎಂದು ಉಚ್ಚರಿಸಿದಿದು ಅವಳ ಲಕ್ಷ್ಯದಲ್ಲಿ ಕೂಡಲೆ ಬಂದಿತು.

" ನಿಜವಾಗಿ ದೇಶಪಾಂಡೆಯವರು ತಮ್ಮ ಎಜಮಾನರೇನು? "

ರಮಾ— ಹೌದು. ಯಾರುತಮಗೆ ಸರವನ್ನು ಮಾರಿದರೋ ಅವರೇ!

" ಒಳ್ಳೇದು ತಾವು ಅನ್ನುವದಾದರೂ ಏನು? "

ರಮಾ— ಆವುದೋ ಅಕ್ಷಮ್ಯತಪ್ಪಿನಿಂದ ಹೆರವರ ಒಡಿವೆಯನ್ನು ತಂದು ಮಾರಿರುವರು ಈಗ ತಮ್ಮ ರೂಪಾಯಿಗಳನ್ನು ತೆಗೆದುಕೊಂಡು ಒಡಿವೆಯನ್ನು ತಿರುಗಿಕೊಟ್ಟರೆ, ಆ ಜನ್ಮ ಪರ್ಯಂತ ತಮ್ಮ ಉಪಕಾರದ ನೆನವು ಇರುವದು. ಕಡೆಯ ವಾಕ್ಯವನ್ನು ಉಚ್ಚರಿಸುವಾಗ ರಮೆಗೆ ಮಿತಿಮೀರಿದ ದುಃಖವು ಬಂದಿತು. ಪರಸ್ತ್ರೀಯಳಿಗೆ ತಿಳಿಯಬಾರದೆಂದು ಕೂಡಲೆ ಸೀರೆಯ ಶೆರಗಿನಿಂದ ಕಂಬನಿಗಳನ್ನು ಒರಸಿಕೊಂಡು ಕಿಡಿಕಿ ಯೊಳಗಿಂದ ಹೊರಗೆ ನೋಡ ಹತ್ತಿದಳು.

ಈ ಕೌತುಕದ ವಿನಂತಿಯನ್ನುಕೇಳಿ ಆ ಪರಸ್ತ್ರೀಯಳಿಗೂ ಸಖೇದಾಶ್ಚರ್ಯವಾಯಿತು, ಏನು ಮಾಡಬೇಕೆಂಬುದು ಅವಳಿಗೆ ತೋಚದಾಯಿತು. ಸರವನ್ನು ತಿರುಗಿ ಕೊಡಬೇಕೆಂದರೆ, ಎಜಮಾನರು ಮನೆಯಲ್ಲಿದ್ದಿಲ್ಲ ಕೊಡದಿದ್ದರೆ ಒಬ್ಬ ನಿರ್ಮಲಾಂತಃಕರಣದ ಸ್ತ್ರೀಯನ್ನು ನಿರಾಶಳನ್ನಾಗಿ ಮಾಡಿ ಸಂಕಟದಲ್ಲಿ ಕೆಡವಿದಂತಾಗುತ್ತಿತ್ತು.

ಈ ಹೊತ್ತು ಸಂಜೆಯ ವರೆಗೆ ಇಲ್ಲವೆ ನಾಳೆ ಮುಂಜಾವಿನ ವರೆಗೆ ತಮ್ಮಕಡೆಯಿಂದ ತಡೆಯಲು ಶಕ್ಯವಿಲ್ಲವೇ? ಅಂದರೆ ಅವರು ಮನೆಗೆ ಬರುತಲೆ—

ರಮಾ— ಅದುವರೆಗೆ ತಡೆಯುವದೆಂದರೆ ಮೈಮೇಲೆ ದುರ್ಧರಪ್ರಸಂಗವನ್ನು ತಂದು ಕೊಂಡಂತೆಯೇ ?

" ಒಳ್ಳೇದು ಯಾಕೆ ಇಷ್ಟೊಂದು ಅವಸರ? "

ರಮೆಯ ದುಃಖಸಾಗರವು ಉಕ್ಕೇರಿತು. ಅವಳುಅಸ್ಪಷ್ಟವಾಣಿಯಿಂದ " ಪದಾರ್ಥದ ಒಡೆಯರು ರೀತಿಯಪ್ರಕಾರ ಕೆಲಸಮಾಡಲು ಉಪಕ್ರಮಿಸಿದ್ದಾರೆ; ಕಾರಣ ಅದನ್ನು ತಾವು ತಿರುಗಿ ಕೊಟ್ಟರೆ ಪುಣ್ಯ ಬರುವದಲ್ಲದೆ ಒಂದು ಕುಟುಂಬದ ಮರ್ಯಾದೆ— "

ಮುಂದಿನ ಶಬ್ದಗಳನ್ನು ಉಚ್ಚರಿಸಲು ಅವಳಿಂದಾಗಲಿಲ್ಲ. ಅವಳು ಬಿಕ್ಕಿ ಬಿಕ್ಕಿ ಅಳಹತ್ತಿದಳು. ರಮೆಯ ಅಶ್ರು ಪೂರ್ಣ ನೇತ್ರಗಳೂ ಹಾಗೂ ಅವಳ ದೀನವಾಣಿಯೂ, ಅವಳ ನಿರ್ಮಲಾಂತಃಕರುಣದ ಸಾಕ್ಷಿಯನ್ನು ಕೊಡುತ್ತಿದ್ದವು.

ಅವಳು ಅತ್ತಿತ್ತ ವಿಚಾರಮಾಡಿ ಸರವನ್ನು ತಿರುಗಿ ಕೊಡಲು ನಿರ್ಧರಿಸಿದಳು. ಅವಳು ಹಾಗೆಯೇ ಎದ್ದು ತನ್ನ ಪೋಲಕದ ಕಿಸೆಯೊಳಗೆ ಕೈಹಾಕಿ ಕೀಲಿಯ ಸರವನ್ನು ಹೊರಗೆತೆಗೆದು ಹತ್ತರವೇ ಇಟ್ಟಿದ್ದ ಪೆಟ್ಟಿಗೆಯನ್ನು ತೆರೆದು ಅದರಲ್ಲಿದ್ದ ಸರವನ್ನು ತಂದು ರಮೆಯ ಮುಂದಿರಿಸಿದಳು.

ರಮೆಯು ಸಂಗಡತಂದಿದ್ದ ನೋಟುಗಳಗಂಟನ್ನು ಯಜಮಾನಿಣಿಯ ಮುಂದಿಟ್ಟು ಅವಳು ಎಣಿಸಿಕೊಳ್ಳುವವರೆಗೆ ಯಾವಕಡೆಗೂ ಹೋಗದೆ ಅಲ್ಲೇ ನಿಂತುಕೊಂಡಳು.

ಎಜಮಾನಿಯು ನೋಟುಗಳ ನಂಬರುಗಳನ್ನು ಹಚ್ಚಿಟ್ಟದ್ದ ಒಂದು ವಹಿಯನ್ನು ತಂದು ಅದರೊಳಗಣ ನಂಬರುಗಳನ್ನು ನೋಡಹತ್ತಿದಳು. ನೋಡ ನೋಡುತ್ತ ಆಚ್ಚರಿಗೊಂಡು “ ಇದು ಏನು ? ಇದರಲ್ಲಿ ನೂರು ರೂಪಾಯಿಯ ಒಂದು ನೋಟು ಇಲ್ಲವೇ ಇಲ್ಲ.

ರಮೆ— ಏನು? ನೂರುರೂಪಾಯಿಯು ಕಡಿಮೆಯೇ?

ಆಧರೆ ಇಷ್ಟುರೂಪಾಯಿಗಳು ಆದವಾದರೂ ಏನು ? ರೂಪಾಯಿಗಳು ಕೈಗೆಬರುತ್ತಲೆ, ಪತಿರಾಜರು ಸುರೆಯ ಸಲುವಾಗಿ ಖರ್ಚುಮಾಡಿರಬಹುದೇನು ? ಈಗ ಆಸರವು ಸಿಗುವಬಗೆ ಯಾದರೂ ಆವುದು ? ಇಷ್ಟು ರೂಪಾಯಿಗಳನ್ನು ಈಹೊತ್ತೇ ಒಮ್ಮಿಂದೊಮ್ಮೆ ಎಲ್ಲಿಂದ ತಂದುಕೊಡುವದು? ಇವೇ ಮೊದಲಾದ ವಿಚಾರಗಳು ಅವಳಲ್ಲಿ ಬರಹತ್ತಿದವು. ನಿರಾಶೆಯಿಂದ ಅವಳತಲೆಯು ತಿರುಗಿದಂತಾಗಿ ಅವಳಿಗೆ ಏನೂ ತೋಚದಾಯಿತು.

ಆಯ್ಯೋ ! ನಿನ್ನನ ದಿವಸವೇ ಆ ಚಂದ್ರಹಾರವನ್ನು ಕೊಟ್ಟಿದ್ದರೆ ಇಂಥ ದುರ್ಧರ ಪ್ರಸಂಗವು ಒದಗುತ್ತಿದ್ದಿಲ್ಲೆಂಬದಾಗಿ ಅವಳು ಹಳಹಳಿಸಹತ್ತಿದಳು. ಇನ್ನಾದರೂ ಅವರ ಬಿಡುಗಡೆಯ ದಶೆಯಿಂದ ಅಸರದ ಉಪ

ಯೋಗ ವಾಗಬಹುದು. ಆಸರವು ನೂರು ರೂಪಾಯಿಗಳ ಭರ್ತಿಯನ್ನು ಸಹಜವಾಗಿ ಮಾಡಬಹುದು; ಯಾಕಂದರೆ ಅದು ಒಂದುಶೇರಿನ ಸರವಿದ್ದು ಅದರ ಬೆಲೆಯು ಐನೂರು ರೂಪಾಯಿಗಳವರೆಗೆ ಆಗುತ್ತದೆಂದು ತಂದೆಯವರು ಒಂದೆರಡು ಸಾರೆ ಹೇಳಿದ್ದರು. ರಮೆಯ ಮನಸ್ಸು ಪುನಃ ತಿರುಗಹತ್ತಿತು. ಯಾಕಂದರೆ ಅದನ್ನು ಅವಳು ಇದುವರೆಗೂ ಯಾರಿಗೂ ಕೊಟ್ಟದ್ದಿಲ್ಲ ಆದರೆ ಮುಂದೆಸಂಭವಿಸುವ ಸಂಕಟದಮುಂದೆ ಅದುಅವಳಿಗೆ ಅಷ್ಟು ಮಹತ್ವದ್ದಾಗಿ ತೋರಲಿಲ್ಲ.

ಅವಳು ಆರೂಪಾಯಿಗಳನ್ನು ಅಲ್ಲಿಯೇಬಿಟ್ಟು "ಮನೆಗೆ ಹೋಗಿಬರುತ್ತೇನೆ" ಎಂದು ಹೇಳಿ, ಅವಸರದಿಂದ ಮನೆಗೆಬಂದು ಹತ್ತು ಹದಿನೈದು ನಿಮಿಷಗಳಲ್ಲಿ ಆಸರವನ್ನು ತೆಗೆದುಕೊಂಡುಬಂದು ಎಜಮಾನಿಯ ಮುಂದಿಟ್ಟು "ಇಗೋ ಈ ಸರವನ್ನು ತೆಗೆದುಕೊಳ್ಳಿರಿ! ಇದರ ಬೆಲೆಯು ಈ ಹೊತ್ತು ಐನೂರು ರೂಪಾಯಿಗಳ ವರೆಗೆ ಆಗುತ್ತದೆ. ತಾವು ಯಾರಿಗಾದರೂ ಮನಸ್ಸಿಗೆ ಬಂದರೆ ತಮ್ಮ ವಿಶ್ವಾಸಿಕ ಜನರಿಗೆ ತೋರಿಸಿರಿ. ನೂರು ರೂಪಾಯಿಗಳೊಳಗೆ ಇದನ್ನು ತಮ್ಮಲ್ಲಿ ಇಟ್ಟುಕೊಳ್ಳಿರಿ.

ಎಜಮಾನಿಯು ಕೈಯಲ್ಲಿ ತೆಗೆದುಕೊಂಡು, ಬಂಗಾರವನ್ನು ಚೆನ್ನಾಗಿ ಪರೀಕ್ಷಿಸಿನೋಡಿ ಅದನ್ನು ಇಟ್ಟುಕೊಂಡು ಪುತ್ಥಳಿಯಸರವನ್ನು ಕೊಡಲು ಒಡಂಬಟ್ಟಳು. "ಇಲ್ಲಿನೋಡು! ತಂಗೀ ನಾನು ಗಂಡಸರು ಇಲ್ಲದ ವೇಳೆಯಲ್ಲಿ ಬೆಳ್ಳಿಬಂಗಾರದ ವ್ಯವಹಾರವನ್ನು ಮಾಡಿದವಳಲ್ಲ; ಆದರೆ ನಿಮ್ಮಮೇಲೆ ಬಂದ ದುರ್ಘರ ಪ್ರಸಂಗವನ್ನು ನೋಡಿ ಈ ವ್ಯವಹಾರವನ್ನು ಮಾಡಲು ಉಪಕ್ರಮಿಸಿದ್ದೇನೆ. ಒಳ್ಳೇದುತೆಗೆದುಕೊಂಡು ಹೋಗು." ಆದರೆ ನಿಮ್ಮ ಮನೆಯ ವಿಳಾಸ ಹಾಗು ನಂಬರು ಮೊದಲಾದವುಗಳನ್ನು ಕೊಡುವದುಮಾತ್ರ ಅತ್ಯವಶ್ಯವಿದೆ. ಇಲ್ಲವಾದರೆ ನಮ್ಮ ಒಕ್ಕಲಗಿತ್ತಿಯು ಸ್ವತಃ ನಿಮ್ಮ ಮನೆಯ ವರೆಗೆ ಬಂದು ನೋಡಿಕೊಂಡು ಬರುತ್ತಾಳೆ, ಯಾಕಂದರೆ ವೇಳೆ ಬಂದಾಗ ವಿಚಾರಿಸಲಿಕ್ಕೆ ಬರುವದು

ರಮೆಯು ಸರವನ್ನು ತೆಗೆದುಕೊಂಡು ಅವ್ವಾಸವರ ಆಭಾರವನ್ನು ಮ

ದೇ ಪದೇ ಮನ್ನಿಸಿ, ಒಂದುಸಾರೆ ಕೃತಜ್ಞತಾ ಪೂರ್ವಕ ದೃಷ್ಟಿಯಿಂದ ಅವಳನ್ನು ನೋಡಿ ಮನೆಯ ದಾರೀ ಹಿಡಿದಳು.

ಈ ಪ್ರಕಾರ ಸರವನ್ನು ದೊರಕಿಸುವ ಅತ್ಯಂತ ಮಹತ್ವದ ಕೆಲಸವನ್ನು ಮಾಡಿದ ಮೇಲೆ ಅವಳಿಗೆ ತನ್ನ ತಲೆಯ ಮೇಲಿನ ಅರ್ಧದಕ್ಕಿಂತ ಹೆಚ್ಚು ಒಜ್ಜೆಯು ಕಡಿಮೆ ಯಾದಂತೆ ಯಾಯಿತು. ಇನ್ನೂ ಸಂಕಟವು ಪೂರ್ಣ ಪರಿಹಾರ ವಾದಂತೆ ಆಗಿದ್ದಿಲ್ಲ

ಧರ್ಮವೀರರಾಯರ ಶಿಪಾಯಿಗಳು ಮಾಧವರಾಯನು ಮನೆಗೆ ಬರುತ್ತಲೆ ಬಂದು ಹಿಡಿದುಕೊಂಡು ಹೋಗುವ ಸಂಭವವಿತ್ತು. ಆದುದರಿಂದ ಅವರು ಬರುವದಕ್ಕಿಂತ ಮೊದಲೇ ಸರವನ್ನು ಒಯಿದು ಕೊಡಬೇಕೆಂದು ನಿರ್ಧರಿಸಿದಳು. ಆದರೆ ಅದನ್ನು ತೆಗೆದುಕೊಂಡುಹೋಗಿ ಅವರಿಗೆ ಕೊಡುವ ದಾರಿಯು ಅವಳಿಗೆ ತೋಚದಾಯಿತು. ಪತಿಯು ಮನೆಗೆ ಬಂದನಂತರ ಅವನದ್ವಾರದಿಂದ ಮುಟ್ಟಿಸುವದರಲ್ಲಿ ವಿಶೇಷ ಮರ್ಯಾದೆಯು ಹೋಗುವದಲ್ಲದೆ, ನಿಶ್ಚಯವಾಗಿ ತುರಂಗ ವಾಸ ಭೋಗಿಸುವ ಪ್ರಸಂಗವು ಒದಗುವದೆಂದು, ತನ್ನ ಮರ್ಯಾದೆಯು, ಕಿಂಚಿತ್ ಅತಿಕ್ರಮಣ ಮಾಡಿನಡೆದರೂ ಚಿಂತೆಯಿಲ್ಲ, ತಾನೇ ತೆಗೆದುಕೊಂಡುಹೋಗಿ ಕೊಡಬೇಕೆಂದು ನಿಶ್ಚಯಿಸಿದಳು. ಅವಳು ಮನಸ್ಸಿನಲ್ಲಿ ಈಶ್ವರನನ್ನು ನೆನೆದು, ಮನೆಗೆ ತಿರುಗಿಬರುವ ವರೆಗೆ, ತನ್ನ ಪತಿಗೆ ಯಾವಸಂಕಟವು ಒದಗಬಾರ ದೆಂಬದಾಗಿ ದೇವರನ್ನು ಸ್ಮರಿಸಿ ಸರವನ್ನು ಸೀರೆಯ ಸೆರಗಿನಲ್ಲಿ ಕಟ್ಟಿಕ್ಕೊಂಡು, ಧರ್ಮವೀರರ ಮನೆಯದಾರೀ ಹಿಡಿದಳು. ಮತ್ತು ಕ್ಷಣಮಾತ್ರದಲ್ಲಿಯೇ ಆಭವ್ಯಮನೆಯ ತಲೆಬಾಗಿಲಿಗೆಬಂದು ಅಲ್ಲಿದ್ದ ದ್ವಾರರಕ್ಷಕನಿಗೆ ತಾನುಬಂದ ಸಂಗತಿಯನ್ನು ಮೇಲೆಹೋಗಿ ಎಜಮಾನರಿಗೆ ತಿಳುಹಿಸು ಎಂಬದಾಗಿ ಹೇಳಿ, ಉತ್ತರದ ಮಾರ್ಗಪ್ರತೀಕ್ಷೆ ಮಾಡುತ್ತ ಚಾತಕ ಪಕ್ಷಿಯಂತೆ ನಿಂತುಕೊಂಡಳು.

ವಾಚಕ ಮಹಾಶಯರೇ ! ಇತ್ತ ಧರ್ಮವೀರರಾಯರ ಮನೆಯಲ್ಲಿ ಯಾವಗೊಂದಲ ವೆದ್ದಿರುವ ದೆಂಬದನ್ನು ಮೊದಲು ನೋಡೋಣ. ರಾಯರು ಒಂದು ಕುರ್ಚಿಯಮೇಲೆ ಕುಳಿತುಕೊಂಡಿದ್ದರು. ಅವರ ಮುಂದೆ ಒಂದು ದೊಡ್ಡ ಮೇಜು ಇದ್ದು ತುಸುದೂರದ ಅಂತರದಲ್ಲಿ ಬಹಳಜನರು

ನಿಂತುಕೊಂಡಿದ್ದರು. ಎಲ್ಲಜನರಮುಂದೆ ಮಾಧವರಾಯನು ಅಧೋಮು ಖನಾಗಿ ನಿಂತುಕೊಂಡಿದ್ದನು. ಹಿಂದಿಬ್ಬರು ಸಿಪಾಯಿಯರುನಿಂತುಕೊಂಡಿದ್ದರು. ರಾಯರ ಬಲಭಾಗದಲ್ಲಿ ಎರಡು ಪರದೆಗಳನ್ನು ಇಳಿಬಿಟ್ಟದ್ದರು. ಯಾಕಂದರೆ ರಾಯರು ಕೆಲಸದಲ್ಲಿರುವ ವೇಳೆಯಲ್ಲಿ, ಯಾರಾದರೂ ಬೆಟ್ಟಿಗೆ ಬಂದರೆ ಇವರಕಡೆಯಿಂದ ಒಳಗೆ ಬರುವದಕ್ಕೆ ಅಪ್ಪಣೆಯಾಗುವವರೆಗೆ ಅವರು ಆ ಜವನಿಕೆಯ ಮರೆಯಲ್ಲಿಯೇ ನಿಲ್ಲಬೇಕಾಗುತ್ತಿತ್ತು. ಅದಕ್ಕಾಗಿಯೇ ಆಜವನಿಕೆಗಳನ್ನು ಇಳಿಬಿಟ್ಟದ್ದರು.

ರಾಯರು ಮಾಧವನ ಜಬಾನಿಯನ್ನು ತೆಗೆದು ಕೊಳ್ಳಲಿಕ್ಕೆ ಪ್ರಾರಂಭಿಸಿದರು. ರಾಯರು ತುಸು ಕಠೋರದಿಂದ “ ಏನು! ಮಾಧವರಾಯಾ, ನೀನು ಅನ್ನುವದಾದರೂ ಏನು? ಏನು! ಸರವನ್ನು ತೆಗೆದುಕೊಂಡಿರುವ ದಿಲ್ಲವೋ? ನೋಡು! ದೇವರಆಣೆಯಾಗಿ ಸತ್ಯವನ್ನು ಹೇಳು. ಅಸತ್ಯ ಮಾಡಬೇಡ ಸದ್ಯಕ್ಕೆ ಕೆಲಸವು ನನ್ನ ಕೈಯೊಳಗಿರುವದು. ಪೋಲೀಸರ ವಶಕ್ಕೆ ಹೋದನಂತರ ನಿನ್ನ ಗತಿಯು ನೆಟ್ಟಗಾಗಲಿಕ್ಕಿಲ್ಲ. ”

ಮಾಧವನು ತಾನು ನೊಡಿದವನಲ್ಲೆಂದು ಹೇಳುವದಕ್ಕೆ ಮೊದಲೇ ನಿಶ್ಚಯಿಸಿದ್ದನು ಕಳವುಸಹಜ ಮುಚ್ಚುವದೆಂಬದಾಗಿ ಅವನುತಿಳಿದಿದ್ದನು, ಯಾಕಂದರೆ ಸರವು ಒಬ್ಬರಿಗೂ ಗೊತ್ತಿಲ್ಲದಂತೆ ವಿಕ್ರಯ ವಾಗಿಹೋಗಿತ್ತು ಆದುದ ರಿಂದ ಅವನು ಧೈರ್ಯದಿಂದ — “ ಛೇ ನಿಮ್ಮ ಸರದ ವಿಷಯಕ್ಕೆ ನನಗೆ ತಿಲಾಂಶವಾದರೂ ಗೊತ್ತಿಲ್ಲ. ನಾನು ನೋಡಿಲ್ಲ ಸಹ ಅದನ್ನು ಕಣ್ಣಿನಿಂದ. ನಾನು ಆಹೊತ್ತು ತಮ್ಮ ಮನೆಗೆ ಬಂದದ್ದೇ ತಪ್ಪು. ಇಲ್ಲದಿದ್ದರೆ ಇಂಥ ಕಠಿಣಪ್ರಸಂಗವು ನನ್ನಮೇಲೆ ಎಂದಿಗೂ ಬರುತ್ತಿದ್ದಿಲ್ಲ. ”

ಯಜಮಾನ — ಮಾಧವರಾಯಾ! ತುಸು ವಿಚಾರಮಾಡಿ ಉತ್ತರ ಕೊಡು. ಇಲ್ಲದಿದ್ದರೆ ಕೆಟ್ಟೇ; ಒಳ್ಳೇದು !! ಈ ಪತ್ರವು ಈ ನಿನ್ನಪತ್ರವು ಇಲ್ಲಿ ಹೇಗೆ ಬಂದಿತು.

ಮಾಧವನು ಕೈಯಲ್ಲಿ ಪತ್ರವನ್ನು ತೆಗೆದುಕೊಂಡು ಚೆನ್ನಾಗಿ ನೋಡಿದನು. ನೋಡುತಲೆ ನಿಃಸಂಶಯವಾಗಿ ಅದುತನ್ನದೇ ಎಂದು ತಿಳಿಯಿತು.

ಇದಲ್ಲದೆ ಮೊದಲನೇದಿವಸ ಆಪತ್ರವುತನ್ನ ಬಳಿಯಲ್ಲಿತ್ತೆಂದು ಅವನಿಗೆ ಪೂರ್ಣಗೊತ್ತಿತ್ತು.

ಇಷ್ಟರಲ್ಲಿ ರಾಯರು— " ಈ ಪತ್ರವು ನಿನ್ನದೇ ಇರುವದು. ಇದರಲ್ಲಿ ಲೇಶಮಾತ್ರವು ಸಂಶಯವಿಲ್ಲ. ಈಹೊತ್ತೇ ಒಬ್ಬ ಸೇವಕನಕೈಯಲ್ಲಿ ಈ ಪತ್ರವನ್ನು ಕೊಟ್ಟು ನಿಮ್ಮ ಮನೆಗೆ ಕಳುಹಿಸಿದ್ದೆನು. ಆವೇಳೆಯಲ್ಲಿ ನೀನು ಮನೆಯಲ್ಲಿ ಇದ್ದಿಲ್ಲವಂತೆ. ಈ ಪತ್ರವನ್ನು ನಿನ್ನ ಕುಟುಂಬಕ್ಕೆ ತೋರಿಸಿರುತ್ತಾದೆ, ಅವರು ಈ ಪತ್ರವು ನಿನ್ನ ಹತ್ತರ ಇತ್ತೆಂದು ಒಡಂಬಟ್ಟರಂತೆ"

ಮಾಧವನು ಒಮ್ಮಿಂದೊಮ್ಮೆ ಗಾಬರಿಯಾದನು. ಏನು! ಈಪತ್ರವನ್ನು ಸೇವಕನು ಮನೆಗೆ ಕೊಂಡೊಯ್ದಿದ್ದನೇ? ಅಂದಮೇಲೆ ತನ್ನಮೇಲೆ ಬಂದ ಕಳವಿನ ಆರೋಪವು ತನ್ನಹೆಂಡತಿಗೆ ತಿಳಿದಿರಲಿಕ್ಕೇಬೇಕು, ಅಯ್ಯೋ! ಅವಳ ಅವಸ್ಥೆ ಏನಾಗಿರಬಹುದು. ಇರಲಿ, ಅವಳಾದರೂ ನೋಡಿದ್ದೆನೆಂದು ಅಚಾತುರ್ಯದ ಮಾತುಗಳನ್ನು ಏಕೆ ಆಡಿದಳು? ಹೆಂಗಸರು ಮೊದಲೇ ಪುಕ್ಕ ಸ್ವಭಾವದವರು. ಅದರಲ್ಲಿ ಕಳವಿನ ವಿಷಯದಸುದ್ದೀ ತೆಗೆದರಂತೂ ತೀರಿತು, ಅವರ ಹೇಡಿತನಕ್ಕೆ ಎಣೆಯೇಇಲ್ಲ. ಈ ರೀತಿಯಾಗಿ ಅವನು ತನ್ನ ಹೆಂಡತಿಯನ್ನು ಮನಸ್ಸಿನಲ್ಲಿ ಒಂದೇಸವನೆ ಬಯ್ಯ ಹತ್ತಿದನು. ಇಷ್ಟರಲ್ಲಿ ಒಬ್ಬ ಸೇವಕನು ಬಂದು ರಾಯರಿಗೆ ಮುಜುರೆಮಾಡಿ—

" ಧನಿಯರೇ, ಹೊರಗೆ ತಲೆಬಾಗಿಲ ಬಳಿಯಲ್ಲಿ ಓರ್ವ ತರುಣಿಯು ಬಂದುನಿಂತಿರುತ್ತಾಳೆ; ಅವಳು ಸರತಂದಿರುವೆನೆಂಬದಾಗಿ ಹೇಳುತ್ತಾಳೆ. ಕಾರಣ ಅವಳನ್ನು ಒಳಗೆ ಕರತರಲೇ ಹೇಗೆ? " ಎಂಬದಾಗಿ ಕೇಳಿದನು.

ಸೇವಕನು ಆಡಿದಮಾತುಗಳನ್ನು ಕೇಳಿ, ರಾಯರು ಅಚ್ಚರಿಗೊಂಡು ಮೇಲೆ ಕೆಳಗೆ ನೋಡಹತ್ತಿದರು. ಇದೇನು! ಹೊಸಪೇಚಾಟವು. ಒಬ್ಬತರುಣಿಯು ತಮ್ಮಲ್ಲಿ ಕಳೆದುಹೋದ ಪುತ್ಥಳಿಯ ಸರವನ್ನು ತಂದಿರುವಳಂತೆ ಇದರಲ್ಲಿರುವದಾದರೂ ಏನು? ಮಾಧವನಮೇಲೆ ನಿರರ್ಥಕ ಅಪವಾದ ಹೊರಿಸಿದಂತಾಯಿತು. ಇವೇ ಮೊದಲಾದ ವಿಚಾರಗಳು ಬರಹತ್ತಿದವು.

ರಾಯರು ಮಾಧವನಕಡೆಗೆ ಮೋರೆತಿರುವಿ - " ದಯಮಾಡಿ ತಾವು

ಇಳಿಬಿಟ್ಟ ಪರದೆಯಮರೆಯಲ್ಲಿ ತುಸುಹೊತ್ತುನಿಲ್ಲಿರಿ.'' ಎಂದು ಹೇಳಿದರು. ಎಲ್ಲರೂ ಇಳಿಬಿಟ್ಟ ಬಟ್ಟೆಯ ಮರೆಗೆ ಹೋದಮೇಲೆ, ಸೇವಕನನ್ನು ಕರೆದು ತರುಣಸ್ತ್ರೀಯನ್ನು ಕರೆತರಲು ಹೇಳಿದರು.

ತುಸು ಅವಧಿಯಲ್ಲಿಯೇ ರಮೆಯು ರಾಯರ ಸಭೆ ಗ್ರಹದಲ್ಲಿ ಬಂದು ನಿಂತಳು. ಅವಳನ್ನು ಅಲ್ಲಿ ಒಮ್ಮೆಂದೊಮ್ಮೆ ನೋಡುತಲೆ ಎಲ್ಲರೂ ಆಶ್ಚರ್ಯ ಗೊಂಡರು. ಮಾಧವನಿಗಂತೂ ಆಶ್ಚರ್ಯವೂ ಸಂತಾಪವೂಆಗಿ ಅವನಿಗೆ ಏನೂ ತಿಳಿಯದೆ ಹೋಯಿತು. ರಾಯರು ಮಾತ್ರ ರಮೆಯನ್ನು ಕೂಡಲೆ ಗುರ್ತಿಸಿದರು. ಯಾಕಂದರೆ ಅವಳು ಎಷ್ಟೋಸಾರೆ ಅವರಕುಟುಂಬದ ಕಡೆಗೆ ಬಂದಿದ್ದನ್ನು ನೋಡಿದ್ದರು. ಆದರೆ, ಅವರ ನೋಡುವಿಕೆಯಲ್ಲಿ ಆಗಿನ ರಮೆಗೂ ಈಗಿನ ರಮೆಗೂ ಬಹಳೇ ಸ್ಥಿತ್ಯಂತರವಿತ್ತು. ಯಾಕಂದರೆ ಪತಿಯ ಸಲುವಾಗಿ ಅವಳದೇಹವು ಸೊರಗಿ ಕೊರಗಿ ಕೃಶವಾಗಿತ್ತು.

ಅವಳ ಈ ದುಸ್ಥಿತಿಯನ್ನು ನೋಡಿ ರಾಯರಿಗೂ ಸಹ ಕನಿಕರ ಬಂದಿತು. ರಾಯರು ತಾವಾಗಿಯೇ '' ತಂಗೀ! ರಮಾ ಇತ್ತ ಕಡೆಗೆ ಬಂದಿದ್ದಿ '' ಎಂದುವಿಚಾರಿಸಿದರು. ಇಷ್ಟುಹೊತ್ತಿನವರೆಗೆ ರಮೆಯು ಅಧೋವದನಳಾಗಿ ನಿಂತಿದ್ದಳು. ಅವಳಿಗೆ ಮೊದಲು ಮಾತನಾಡಲು ಧೈರ್ಯ ಸಾಲಲಿಲ್ಲ. ಆದರೆ ರಾಯರು ಪ್ರೀತಿಯಿಂದ ವಿಚಾರಿಸಿದ ಪ್ರಶ್ನೆಕೇಳಿ ಅವಳಿಗೆ ತುಸು ಧೈರ್ಯ ಬಂದಂತಾಗಿ—

'' ಆವುದೋ ಅಕ್ಷಮ್ಯತಪ್ಪಿನಿಂದ ತಮ್ಮ ಸರವು ನಮ್ಮಲ್ಲಿ ಬಂದಿದುಂ ಅದನ್ನು ತಮ್ಮಕಡೆಗೆ ಒಪ್ಪಿಸಿ ಬರುವದಕ್ಕೆ ಹೇಳಿದ್ದರಿಂದ, ಬಂದಿರುವೆನು' ತಾವು ಆದತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು '' ಎಂದು ಹೇಳಿ, ಸರವನ್ನು ಹೊರಗೆ ತೆಗೆದು ಮೇಜಿನಮೇಲಿಟ್ಟು ಮನೆಗೆ ಹೋಗುವದಕ್ಕಾಗಿ ರಾಯರ ಅಪ್ಪಣೆಯ ಮಾರ್ಗಪ್ರತೀಕ್ಷೆ ಮಾಡುತ್ತ ನಿಂತುಕೊಂಡಳು

'' ತಂಗೀ ಈ ಸರವು ನಿಮ್ಮಲ್ಲಿ ಹೇಗೆ ಬಂದಿತು? ''

'' ಅದು ಆವದೂ ನನಗೆ ಗೊತ್ತಿಲ್ಲ. ಸ್ವತಃ ಅವರೇ ಬರುತ್ತಿದ್ದರು. ಪ್ರಕೃತಿಯ ಅಸ್ವಸ್ಥತೆಯ ಮೂಲಕ ಅವರು ಬರಲಿಲ್ಲ, ನಾನೇಬಂದೆನು ''

ಪತಿಯು ಇಳಿಬಟ್ಟ ಬಟ್ಟೆಯ ಮರೆಗೆ ನಿಂತದ್ದು ತನ್ನ ಎಲ್ಲಮಾತುಗ ಳನ್ನು ಕೇಳುತ್ತಿದ್ದುದು, ಆಪತಿವ್ರತಿಗೆ ಸ್ವಲ್ಪಾದರೂಗೊತ್ತಿದ್ದಿಲ್ಲ. ರಾಯರಿ ಗೆ ತಾವು ಈಗ ಏನು ಮಾತಾಡಬೇಕೆಂಬುದು ತಿಳಿಯದಾಯಿತು.

ರಮೆಯು ಅಸತ್ಯಮಾತಾಡಿದ್ದೇನು ನಿಜ; ಆದರೆ ಅದುಕೇವಲ ತನ್ನ ಪತಿಯನ್ನು ಸಂಕಟದೊಳಗಿಂದ ಬಿಡುಗಡೆ ಮಾಡಬೇಕೆಂಬದಾಗಿ. ಇಷ್ಟು ಎಲ್ಲ ಧೈರ್ಯದ ಕೆಲಸವನ್ನು ಮಾಡಿದ್ದಕ್ಕಾಗಿ ರಾಯರು ಕೌತುಕ ಬಟ್ಟರು. ಅವರು ಅವಳಿಗೆ ಯಾವಪ್ರಕಾರದ ವ್ಯಸನ ಮಾಡಬಾರ ದೆಂಬದಾಗಿ ಹೇಳಿ ಮನೆಗೆ ಕಳುಹಿಕೊಟ್ಟರು.

ನಿರ್ಮಲಾಂತಃಕರಣದಿಂದ ರಮೆಯು ಮನೆಯ ದಾರೀ ಹಿಡಿದಳು. ಪತಿಯನ್ನು ಸಂಕಟದೊಳಗಿಂದ ಮುಕ್ತಮಾಡಿದ್ದಕ್ಕಾಗಿ ದಯಾಘನನಾದ ಈಶ್ವರನನ್ನು ಮನಸ್ಸಿನಲ್ಲಿ ಶತಶಃ ವಂದಿಸಿದಳು. ಇದಲ್ಲದೆ ಪತಿಯ ಬಿಡುಗ ಡೆಯ ದಶೆಯಿಂದ ಅಸತ್ಯ ಮಾತಾಡಿದ್ದಕ್ಕಾಗಿ ಅವಳು ದೇವರನ್ನು ಕುರಿತು ಮನಸ್ಸಿನಲ್ಲಿಯೇ ಕ್ಷಮೆ ಬೇಡಿದಳು.

ಇತ್ತ ರಮೆಯು ಮನೆಗೆ ಹೋದನಂತರ ರಾಯರು ಮಾಧವನ ಹೊ ರ್ತಾಗಿ ಎಲ್ಲರಿಗೂ ಮನೆಗೆ ಹೋಗಲು ಅಪ್ಪಣೆಕೊಟ್ಟರು. ಅಪ್ಪಣೆಯ ಮೇ ರೆಗೆ ಎಲ್ಲರೂ ಮನೆಗೆಹೋದರು. ಆ ಬಡ ಮಾಧವನುಮಾತ್ರ ಅಧೋಮು ಖನಾಗಿ ನಿಂತುಕೊಂಡಿದ್ದನು. ಅವನ ಮನಸ್ಸಿನಲ್ಲಿ ಈ ವೇಳೆಯಲ್ಲಿ ನಾನಾ ಪ್ರಕಾರದ ವಿಚಾರಗಳು ಬರುತ್ತಿದ್ದವು. ಪತ್ನಿಯು ಸರವನ್ನು ಹೇಗೆ ದೊರಿ ಕಿಸಿದಳೆಂದು ಆಶ್ಚರ್ಯವೂ ಆಯಿತು. ತನ್ನನ್ನು ಉಳಿಸುವದಕ್ಕಾಗಿ ಅವಳು ಮಾಡಿದ ಸಹಾಸವನ್ನು ನೋಡಿ ಕೌತುಕವೂ ಆಯಿತು. ತಾನು ಕಳವು ಮಾಡಿದ್ದು ತನ್ನಪತ್ನಿಗೆ ತಾನು ತಿಳಿಸದಿದ್ದರೂಕೂಡ ಅವಳೇ ಕಳವಿನ ಗೊತ್ತುಹಚ್ಚಿ ನಾಲ್ಕುಜನರಲ್ಲಿಹೊರಗೆಹಾಕಿ ತನ್ನನ್ನು ಉಳಿಸಿಕೊಂಡಿದ್ದಳು ಇದನ್ನು ನೋಡಿ ಅವನಿಗೆ ಬಹಳೇ ನಾಚಿಕೆ ಬಂದಿತು. ಆದುದರಿಂದ ಅವ ನಿಗೆ ರಾಯರ ಕಡೆನೋಡಲು ಧೈರ್ಯಸಾಲಲಿಲ್ಲ.

ಕಡೆಗೆ ರಾಯರೇ ಮಾಧವನನ್ನುದ್ದೇಶಿಸಿ— "ಏನು ಮಾಧವ ರಾ

ಯರೇ! ಸರವನ್ನು ತಂದುಕೊಟ್ಟದ್ದಕ್ಕಾಗಿ, ಮನಸ್ಸಿನಲ್ಲಿ ತಾವು ತಮ್ಮ ಪತ್ನಿಯನ್ನು ಬಯ್ಯುತ್ತಿರಬಹುದಲ್ಲವೇ? ಎಲೋ! ಮಾಧವರಾಯನೇ ದೇವರ ದಯದಿಂದ ದೊರಕಿದ ಅಂಥ ಪತಿವ್ರತೆಯ ಯೋಗ್ಯತೆಯು ನಿನಗೆ ಎಂದು ತಿಳಿಯಬೇಕು? ಸದಸದ್ವಿವೇಕ ಬುದ್ಧಿಯೂ ಪಾಪ ಭೀರುತ್ವವೂ, ಓದುಬರೆಯದ ಸ್ತ್ರೀಯರಲ್ಲಿಯೂಸಹ ಇರಬೇಕು; ಆದರೆ ನಿಮ್ಮಂಥ ಓದು ಬರೆದ ಗಂಡಸರಲ್ಲಿ ಇರಬಾರದೆಂದರೆ ಎಂಥಲಾಂಛನವು! ಇರಲಿ ಸುರೆಯ ಮುಂದೆ ಎರಡನೆಯದು, ಆವುದೂ ನಿಮಗೆ ಮಹತ್ವ ತೋರುವದಿಲ್ಲ!

ಇದನ್ನು ಕೇಳುತ್ತ ಮಾಧವನು ಸುಮ್ಮನೆ ನಿಂತುಕೊಂಡಿದ್ದನು. ಇನ್ನು ಮಾಡುತ್ತಾನೇನು? ಮೊದಲೇ ನಾಚಿಕೆಯಿಂದ ಅವನ ಮೋರೆಯು ಕಪ್ಪಿಟ್ಟಿತ್ತು ಆದರಲ್ಲಿ ರಾಯರ ಬುದ್ಧಿವಾದದಿಂದಂತೂ ಅವನು ತೀರ ಹಣ್ಣಾಗಿ ಬಂದನು: ಕಡೆಗೆ ರಾಯರ ಪಾದದಮೇಲೆಬಿದ್ದು "ನನ್ನ ಕಣ್ಣುಗಳು ಈಹೊತ್ತು ತೆರೆದವು. ಈ ಹೊತ್ತಿನಿಂದ ತಮ್ಮ ಪಾದಸಾಕ್ಷಿಯಾಗಿ ನಾನು ಸುರೆಯನ್ನು ಮುಟ್ಟುವದಿಲ್ಲ. ತಾವುಹೇಳಿದಂತೆ ನಡೆಯಲಿಕ್ಕೆ ಸ್ವಲ್ಪಾದರೂ ತಪ್ಪುವದಿಲ್ಲ" ಎಂದು ಹೇಳಿದನು.

ಮರುದಿವಸದಿಂದ ಪೂರ್ವದಂತೆ ತನ್ನ ಮೊದಲಿನ ಸ್ಥಳದಮೇಲೆ ಬರುವದಕ್ಕಾಗಿ ಹೇಳಿ ರಾಯರು ಮಾಧವನಿಗೆ ಮನೆಗೆ ಹೋಗಲು ಅಪ್ಪಣೆ ಕೊಟ್ಟರು.

✣ ✣ ✣ ✣ ✣ ✣ ✣ ✣

ಸಂಜೆಯಮುಂದಿನ ವಿಷಯವು. ಇಡೀದಿವಸ ಸೂರ್ಯನ ಪ್ರಖರವಾದ ಬಿಸಿಲಿನಿಂದ ಬಳಲಿದ ಜನರು, ಹೊತ್ತು ಮುಳುಗವ ಮುಂದೆ ಮನೆಯ ಅಂಗಳಗಳಲ್ಲಿ ಗಾಳಿಗೆ ಮೈಯೊಡ್ಡಿ ಕುಳಿತುಕೊಂಡಿದ್ದರು. ಸಾಯಂಕಾಲದ ತಂಗಾಳಿಯು ಪ್ರತಿಯೊಬ್ಬರ ಮನಸ್ಸಿಗೂ ಆನಂದವನ್ನೀಯುತ್ತಿತ್ತು. ರಮಾ ಮಾಧವರು ಗತಕಾಲದ ಸುಖದು:ಖದ ಮಾತುಗಳನ್ನಾಡುತ್ತ ಕುಳಿತು ಕೊಂಡಿದ್ದರು. ರಮೆಯು ಸರದೊರಿಕಿಸಿದ ಸುದ್ದಿಯನ್ನು ಹೇಳುತ್ತಿದ್ದಳು. ಮಾಧವನು ಆದನ್ನು ಕೇಳುತ್ತ "ಹೊತ್ತಿನಸರಿಯಾಗಿ ರಾಯರಲ್ಲಿಗೆ ಸವನ್ನು ತಂದು ತನ್ನನ್ನು ಉಳಿಸಿದ್ದು ಇದೆಲ್ಲ ದೇವರ ಮಹಿಮೆಯು. ಅವ

ನನ್ನು ಎಷ್ಟು ಸ್ಮರಿಸಿದರೂ ತೀರದು. ರಮೆ! ನನಗೆ ಎಲ್ಲವೂ ತಿಳಿದಿದೆ ನಿಜವಾಗಿ ನಿನ್ನಂಥ ಸಹಧರ್ಮಿಚಾರಿಣಿಯನ್ನು ನಾನು ಕಂಡಿದ್ದು ನನ್ನಪೂರ್ವ ಜನ್ಮದ ಸುಕೃತವು '' ಹೀಗೆ ಅನ್ನುತ್ತ ಮಾಧವನು ಅವಳಕೋಮಲವಾದ ಹಸ್ತಗಳನ್ನುಹಿಡಿದು ತನ್ನಹತ್ತರ ಕಳ್ಳಿರಿಸಿಕೊಂಡು— ರಮೆ ಕಳವುಮಾಡಲಿಕ್ಕೆಸಹ ಹಿಂಜರಿಯದೆ ಇದ್ದ ದುರ್ವ್ಯಸನಿೀಪತಿಯ ದಶೆಯಿಂದ ನೀನು ಮಾಡಿದ ಸಾಹಸವಾದರೂ ಎಷ್ಟು !!

ರಮೆ— ಇರಲಿ! ಹಿಂದಿನ ದುಃಖದ ಸಂಗತಿಗಳನ್ನು ಮನಸ್ಸಿನಲ್ಲಿ ತಂದುಕೊಂಡು ನೊಂದು ಕೊಳ್ಳುವ ದೇತಕ್ಕೆ? ಆ ಕಾಲದಲ್ಲಿ ಈ ಶುಭದಿವಸಗಳು ಬರಬಹುದೆಂದು ನನಗೆಎಳ್ಳಷ್ಟಾದರೂ ತೋರಿದ್ದಿಲ್ಲ. ಇದೆಲ್ಲ ನಮ್ಮ ಮೇಲಿರುವ ದೇವರ ಕೃಪೆಯು. ಆದದ್ದು ಆಗಿಹೋಯಿತು

ಮಾಧವ-ಹಾಗಲ್ಲ! ಕೆಟ್ಟುಹೋದ ಸಂಸಾರದ ಕಾಲಮಾಪಕ ಯಂತ್ರವನ್ನು ಸರಿಮಾಡುವದಕ್ಕಾಗಿ, ಇನ್ನುಮುಂದೆ ನಿನ್ನ ವಿಚಾರದ ಹೊರಗೆ ನಾನು ಎಂದೂ ನಡೆಯುವದಿಲ್ಲ

ರಮೆಯ ನೇತ್ರಗಳು ಆನಂದಾಶ್ರುಗಳಿಂದ ಸಂಪೂರಿತವಾದವು.

ಇಷ್ಟರಲ್ಲಿ ಒಂದು ಮೋಟಾರ ಗಾಡಿಯು ಬಂದು ಅವರ ಮನೆಯ ಮುಂದೆ ನಿಂತುಕೊಂಡಿತು. ಅದರೊಳಗಿಂದ ಉತ್ತಮ ಉಡಿಗೆ ತೊಡಿಗೆಗಳನ್ನು ಧರಿಸಿದ ಸಮಾರು ನಾಲ್ವತ್ತುವರ್ಷದ ಒಬ್ಬಗಂಭೀರ ಪುರುಷನು ಕೆಳಗೆ ಇಳಿದನು. ಅವರನ್ನು ನೋಡಿ ರಮೆಯು ಒಳಗೆಹೋಗವವಳು, ಅಷ್ಟರಲ್ಲಿ ಆಗೃಹಸ್ಥನು " ರಮಾ " ಎಂದು ಕೂಗಿದನು.

ಕೂಡಲೆಅವಳಿಗೆ ಧ್ವನಿಯು ಗುರುತು ಹತ್ತಿದಂತಾಗಿ ಯಾರು? 'ಅಪ್ಪಾ' ಎಂದು ಮುಂದೆ ಬಂದು ತಂದೆಗೆ ನಮಸ್ಕರಿಸಿದಳು.

ಅಷ್ಟಪುತ್ರ ಸೌಭಾಗ್ಯವತೀ ಭವ. ಎಂದು ಆಶೀರ್ವದಿಸಿ ವಸಂತರಾರಾಯರು ಸಂಗಡ ತಂದಿದ್ದ ಚಂದ್ರಹಾರವನ್ನು ಮಗಳ ಕೊರಳೊಳಗೆ ಹಾಕಿದರು.

" ಆಗ ಅವಳು ಆಶ್ಚರ್ಯದಿಂದ ಇದು ಏನು ತಾಯಿ! ಈ ಸರವು ಅಪ್ಪಾ!! ನಿಮ್ಮಲ್ಲಿ ಹೇಗೆಬಂದಿತು. "

" ನನ್ನಲ್ಲಿ ಈಸರವು ಹೇಗೆಬಂದಿತೆಂಬದನ್ನು ಮೋಟರದಲ್ಲಿ ಇದ್ದವ ವಳಿಗೆ ಹೋಗಿ ಕೇಳು " ಎಂದು ಹೇಳಿದರು.

ಇಷ್ಟರಲ್ಲಿ ಮೋಟಾರ ದೊಳಗಿಂದ ಒಬ್ಬ ಸ್ತ್ರೀಯೂ ಕೆಳಗೆ ಇಳಿದಳು ಅವಳನ್ನು ರಮೆಯು ಕೂಡಲೆ ಗುರ್ತಿಸಿದಳು. ಚಂದ್ರಹಾರವನ್ನು ಕೊಟ್ಟ ಪುತ್ಥಳಿಯಸರವನ್ನು ಅವರಕಡೆಯಿಂದಲೇ ಬಿಡಿಸಿಕೊಂಡು ಬಂದಿದ್ದಳು.

ಅಪರಿಚಿತಸ್ತ್ರೀ— ರಮಾ ನೀನೆ ಸರವನ್ನು ತಂದು ನನಗೆ ಕೊಟ್ಟದ್ದಿ ಯಲ್ಲವೆ? ಎಂದು ಕೇಳಿದಳು. ರಮೆಯು ಹೊಕಾರಾರ್ಥ ಉತ್ತರವನ್ನುಮಾ ತ್ರ ಕೊಟ್ಟಳು.

ಅಪರಿಚಿತಸ್ತ್ರೀ— ಊರಿಂದಬರುತಲೆ ಅವರಕೈಯಲ್ಲಿ ಸರವನ್ನು ಕೊ ಟ್ಟೆನು. ಅವರು ಅದನ್ನು ಕೂಡಲೇ ಗುರ್ತಿಸಿ, ಹಾಗಾದರೆ ರಮೆಯು ಇ ದೇ ಊರಲ್ಲಿ ಇರುವಳು " ಎಂಬದಾಗಿ ಹೇಳಿದರು.

ಅಪರಿಚಿತಸ್ತ್ರೀ— " ಇನ್ನುಮೇಲಾದರೂ ತಿಳಿಯಿತೇ? ನಾನುಯಾ ರೆನ್ನುವದು. ರಮೆಗೆ ಸಾವಕಾಶವಾಗಿ ಎಲ್ಲವೂ ತಿಳಿಯಿತು.

ಆದರೆ ಇಂಜನಿಯರರ ವಿಷಯದಲ್ಲಿ, ತುಸು ಹೇಳುವದು, ಇಲ್ಲಿ ಅತ್ಯವಶ್ಯವಿದೆ. ರಮೆಯು ಅತ್ತಿಯ ಮನೆಗೆ ಹೋದನಂತರ, ತುಸು ದಿ ವಸಗಳಲ್ಲಿಯೇ ವಸಂತರಾಯರು ವೆಂಕಟರಾಯರ ತಂಗಿಯಾದ ಸರಸ್ವತಿ ಯೊಂದಿಗೆ ಲಗ್ನವಾದರು. ಇಷ್ಟರಲ್ಲಿ ಸರಸ್ವತಿಯು ಮಾಧ್ಯಮಿಕ ಶೀಕ್ಷಣವ ನ್ನು ಮುಗಿಯಿಸಿದ್ದಳು. ಲಗ್ನವಾದನಂತರ ತುಸು ದಿವಸಗಳಲ್ಲಿಯೇ ವರ್ಗ ವಾಗಿ ಇಂಜನಿಯರರು ಭಾಗ್ಯನಗರಿಗೆ ಬಂದರು. ಭಾಗ್ಯನಗರದಲ್ಲಿರುವ ವೇಳೆಯಲ್ಲಿಯೇ, ಒಬ್ಬದುರ್ವ್ಯಸನಿ ಮಿತ್ರನ ಸಹವಾಸದಿಂದ ವ್ಯಸನಕ್ಕೆಬಿ ದ್ದು ಕಳವು ಮಾಡಿ ಮಾಧವನು ಆಸರವನ್ನು ವಸಂತರಾಯರಿಗೆ ತಂದು ಮಾರಿದನು. ಮಿತಿಮೀರಿದ ಮದಿರೆಯ ವ್ಯಸನದಿಂದ"ಮಾಧವನು ಕ್ರಶನಾ ಗಿ ಹೋಗಿದ್ದನು. ಆದುದರಿಂದ ಇಂಜನಿಯರರು ಇವನನ್ನು ಗುರ್ತಿಸಲಿಲ್ಲ.

ರಮೆಯಾದರೂ ಸರಸ್ವತಿಯನ್ನು ಈ ಮೊದಲು ಎಂದೂ ನೋಡಿದ್ದಿ ಲ್ಲವಾದ ಕಾರಣ ಗುರ್ತಿಸದೆ ಹೋದದ್ದು ಆಶ್ಚರ್ಯವಲ್ಲ.

ಇರಲಿ! ಈ ಹೊತ್ತಿನಲ್ಲಿ ಮಾಧವನಿಗೆ ತನ್ನ ಪೂರ್ವಕೃತ್ಯದ ನೆನಪು ಆದುದರಿಂದ ವಸಂತರಾಯರನ್ನು ಮಾತಾಡಿಸಲು ಧೈರ್ಯ ಸಾಲಲಿಲ್ಲ. ಅತ್ತೆ ಮಾವಂದಿರ ಕೈಕೆಳಗೆ ಮಾಧವನು ತುಸು ದಿವಸಗಳಲ್ಲಿಯೇ ಸುಧಾರಿಸಿದನು. ಸದ್ಯಕ್ಕೆ ಧರ್ಮವೀರರಾಯರ ಕೃಪಾಕಟಾಕ್ಷವು ಇವನಮೇಲೆ ಪೂರ್ಣವಿದ್ದು, ಎರಡುನೂರಾ ಐವತ್ತು ರೂಪಾಯಿಗಳ ವೇತನವನ್ನು ಹೊಂದುತ್ತಲಿದ್ದಾನೆ.

ಈ ಪ್ರೇಮೀ ದಂಪತಿಗಳ ಹೊಟ್ಟೆಯಲ್ಲಿ ಒಂದು ಗಂಡುಮಗವು ಜನಿಸಿದ್ದು, ಅದಕ್ಕೆ **ರಮಾಕಾಂತ** ನೆಂದು ನಾಮಕರಣ ಮಾಡಿದ್ದಾರೆ.

ಎಲ್ಲರೂ ಸುಖದಿಂದ ಭಾಗ್ಯನಗರಿಯಲ್ಲಿ ಕಾಲಕಳೆಯುತ್ತಲಿದ್ದಾರೆ.



# ರಘುನಾಥನ, ಅಪೂರ್ಣ ವಿಚಾರದ ಅಸಹಕಾರ.



ಬ್ರಿಟಿಶ ದಕ್ಷಣ ಹಿಂದುಸ್ಥಾನದಲ್ಲಿ ಸಾಧಾರಣವಾಗಿ, ಎಲ್ಲಬಗೆಯಿಂದಲೂ ಮುಂದಕ್ಕೆ ಬಂದಿರುವ ಪ್ರತಿಯೊಂದು ಪ್ರಾಂತದ ಮುಖ್ಯಸ್ಥಳದಲ್ಲಿ, ವಿಶ್ವ ವಿದ್ಯಾಸಿಲಯುಗಳಿದ್ದರೂ, ವಿದ್ಯಾವ್ಯಾಸಂಗಕ್ಕಾಗಿ 'ಪುಣೆ' ಪಟ್ಟಣವು ಹೇಗೆ ಮುಂದಕ್ಕೆ ಬಂದದೆಯೋ, ಮೈಸೂರ ಪ್ರಾಂತದ ರಾಜಧಾನಿ ಮೈಸೂರ ಇರುತ್ತಿದ್ದು, ಅಲ್ಲಿ ಮಹಾ ವಿದ್ಯಾಲಯುಗಳಿದ್ದರೂ, ಬೆಂಗಳೂರ ಆ ರಾಜ್ಯದಲ್ಲಿ ಹೇಗೆ ಮುಂದಡಿ ಇಟ್ಟಿರುವದೋ, ಅದರಂತೆ ನಮ್ಮ ನಿಜಾಮುರ ರಾಜ್ಯದಲ್ಲಿ, ಭಾಗ್ಯನಗರಿಯು(ಹೈದ್ರಾಬಾದ) ರಾಜ್ಯಧಾನಿಯು ಮುಖ್ಯ ಪಟ್ಟಣವಿದ್ದು, ಅಲ್ಲಿಎಲ್ಲಬಗೆಯ ವಿದ್ಯಾಲಯುಗ ಳಿರುತ್ತಿದ್ದರೂ, ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕಾಗಿ ಕಲಬುರ್ಗಿ (ಗುಲಬುರ್ಗಾ) ಯು ಪ್ರಸಿದ್ಧಿ ಹೊಂದಿರುತ್ತದೆ. ಇಲ್ಲಿಮಹಾವಿದ್ಯಾಲಯವು ಇಲ್ಲದಿದ್ದರೂ, ಮಾಧ್ಯಮಿಕ ಶಿಕ್ಷಣವು ಬಹು ಉತ್ತಮ ರೀತಿಯಿಂದ ದೊರೆಯುತ್ತದೆ. ಇಲ್ಲಿ ಎಲ್ಲಬಗೆಯ ಮಾಧ್ಯಮಿಕ ಶಾಲೆಗಳೂ ಇರುತ್ತವೆ. ಉಸ್ಮಾನಿಯಾ ವಿಶ್ವ ವಿದ್ಯಾಸಿಲಯುದ ಒಂದು ಶಾಲೆಯೂ, ಮುಂಬೈ ವಿಶ್ವ ವಿದ್ಯಾಪೀಠದ ಒಂದು ಶಾಲೆಯೂ, ಮದ್ರಾಸ ವಿದ್ಯಾಪೀಠದ ಶಾಲೆಯೂ ಇರುತ್ತದೆ. ಇದಲ್ಲದೆ ಪ್ರಾಥಮಿಕ ಶಾಲೆಗಳೂ ಸಾಕಾಗುವಷ್ಟು ಇರುವವು; ಆದುದರಿಂದ ನೆರೆಹೊರೆಯ ಎಲ್ಲ ಪರಕೀಯ ಪ್ರಾಂತದವರಿಗೂ ಸಹ ಇರಲು ಬರುವಂತಿದೆ ನಿಜಾಮು ಕರ್ನಾಟಕ ಭಾಗದ ಮುಖ್ಯಸ್ಥಳ ವಿದ್ದುದರಿಂದ, ಪ್ರಾಂತದ ಎಲ್ಲಬಗೆಯ ಕಚೇರಿಗಳೂ ಇರುತ್ತವೆ. ಹವೆಯು ಸಮಶೀತೋಷ್ಣ ವಿದ್ದುದರಿಂದ ಜನರಿಗೆ ಇರಲು ಬಹು ಉತ್ತಮವಾದ ಸ್ಥಳವು. ಪಟ್ಟಣವು ಸಾಧಾರಣ ತರಗತಿ ಯದಿದ್ದು, ಬ್ರಹ್ಮಪುರ, ಮಕ್ತಮಪುರ, ಗಾಜೀಪುರ, ಒಕ್ಕಲಗೇರಿ, ಜಗತಿ ಇವೇ ಪಟ್ಟಣದ ಮುಖ್ಯಭಾಗಗಳು ಸಾಧಾರಣವಾಗಿ ಇತರ ಭಾಗಗಳಲ್ಲಿಯೂ ಕೂಡ, ಬ್ರಾಹ್ಮಣ, ಲಿಂಗಾಯಿತರ ಜನವಸ್ತಿ ಇರುತ್ತಿದ್ದರೂ, ಎಲ್ಲಕ್ಕೂ ಹೆಚ್ಚಿಗೆ ಮೇಲ್ಕಂಡ ಪಂಗಡಗಳ ವಸ್ತಿಯು ಬ್ರಹ್ಮಪುರದಲ್ಲಿಯೇ ಬಹಳ.

ಇದಲ್ಲದೆ ಪುರಾತನ ಪ್ರಸಿದ್ಧ ದೇಶಾಯಿ, ದೇಶಮುಖ, ದೇಶಪಾಂಡೆ ಸಾಹುಕಾರ, ಮುಂತಾದವರ ಭವ್ಯಮನೆಗಳು ಇದೇ ಭಾಗದಲ್ಲಿರುವವು. ಈ ಭಾಗಕ್ಕೆ ಮುಂಬೈ ವಿಶ್ವ ವಿದ್ಯಾಪೀಠಕ್ಕೆ ಸಂಬಂಧಪಟ್ಟ ನೂತನ ವಿದ್ಯಾಲಯವು ಶೀರ ಸಮೀಪದಲ್ಲಿದೆ.

ಸಾಲಾರಜಂಗ ಸಂಸ್ಥಾನ ದೊಳಗಣ, ಕೋಪಣನಗದೆ, ಕೃಷ್ಣರಾಯುರು, ರಾಯಚೂರ ತಾಲೂಕದಾರ ಕಚೇರಿಯಲ್ಲಿ ಒಂದು ಮಾಧ್ಯಮಿಕ ತರಗತಿಯ ವೇತನದಮೇಲೆ ಕೆಲಸ ಮಾಡುತ್ತಿದ್ದು, ಸ್ವಗ್ರಾಮದಲ್ಲಿ ಅಣ್ಣನವರ ನಿಧನದನಂತರ, ಅಣ್ಣನ ಮಗನ ವಿದ್ಯಾಭ್ಯಾಸದ ಸಲುವಾಗಿ, ಕಲಬುರ್ಗಿಗೆ ವರ್ಗಮಾಡಿಸಿಕೊಂಡು ಬಂದಿದ್ದರು. ಅಣ್ಣನಮಗ ರಘುನಾಥನ ಶಿಕ್ಷಣವು, ಮ್ಯಾಟ್ರಿಕ್ ಪರೀಕ್ಷೆಯ ವರೆಗೆ ನೂತನ ವಿದ್ಯಾಲಯದಲ್ಲಿ ಆದನಂತರ, ಉಚ್ಚಶಿಕ್ಷಣದ ಸಲುವಾಗಿ, ಹನ್ನೆರಡು ಸಂಕಟಗಳನ್ನು ಹತ್ತಿಟ್ಟುಕೊಂಡು ಪುಣೇಕ್ಕೆ ಕಳುಹಿದರು. ರಘುನಾಥನು ತೈಲಬುದ್ಧಿಯವನಿದ್ದುದರಿಂದ, ಪ್ರತಿಯೊರುಷ ತಪ್ಪದಲೆ ತೇರ್ಗಡೆ ಹೊಂದುತ್ತ, ಎಮ್. ಎ. ಎಂಬ ಹಿಂದೂಸ್ತಾನದ ಉಚ್ಚತರಗತಿಯ ಪರೀಕ್ಷೆಯಲ್ಲಿ ಉತ್ತೀರ್ಣನಾದನು. ತೇರ್ಗಡೆ ಹೊಂದಿ ಮರುಳಿ ಕಲಬುರ್ಗಿಗೆ ಬಂದನಂತರ, ಕೃಷ್ಣರಾಯರು ದೊಡ್ಡ ದೊಡ್ಡ ಅಧಿಕಾರಸ್ತರ ಶಿಫಾರಸು ಮಾಡಿಸಿ ತಿಂಗಳಿಗೆ ೧೫೦ ರೂಪಾಯಿ ಬರುವ ಒಂದು ಉದ್ಯೋಗವನ್ನು ಸಹಕಾರಿ ಸಂಘದಶಾಖೆಯಲ್ಲಿ ಹಚ್ಚಿಸಿಕೊಟ್ಟರು

ಬಾಲ್ಯದಲ್ಲಿಯೇ ಮದುವೆ ಯಾದುದರಿಂದ, ಸೊಸೆಯನ್ನು ಕರೆಯಿಸಿಕೊಂಡು ಅವರೀರ್ವರಿಗೆ ಇರಲು ಒಂದು ಮನೆಯನ್ನೂ, ಸಂಸಾರಕ್ಕೆ ಬೇಕಾಗುವ ಎಲ್ಲಸಾಮಾನಗಳ ವ್ಯವಸ್ಥೆಯನ್ನು ಮಾಡಿಕೊಟ್ಟರು. ಇದಲ್ಲದೆ ತಾವು ತಪ್ಪದಂತೆ ದಿನಾಲು ಒಂದುಸಾರೆ ಹೋಗಿ ನಾಲ್ಕು ಬುದ್ಧಿಯ ಮಾತುಗಳನ್ನೂ, ವಿನೋದದ ಮಾತುಗಳನ್ನಾಡಿ ಮನೆಗೆ ಬರುತ್ತಿದ್ದರು. ಹೀಗೆ ಕಕ್ಕಮಕ್ಕಳು ಬೇರೆ ಬೇರೆ ಮನೆಯಲ್ಲಿರುತ್ತಿದ್ದರೂ ಒಂದೇಮನೆಯಲ್ಲಿದ್ದಂತೆ ಇರುತ್ತಿರಲಾಗಿ, ೧೯೩೧ನೆಯ ಕ್ರಿಸ್ತಶಕದ ಅಸಹಕಾರತೆಯ ಗಡಿಬಿಡಿಯು ಪ್ರಾರಂಭವಾಯಿತು. ಸುತ್ತು ಮುತ್ತಲಿನ ಎಲ್ಲಪ್ರಾಂತಗಳಲ್ಲಿಯು

ಅಸಹಕಾರದ ಗಾಳಿಯು ಒತ್ತರದಿಂದ ಬೀಸುತ್ತಿರುವಾಗ, ನಟ್ಟನಡುವಿದ್ದ ಈ ಪ್ರಾಂತವು ಕೊಂಚವಾದರೂ ಗಾಳಿತಗಲದೆ ಹೇಗೆತಾನೆ ಉಳಿಯುವದು ಕೃತಿಯಿಂದ ತಾಕಲು ಬರುವಂತಿರದಿದ್ದರೂ, ಅಂಗಾಂಗದಲ್ಲಿ ಸಂಚರಿಸುವ ವೇಗವನ್ನು ಯಾರುತಾನೇ ತಡೆಯ ಬಲ್ಲರು. ಮನಸ್ಸಿನಲ್ಲಿಯ ಮಂಡಿಗೆ ಯಿಂದ ಪ್ರಯೋಜನವೇನೂ ಆಗಲಾರದು. ಆದರೂ ಸಹಾನು ಭೂತಿಯ ಮೂಲತತ್ವವು ದೊಡ್ಡದಲ್ಲವೇ?

ವಿದ್ಯಾವಿನಯ ಸಂಪನ್ನನಾದ, ಸ್ವಾಭಿಮಾನಿ ತರುಣ ರಘುನಾಥನ ಲ್ಲಿಯೂ, ಈವಿಷಯದ ವಿಚಾರಗಳು ಬಲವಾಗಿ ಬರಹತ್ತಿದವು. ಕೆಲಸಕ್ಕೆ ಶರಣುಹೊಡೆದು, ಸೋಲ್ಲಾಪುರದ ಸತ್ಯಾಗ್ರಹದಜನರನ್ನು ಕೂಡಬೇಕೆಂಬ ಲವಲವಿಕೆಯು ಉತ್ಪನ್ನ ವಾಗಹತ್ತಿತು. ಬರಬರುತ್ತ ಬಹಿರಂಗವಾಗಿ, ತನ್ನ ಕೆಲಸ ಬಿಡಬೇಕೆಂಬ ವಿಚಾರವನ್ನು ಹೇಳ ಹತ್ತಿದನು.

ಕೃಷ್ಣರಾಯರ ಕಿವಿಯವರೆಗೂ ಈ ಸುದ್ದಿಯು ಹೋಯಿತು. ಒಂದು ದಿನ ಕೃಷ್ಣರಾಯರು ಮಗನನ್ನು ಮನೆಗೆ ಕರೆಯಿಸಿಕೊಂಡು, ಮಮತೆಇಂದ ಬುದ್ಧಿವಾದವನ್ನು ಹೇಳ ತೊಡಗಿದರು. “ ವಿಚಾರಮಾಡು, ರಘು, ತಿಳಿದು ನೋಡು. ನನ್ನಮಾತಿನ ಕಡೆಗೆ ತುಸು ಲಕ್ಷಗೊಡು ಪೂರ್ಣ ವಿಚಾರ ಮಾಡದೆ ಅವಸರದಿಂದ ಯಾವಕೆಲಸಕ್ಕೂ ಕೈಹಾಕಬಾರದು. ”

ರಘು— ನಾನು ಎಷ್ಟೋಸಲ ವಿಚಾರ ಮಾಡಿರುವೆನು. ಪೂರ್ಣ ವಿಚಾರಮಾಡಿ ನಾನು ನನ್ನ ಸಂಕಲ್ಪವನ್ನು ದೃಢಮಾಡಿರುವೆನು.

ಕೃಷ್ಣರಾಯ— ಇತ್ತಿತ್ತಲಾಗಿ ಆವಬಗೆಯ ಭ್ರಮಿಷ್ಟತನವೋಸೇರಿದಂತಾಗಿ, ನಿನ್ನಲ್ಲಿ ವಿಚಾರಶಕ್ತಿಯೇ ಇಲ್ಲವಂತಾಗಿದೆ. ಇಲ್ಲದಸಲ್ಲದ ವಿಚಾರ ಕ್ಕೊಳಗಾಗದೆ, ನಾನು ಹೇಳಿದಂತೆ ಕೇಳು.

ರಘು— ಇನ್ನುಮೇಲೆ ನೀವು ಎಷ್ಟು ಉಪದೇಶಮಾಡಿದರೂ, ನನ್ನ ಮನಸ್ಸಿನಮೇಲೆ ಪರಿಣಾಮ ವಾಗುವಂತಿಲ್ಲ

ಕೃಷ್ಣರಾಯ— ರಘು! ನಿನ್ನ ಈ ದುರಾಗ್ರಹದ ಸಲುವಾಗಿ ನನ್ನ ಹೃದಯಕ್ಕಾಗುವ ಬಲವಾದ ಆಘಾತದ ಕಲ್ಪನೆಯು ನಿನ್ನಲ್ಲಿ ಎಳ್ಳಷ್ಟಾದರೂ ಬರುವಲ್ಲದಲ್ಲ. ನನ್ನಿಂದ ಈ ಮಾತನ್ನು ನೀನು ತರಿಸಬಾರದಾಗಿತ್ತು. ನಿರ್ವಾಹವಿಲ್ಲದೆ ಆಡಲೇ ಬೇಕಾಗಿದೆ. ತಂದೆತಾಯಿಗಳಿಲ್ಲದ, ಓರ್ವ ಅನಾಥ ಬಾಲಕನೆಂದು ಇದುವರೆಗೆ ನಿನ್ನನ್ನು ಸಂರಕ್ಷಿಸುತ್ತ ಬಂದೆವು. ಹೊಟ್ಟೆಯ ಮಗನಿಗಿಂತಲೂ ಹೆಚ್ಚಾಗಿ ನೋಡಿದೆವು. ನಾನು ಶ್ರೀಮಂತನಲ್ಲ, ಪಿತ್ರಾರ್ಜಿತ ಆಸ್ತಿಯು ನಮಗಿಲ್ಲ, ರಟ್ಟೆಮುರಿದು ಹೊಟ್ಟೆ ತುಂಬಿ ಕೊಳ್ಳುವ ಓರ್ವ ಬಡಮನುಷ್ಯನಿರುವೆನು. ಚಿಕ್ಕಂದಿನಲ್ಲಿ ನಿನ್ನಲ್ಲಿ ಕಂಡು ಬಂದ ಬುದ್ಧಿಬಲವನ್ನು ನೋಡಿ ಹನ್ನೆರಡುಕಷ್ಟಗಳನ್ನು ಹತ್ತಿಕ್ಕಿಕೊಂಡು ಇಲ್ಲಿಯವರೆಗೆ ಶಿಕ್ಷಣಕೊಡಿಸಿ ಸನ್ಮಾರ್ಗಕ್ಕೆ ಹಚ್ಚಿದೆವು ಈಗ ಅದರ ಪ್ರತಿಫಲವೇ-

ರಘು— ಅಯ್ಯೋ, ಅಪ್ಪಾ! ಪ್ರತಿ ಫಲವೇ !! ಈವಿಷಯವನ್ನು ಮಾತ್ರ ತಿಲಮಾತ್ರವೂ ಮನಸ್ಸಿನಲ್ಲಿ ತರಬೇಡಿರಿ. ನಿಮ್ಮ ಈ ಉಪಕಾರವನ್ನು ನಾನು ಜೀವದಿಂದಿರುವವರೆಗೂ ಮರೆಯುವಂತಿಲ್ಲ. ಲಾಲನ, ಪಾಲನ ಉತ್ತಮ ವಿದ್ಯಾ ಪ್ರಸಂಗವನ್ನು ಮಾಡಿಸದಿದ್ದರೆ, ಈ ಹೊತ್ತಿಗೆ ನನ್ನ ಸ್ಥಿತಿಯು ಏನಾಗುತ್ತಿತ್ತೋ ದೇವರೇಬಲ್ಲ. ತಮ್ಮ ಈ ಅಮೂಲ್ಯ ಉಪಕಾರಕ್ಕಾಗಿ, ನಾನು ನನ್ನ ತನುವನ್ನು ಕೊಯಿದು, ತಮ್ಮಅಡಿವಸ್ತ್ರವನ್ನು ಮಾಡಿದರೂ, ತಮ್ಮ ಉಪಕಾರವು ಮುಟ್ಟುವಂತಿಲ್ಲ. ಇದು ನನಗೆ ಪೂರ್ಣ ಗೊತ್ತಿರುವದು. ರಘುನಾಥನ ಕಣ್ಣುಗಳು ನೀರ ದುಂಬಿದವು. ಕುತ್ತಿಗೆಯ ಸಿರಗಳು ಬಿಗಿದವು. ಮುಂದೆ ಮಾತಾಡಲು ಅವನಿಂದಾಗಲಿಲ್ಲ.

ಮಗನ ಈ ಸ್ಥಿತಿಯನ್ನು ನೋಡಿ ಕೃಷ್ಣರಾಯರಿಗೂ ಪರಮಾವಧಿ ದುಃಖವಾಯಿತು ಅವರು ವಿವೇಕಿ ಮಗನೆದುರಿಗೆ ಬಾಯಿಗೆ ಬಂದಂತೆ ಮಾತಾಡಿದ್ದಕ್ಕಾಗಿ ತಮ್ಮನ್ನು ತಾವೇ ಹಳಿದುಕೊಳ್ಳ ಹತ್ತಿದರು. " ರಘು ನಿನ್ನ ಈ ಕೃತಜ್ಞತೆಗಾಗಿ ನನಗೆ ತುಂಬಾ ಆನಂದವಾಗಿದೆ. ಇಷ್ಟೆಲ್ಲ ನಿನಗೆ ತಿಳಿಯುತ್ತಿದ್ದು ನಾನು ಹೇಳಿದ ಮೇರೆಗೆ ಏಕೆ ನಡೆಯುವದಿಲ್ಲ. ನಾನು ಹೇಳುವದು ನಿನ್ನಕಲ್ಯಾಣಕ್ಕಲ್ಲದೆ ಸ್ವಾರ್ಥದ ದಶೆಯಿಂದ ಅಲ್ಲ. ನೀನು ನೆಟ್ಟಗೆ ಇದ್ದರೆ ನಾನು ನೆಟ್ಟಗೆ.

ರಘು— ಅಪ್ಪಾ ಇದೆಲ್ಲ ನಿಜವು.

ಕ್ರಿಷ್ಣರಾಯ— ಹಾಗಾದರೆ ನಾನು ಹೇಳಿದಂತೆ ಕೇಳುವದಿಲ್ಲವೇಕೆ? ಇಷ್ಟುದಿವಸಗಳವರೆಗೆ ನಿನ್ನಲ್ಲಿಯ ಆಜ್ಞಾಧಾರಕತನವು ನಿಜವಾಗಿ ಹೇಳಿಕೊಳ್ಳುವಂತಿತ್ತು. ಇದುವರೆಗೆ ನೀನು ನನ್ನ ಯಾವ ಮಾತನ್ನು ಮೀರಿನಡೆದಿಲ್ಲ. ಈ ಹೊತ್ತೆ ದುರಾಗ್ರಹ ತನವನ್ನು ಇಷ್ಟು ಬಲವತ್ತರವಾಗಿ ನಡೆಸಿರುವ ಕಾರಣವು ನನಗೆ ಕಿಂಚಿತ್ತಾದರೂ ತಿಳಿಯದಂತಾಗಿದೆ.

ರಘು.... ಅಪ್ಪಾ, ನಿಮ್ಮ ಅಜ್ಞೆಯು ನನಗೆ ಶಿರಸಾವಮಾನ್ಯವದೆ. ನಿಮ್ಮ ಅಪ್ಪಣೆಯನ್ನು ಪಾಲಿಸುವದೂ ನಿಮ್ಮ ಇಚ್ಛೆಯಮೇರೆಗೆ ನಡೆಯುವದೇ ನನ್ನ ಆದ್ಯ ಕರ್ತವ್ಯವು; ಆದರೆ ಈ ಹೊತ್ತಿನ ಪ್ರಸಂಗವು, ಅದರಲ್ಲಿಯೂ ಈವಿಷಯವು ಮಗನನ್ನು ಮುಂದೆ ಮಾತಾಡಗೊಡದೆ ಕೃಷ್ಣರಾಯರು, ಈ ಹೊತ್ತಿನ ಪ್ರಸಂಗವೇನು ನಿಜವಾಗಿ ವಿಲಕ್ಷಣ ಪ್ರಸಂಗವೇಸರಿ,

ನಿಜವಾಗಿ ನಮ್ಮ ದೇಶದಲ್ಲಿಯ, ಪ್ರತಿಯೊಬ್ಬರೂ ಪಾರತಂತ್ರ್ಯ ದ, ಸಂಕೋಲೆ ಗಳಿಂದ ಬಿಗಿಯಲ್ಪಟ್ಟಿದ್ದಾರೆ. ಲಕ್ಷಾವಧಿಜನರು ಅನ್ನವಸ್ತ್ರವಿಲ್ಲದೆ ಬಳಲುತ್ತಿದ್ದಾರೆ. ಇಡೀ ಭಾರತ ವರ್ಷದಲ್ಲಿ ದರಿದ್ರ ಅಗ್ನಿ ನಾರಾಯಣನು ಪ್ರಜ್ವಲಿಸ ತೊಡಗಿದ್ದಾನೆ. ನಾವು ನಮ್ಮ ಪೂರ್ವ ವೈಭವವನ್ನು ಸಂಪಾದಿಸ ಬೇಕಾಗಿದೆ. ಗತವೈಭವವನ್ನು ನೆನಿಸುತ್ತ. ಕುಳಿತು ಕೊಳ್ಳುವ ಸಮುಯವು ಇದಲ್ಲ. ಲಕ್ಷಾವಧಿಬಂಧು ಭಗಿನಿಯರು ಉಣ್ಣಲು ಅನ್ನ ಉಡಲು ಬಟ್ಟೆಯಿಲ್ಲದೆ ಗೋಳಾಡುತ್ತಿರುವರು. ಎಲ್ಲರಿಗೂ ಅನ್ನವಸ್ತ್ರಸರಿಯಾಗಿ ಸಿಗುವಹಾಗೆ ಪ್ರತಿಯೊಬ್ಬರೂ ಯತ್ನಿಸಲೇ ಬೇಕು. ಮೇಲ್ಕಂಡ ಎಲ್ಲಕಷ್ಟಗಳಿಂದ ಮುಕ್ತರಾಗಬೇಕಾದ ಮಾರ್ಗವೆಂದರೆ, ಸ್ವಾತಂತ್ರತೆಯ ಸಂಪಾದನೆಯು. ರಘುನಾಥನು ನಡುವೆ ಬಾಯಿಹಾಕಿ,

"ಅಪ್ಪಾ, ನಾನನ್ನುವದಾದರೂಇದೇ. ಸ್ವಾತಂತ್ರತೆಯ ಸಂಪಾದನೆಗಾಗಿ, ದೇಶದಲ್ಲಿ ಯಾವ ಯಾವ ವೇಳೆಯಲ್ಲಿ, ಸ್ವಾತಂತ್ರ್ಯ ಪ್ರಾಪ್ತಾಯ ಚಲನ ವಲನವು ನಡೆಯುವದೋ, ಆ ಯಾವೇಳೆಯ ರಾಷ್ಟ್ರದೇವಿಯ ಕೂಗಿಗೆ ಧ್ವನಿಕೊಡುವದು, ಪ್ರತಿಯೊಬ್ಬ ಭಾರತೀಯ ತರುಣನ ಆದ್ಯಕ

ರ್ತವ್ಯವು. ಆದುದರಿಂದಲೇ ನಾನಾದರೂ ಈ ಮಾರ್ಗವನ್ನು ಕುರಿತು ನಡೆ ಯ ಬೇಕಾಗಿದೆ. ''

ಕೃಷ್ಣರಾಯ.... ಎಲ್ಲಮಾತುಗಳಿಗೂ ನನ್ನ ಒಪ್ಪಿಗೆ ಇದೆ. ರಾಷ್ಟ್ರ ದೇವಿಯ ಧ್ವನಿಗೆ ಧ್ವನಿಕೊಡಬಾರದೆನ್ನುವ ಅಭಿಪ್ರಾಯವೂ ನನ್ನಲ್ಲಿಲ್ಲ. ಅ ದರಂತೆ ನಿನಗಾದರೂ ನಾನು ಉಪದೇಶ ಮಾಡುವದಿಲ್ಲ. ಯಾವದೇಶದಲ್ಲಿ ನಾವು ಜನ್ನ ವೆತ್ತಿರುವೆವೋ; ಆದೇಶದ ಅಭಿಮಾನಕಟ್ಟುವದೂ ಹಾಗೂ ದೇಶೋದ್ಧಾರದ ದೆಶೆಯಿಂದ ಸ್ವಾರ್ಥವನ್ನು ಹೊಡೆದೋಡಿಸುವದೂ ಪ್ರತಿ ಯೊಬ್ಬತರುಣನ ಮೊದಲನೆಯ ಕೆಲಸ. ದರಿದ್ರದೇವನಿಗೆ ಆಹುತಿ ಯಾಗಿ ದ್ದ ಈ ಭರತ ಭೂಮಿಯನ್ನು, ಅವನ ದವಡೆಯೊಳಗಿಂದ ಕಸಿದು ಕೊಳ್ಳು ವದಕ್ಕಾಗಿ ಪ್ರಮುಖಮುಂದಾಳುಗಳು, ಎಡೆಬಿಡದೆ ಪ್ರಯತ್ನ ನಡೆಸಿದ್ದು, ನಾವುಮಾತ್ರ ಕಣ್ಣಿದ್ದು ಅಂಧರಂತೆ, ಅಭಿಮಾನವಿದ್ದು, ಸ್ವಾಭಿಮಾನ ಶೂನ್ಯರಂತೆ ಸ್ವಾರ್ಥಪದಶೆಯಿಂದಾಗಲೀ ಅಥವಾ ವಿಷಯೋಪ ಭೋಗದ ಲ್ಲಿಯಾಗಲಿ ಹೊರಳಾಡುದು ಲಾಂಛನವೇಸರಿ.

ಇಂಥ ಇಕ್ಕಟ್ಟಿನ ಪರಸ್ಥಿತಿಯಲ್ಲಿ ಕರ್ತವ್ಯ ಕರ್ಮ ವಿಮುಖರಾಗಿ ವ ರ್ತಿಸುವಪಂದರೆ ಕೃತಘ್ನತನವನ್ನು ಮಾಡಿದಂತೆಯೇ

ರಘು.... ಆದುಪರಿಂದಲೇ ರಾಷ್ಟ್ರಮಾತೆಯ ಕೇಳಿಕೆಗೆ ಒಪ್ಪಿಗೆ ಕೊಟ್ಟು ಅತ್ತಕಡೆಗೆ ತೆರಳಬೇಕೆಂದು ಮಾಡಿದ್ದೇನೆ.

ಕೃಷ್ಣರಾಯ.... ರಘು, ನಿನ್ನ ಈ ಉತಾವಳೀ ಸ್ವಭಾವಕ್ಕೆ ಇಡೇಇ ಲ್ಲ ನಿನ್ನ ಬುದ್ಧಿಯೂ ವಿಚಾರವೂ ಅಪರಿ ಪಕ್ವ ವಿದ್ದುದರಿಂದ ಸಾರಾಸಾರ ವಿಚಾರಮಾಡದೆ ಅಡ್ಡಮಾರ್ಗ ಹಿಡಿಯುತ್ತಿರುವಿ. ದೇಶಹಿತದ ಕೆಲಸಕ್ಕಾಗಿ ನಾನು ನಿನಗೆ ಬೇಡೆನ್ನುವದಿಲ್ಲ. ನಾವಿರುವ ನಮ್ಮೀನಿಜಾಮ ರಾಜ್ಯವು ದೇ ಶೀಯ ರಾಜ್ಯವೇ ಅಲ್ಲವೇ? ಇಲ್ಲಿಯ ಅರಸರು ಇಲ್ಲಿಯೇ ಹುಟ್ಟುವರು. ಇ ಲ್ಲಿಯೆ ಬೆಳೆಯುವರು. ಇದರಸಲುವಾಗಿ ಪ್ರತಿಯೊಬ್ಬ ಇಲ್ಲಿಯ ರಹವಾಸಿ ಯು ಅಭಿಮಾನ ತಿಳಿಯಬೇಕು. ಇನ್ನು ಮೇರೆಯಲ್ಲಿರುವ ಬಂಧುಗಳವಿಷ ಯಕ್ಕಾಗಿ ಸಹಾನು ಭೂತಿ ತೋರಿಸಬಾರದೆಂಬ ಅಭಿಪ್ರಾಯವು ನನ್ನದಲ್ಲ

ಅಸಹಕಾರತೆಯ ಪ್ರಚಂಡತರಂಗಗಳು, ಎಲ್ಲದೇಶವನ್ನು ವ್ಯಾಪಿಸಿದ್ದು, ಘನತರವಾದ ತೆರೆಗಳಿಂದ ಸೂರ್ಯಬಿಂಬವೂಸಹ ಮುಚ್ಚಲ್ಪಡುತ್ತಿರುವದು. ಈ ಗೊದಗಿದ ಸಂಧಿಯನ್ನು ಕಳೆದುಕೊಂಡು ಸ್ವಾರ್ಥಲೋಲುಪನಾಗಿ ಹೊರಳಾಡಲು ನಾನು ಹೇಗೆ ಹೇಳಲಿ, ಚಾಕರಿ ಬಿಡುವ ಅಭಿಪ್ರಾಯವನ್ನು ಮಾತ್ರ ಮನದಲ್ಲಿ ತರಬೇಡ.

ರಘು.... ನಾ ನು, ನಮ್ಮೀರಾಜ್ಯದ ವಿಷಯವನ್ನು ಹೇಳುವದಿಲ್ಲ. ಭಾರತದ ವಿಷಯುವನ್ನು ಹೇಳುವೆನು. ಚಾಕರಿಬಿಡದೆ ರಾಷ್ಟ್ರಕಾರ್ಯವು ಕೊನೆಗಾಣುವ ಬಗೆ ಹೇಗೆ? ನಾನಂತೂ ದೇಶಶೇವೆಯಸಲುವಾಗಿ, ದೇಶಹಿತದ ಸಲುವಾಗಿ, ಸ್ವಾತಂತ್ರ್ಯ ಸಮರ ಕುಂಡದೊಳಗೆ ನನ್ನ ಜೀವವನ್ನು ಸಹ ಆಹುತಿಕೊಡಲು ಸಿದ್ಧನಿರುವೆನು. ಸಾವಿರಾರು ಜನರು ದಿನಾಲು ಆನಂದದಿಂದ ಸೆರೆಮನೆಯ ವಾಸವನ್ನು ಪತ್ಕರಿಸುವಾಗ, ನಾನುಮಾತ್ರ ಚಾಕರಿಯ ಸೇವಕನಾಗಿ ಇರಬೇಕೇ ? ಚಾಕರಿ, ಚಾಕರಿ, ಚಾಕರಿ ಎಂದರೇನು? ದೇಶಕಾರ್ಯದ ಮುಂದೆ ಈ ಕನಿಷ್ಟ ಚಾಕರಿಯ ಬೆಲೆಯೇ?

ಕೃಷ್ಣರಾಯ .. ರಾಷ್ಟ್ರಕಾರ್ಯದಸಲುವಾಗಿ ಆಸ್ತಿಇಲ್ಲದ ಜನರು, ಚಾಕರಿ ಬಿಡಬೇಕೆಂಬಂತಿಲ್ಲ. ಯಾರಿಗೆ ನಿಜವಾಗಿ ದೇಶಹಿತದ ಕಳಕಳಿ ಇರುವದೋ, ಯಾರ ಹೃದಯದಲ್ಲಿ ರಾಷ್ಟ್ರಾಭಿಮಾನದ ಜ್ವಾಲೆಯು ಪ್ರಜ್ವಲಿಸುತ್ತಿರುವದೋ, ಅವರಿಗೆ ಚಾಕರಿಬಿಡದೆ ದೇಶದಮಹತ್ವ ಕೆಲಸಗಳನ್ನು ಮಾಡಲು ಬರುವಂತಿದೆ.

ರಘು.... ಅಸಹಕಾರದ ಜ್ವಾಲೆಯು ದೇಶದಲೆಲ್ಲ ಹರಡಿದ್ದನ್ನು ನಾವು ನೊಡುತ್ತಿದ್ದೂ ನೋಡದವರಂತೆ, ಚಾಕರಿಗಾಗಿ ಜೋತುಕೊಂಡು ಕುಳಿತುಕೊಳ್ಳುವದು ಒಂದುತರದಿಂದ ರಾಷ್ಟ್ರವಿಘಾತಕ ಕೆಲಸದೇಸರಿ; ಇದಲ್ಲದೆ ಈ ಕೆಲಸಗಳ ಶಾಶ್ವತೆಯೂ, ನಿಜವಾಗಿ ಉಳಿದಿರುವದಿಲ್ಲ. ಪ್ರತಿದಿವಸ ಆಗುವ ಅಸಹಕಾರತೆಯ ಹೆಚ್ಚುವಿಕೆಯಿಂದ ತುಸು ದಿವಸಗಳಲ್ಲಿ ಹಿಂದುಸ್ಥಾನವು ಸ್ವಾತಂತ್ರ್ಯತೆಯನ್ನು ಹೊಂದುವದುನಿಶ್ಚಯ, ಈ ಪಾಶ್ಚಾತ್ಯರ ಎಲ್ಲ ಗಿರಣಿ, ಬ್ಯಾಂಕು, ಮುಂತಾದವುಗಳು ಖಂಡಿತವಾಗಿ ಮೂಲಿಗುಂಪಾಗುವವು.

ಕೃಷ್ಣರಾಯ.... ಇಂಥ ಭಯಂಕರ ಸಾಮ್ರಾಜ್ಯ ಶಾಹಿಗೆ, ತಲೆಗೊಟ್ಟು ಸ್ವತಂತ್ರತೆಯನ್ನು ಸ್ಥಾಪಿಸುವದಕ್ಕಾಗಿ, ಮಹಾತ್ಮರೂ ಅವರ ಅನುಯಾಯಿಗಳು ಮಾಡಿದ ಮಹತ್ವಾಕಾಂಕ್ಷೆಯ ಕಾರ್ಯವು ತೀವ್ರ ಕೈಗೂಡುವ ದೆಂಬುವದು ಅಸಂಭವನೀಯವಾಗಿ ಕಾಣುತ್ತದೆ. ಇದಕ್ಕೆ ಇನ್ನೂ ದಿವಸಗಳು ಬೇಕು. ಅವರು ಕೈಕೊಂಡಿರುವ ಈಕಾರ್ಯವು ಸ್ತೋತ್ರಾರ್ಹವಾಗಿದೆ; ಆದರೆನಮ್ಮಲ್ಲಿಇನ್ನೂ ಒಕ್ಕಟ್ಟಿಲ್ಲ. ಭಾರತವರ್ಷದಲ್ಲಿ ನೂರಾರುಪಂಗಡದ ಜನರು ವಾಸಿಸುತ್ತಿದ್ದು, ಆಳರಸರು ಒಮ್ಮತ ಆಗದೆಇರಲು ನಾನಾಬಗೆಯಾಗಿ ಪ್ರಯತ್ನಮಾಡುತ್ತಿರುವರು. ಒಬ್ಬರನ್ನೇರಿಸುವರು ಮತ್ತೊಬ್ಬರನ್ನಿಳಿಸುವರು ಎಲ್ಲರಲ್ಲಿಯೂ ಒಂದೇಬಗೆಯ ವಿಚಾರವು ಎಲ್ಲಿರುವದು.

ಅವರಲ್ಲಿ ಅಮೋಘ ಸಾಮರ್ಥ್ಯವು ಪ್ರಚಂಡ ಸೈನ್ಯ ಶಸ್ತ್ರಾಸ್ತ್ರಬಲವಿರುತ್ತಿರಲು ನೂರಾರು ವರ್ಷಗಳಿಂದ ಬೇರಿಳಿದ ಹಿಂದೀ ಸಾಮ್ರಾಜ್ಯ ಶಾಹಿಯಿಂದ ಹೇಗೆತಾನೆ ಒಮ್ಮಿಂದೊಮ್ಮೆ ವಿಮ್ಮುಖ ರಾಗುವರು.

ರಘು— ಮಹಾತ್ಮಾಜಿಯವರ ಕಾರ್ಯದ ,ಮುಂದೆ ಸಾಮ್ರಾಜ್ಯ ಶಾಹಿಯ ಆಟ ನಡೆಯಲಾರದೆಂದು, ಬಹು ಸಂಖ್ಯಾಕ ಘನತರ ಮುಂದಾಳುಗಳ ದೃಢವಾದ ನಂಬಿಕೆ.

ಕೃಷ್ಣರಾಯ — ಇವೆಲ್ಲ ಮಾತುಗಳು ಕೂಡಲೆ ಪೂರಗಾಣುವಂತಿಲ್ಲ. ಅಸಹಕಾರತೆಯ ಗಡಿಬಿಡಿಯು ಎಷ್ಟೇ ಒತ್ತರದಿಂದ ನಡೆದರೂ, ಜನರಲ್ಲಿದ್ದ ಮೊದಲಿನ ಮೂರ್ಖವಿಚಾರವು ಕೂಡಲೆಹೋಗುವಂತಿಲ್ಲ. ಒಂದುವೇಳೆ ಹೋದರೂ ದೇಶವೂ ಕೂಡಲೆ ಶಾಂತತೆಯನ್ನು ಹೊಂದುವದು ಕಷ್ಟಸಾಧ್ಯವು. ಆದುದರಿಂದಲೇ ನಾನಾದರೂ ನಿನಗೆ ಚಾಕರಿಯನ್ನು ಬಿಡದೆ ರಾಷ್ಟ್ರ ಕಾರ್ಯಕ್ಕೆ ಕೈಲಾದ ಮಟ್ಟಿಗೆ ಸಹಾಯ ಮಾಡೆಂದು ಹೇಳುವದು.

ರಘು! ಇದಲ್ಲದೆ ಎರಡನೆಯವರ ಮಾತು ಬೇರೆ, ನಿನ್ನಮಾತು ಬೇರೆಯನ್ನುವದನ್ನು ಪೂರ್ಣಲಕ್ಷ್ಯದಲ್ಲಿಡು. ನನಗೆ ವಯಸ್ಸಾಗಿದೆ, ಪೆನ್‌ಶನ್ ದಿವಸಗಳು ತೀರ ಸನಿಯಕ್ಕೆ ಬಂದವು ನಮಗೆ ಪೂರ್ವಾರ್ಜಿತ ಆಸ್ತಿ ಇಲ್ಲ. ಈಗ ನೀನು ಒಬ್ಬನೇ ಇರದೆ ನಿನ್ನನವಲಂಬಿಸಿರುವ ತರುಣ ಪತ್ನಿಯೋರ್ವಳಿರುವಳು. ಅವಳಿಗೆ ತಂದೆತಾಯಿಗಳಿಲ್ಲ. ನಿನ್ನ ಹೊರತು ಅನ್ಯರಾರು

ಇರುವರು. ಚಾಕರಿ ಬಿಟ್ಟಿಎಂದರೆ ಮೊದ ಮೊದಲು ಜನರು ನಿನ್ನನ್ನು ಗೌರವಿಸುವರು. ಮುಂದಾದರೂ ಗೌರವ ಹೊಂದಬಹುದು. ಆದರೆ ದುರ್ದೈವದಿಂದ ಸೆರೆಮನೆಯ ಭೋಗವು ಬಂದಿತೆಂದರೆ, ನಿನ್ನ ಹೆಂಡತಿಯ ಗತಿಏನು ಮುಂದೆ ಬಿಟ್ಟುಬಂದಮೇಲೆ ನಿಮ್ಮ ಬಾಳುವಿಕೆಯ ಬಗೆಹೇಗೆ? ಅನ್ನಕ್ಕೆ ಹೆರವರಿಗೆ ಕೈ ಒಡ್ಡಬೇಕಾದೀತು. ಮುಂದೆ ನಿಮ್ಮನ್ನು ಯಾರೂ ಕೇಳಲಿಕ್ಕಿಲ್ಲ.

ರಘು— ಅಪ್ಪಾ! ಅಸಹಕಾರದ ಈ ಪ್ರಚಂಡ ತುಮುಲಯುದ್ಧವು ತಣ್ಣಗಾಗುವದನ್ನು ಮರೆಯಿರಿ, ಹುಟ್ಟಿಸಿದ ದೇವರು ಹುಲ್ಲುಮೇಯಿಸಲಾರನು. ನಾನೇನು ಸ್ವಾರ್ಥದನೀಚಕೆಲಸದ ವಶೆಯಿಂದ ಹೋಗುವದಿಲ್ಲ. ಅಸಹಕಾರತೆ ಯು ವಿಜಯೀಹೊಂದಿ ದುರ್ದೈವಿ ಹಿಂದ ಭೂಮಿಯು ನಿಜವಾಗಿ ಸ್ವಾತಂತ್ರತೆಯನ್ನು ಹೊಂದುವದು. ಇದರಲ್ಲಿ ಎಳ್ಳಷ್ಟಾದರೂ ಸಂಶಯವಿಲ್ಲ. ಮುಂದೇನಾಗುವ ದೆಂಬ ಭವಿಷ್ಯ ಇಚ್ಛೆಯನ್ನು ಸರ್ವಥಾಮಾಡಬೇಡಿರಿ.

ಕೃಷ್ಣರಾಯ— ಅಸಹಕಾರತೆಯ ಚಲನ ವಲನವು ಪೂರ್ಣ ಯಶಸ್ವಿಯಾಗಿ, ಭಾರತವರ್ಷವು ಕೂಡಲೆ ಸ್ವತಂತ್ರವಾಗಿ ಬಾಳುವ ತಪ್ಪುತಿಳುವಳಿಕೆಯು ನಿಮ್ಮಿಂದದೂರಾಗಲೇಬೇಕು. ಇದುನಿಶ್ಚಯ. ಈ ಚಲನವಲನವನ್ನು ಪ್ರವೇಶಿಸಿದ ಶ್ರೀಮಂತರಿಗೆ ಮಾತ್ರ ಯಾವಬಗೆಯ ಹಾನಿಯೂ ತಟ್ಟದು. ಹಿಂದು ಮುಂದಿನ ವಿಚಾರವಿಲ್ಲದೆ ಪ್ರವೇಶಿಸಿದ ತಾರುಣ್ಯದಮಬ್ಬು ತಲೆಗೇರಿದ ನಿನ್ನಂಥ ಬಡ ಉದ್ಧಟ ತರುಣರು ಮಾತ್ರ ದುರ್ದಶೆ ಗೊಳಗಾಗದೆ ಎಂದಿಗೂ ಇರರು ಇದನ್ನು ನೆನಪಿನಲ್ಲಿಡು.

ರಘು— ನೀವು ಯಾವಬಗೆಯಿಂದ ತಿಳಿಹೇಳಿದರೂ ನನ್ನ ಮನಸ್ಸಿನಮೇಲೆ ಅದರ ಪರಿಣಾಮ ವಾಗುವಂತಿಲ್ಲ. ಈ ವಿಷಯದಬಗ್ಗೆ ನಿಶ್ಚಯಿಸಿದ ನನ್ನಮತವನ್ನು ನಾನು ಎಂದಿಗೂ ಹಿಂತೆಗೆಯುವಂತಿಲ್ಲ. ದೇಶಾಭಿಮಾನದಮುಂದೆ ಈ ನೀಚ ಸ್ವಾರ್ಥವು ಸರಿಯಾದೀತೆ?

ಕೃಷ್ಣರಾಯ— ರಘು! ಇಷ್ಟುಹೊತ್ತಿನ ವರೆಗೆ ನಿನಗೆ ತಿಳಿಹೇಳಿದ್ದು ಡಬ್ಬುಕೊಡದಮೇಲೆ ನೀರು ಸುರುವಿದಂತಾಯಿತು. ಇದೇ ಹೊಸದಾಗಿಪ್ರಾ

ರಂಭಿಸಿದ ಸಂಸಾರೂಪಿ ಯಂತ್ರವನ್ನು ಸಾಗಿಸಲು ನನ್ನಿಂದಾದಷ್ಟು ಇದು ವರೆಗೆ ನಿನಗೆ ಸಹಾಯಮಾಡುತ್ತ ಬಂದೆನು. ಇಷ್ಟು ದಿವಸಗಳವರೆಗೆ ನನ್ನ ವಚನವನ್ನು ಮೀರದೆ ನಾನು ಹೇಳಿದಂತೆ ನಡೆಯುತ್ತಾಬಂದ ನೀನು, ಈ ಹೊತ್ತೇ ನಿನ್ನ ಹಟವನ್ನು ಹಿಡಿದಿರುವಿ; ಈ ವಿಷಯಕ್ಕೆ ಉಪಾಯವಿಲ್ಲ,

ಸದ್ಗದಿತ ಕಂಠದಿಂದ ಕೃಷ್ಣರಾಯರು— ರಘು! ನಿನ್ನಲ್ಲಿ ಹುಟ್ಟಿದ ಈ ದುರ್ಬುದ್ಧಿಯನ್ನು ನೋಡಿ ನನಗೆಸಹಿಸಲಾರದ ದುಃಖವಾಗಿದೆ. ನಮ್ಮೀ ರಾಜ್ಯದಲ್ಲಿ, ನಮ್ಮ ಪಂಗಡದವರಿಗೆ ಚಾಕರಿ ದೊರಿಯುವದೇ ದುರ್ಲಭ ಆದರಲ್ಲಿ ನೀನು ಬಂಗಾರ ದಂತಹ ಚಾಕರಿಗೆ ತಿಲಾಂಜಲಿಯನ್ನುಕೊಟ್ಟು ಕಟ್ಟಡವಿಯ ಮಾರ್ಗ ಹಿಡಿಯುವಿಯಲ್ಲ. ಮುಂದೆ ನಿನಗೆ ಇದರ ಪಶ್ಚಾತ್ತಾಪ ವಾದೀತು. ತುತ್ತುಕೂಳು ಹುಟ್ಟಲಿಕ್ಕಿಲ್ಲ ನಾನು ಹೇಳಿದ ಮಾತುಗಳು ಮುಂದೆ ನಿನ್ನ ಸ್ಮರಣೆಗೆ ಬಾರದೆ ಇರವು. ನೆನಪಿನಲ್ಲಿಡು. ಈ ಮಾತನ್ನು ನೆನಪಿನಲ್ಲಿಡು ಎಂದು ಹೇಳಿ ಕಣ್ಣೀರು ಸುರಿಸುತ್ತ ಕುಳಿತಸ್ಥಳದಿಂದ ಮೇಲಕ್ಕೆದ್ದರು

✣ ✣ ✣ ✣ ✣ ✣ ✣ ✣

ಕ್ರಿಸ್ತಶಕದ ೨೧, ೨೨ ನೆಯ ವರ್ಷಗಳು, ಅಧುನಿಕ ಭಾರತ ಇತಿಹಾಸದಲ್ಲಿ, ಪ್ರಸಿದ್ಧ ವರುಷಗಳು. ಮೇಲ್ಕಂಡ ಸುಪ್ರಸಂಗಗಳು ಭಾರತವರ್ಷದ ಇತಿಹಾಸಗಳಲ್ಲಿ ದೊಡ್ಡಕ್ಷರದಿಂದ ಬರೆದಿಡಲು ಯೋಗ್ಯವಿರುವವೆಂದರೆ, ಅತಿಶಯೋಕ್ತಿಯಾಗಲಾರದು. ಆದಿನಗಳು ಅಸಹಕಾರದ ದಿನಗಳು. ಅಸಹಕಾರದ ಸಮುದ್ರವು ಆವೇಳೆಯಲ್ಲಿ ಉಕ್ಕೇರುತ್ತ ನಡೆದಿತ್ತು. ರಾಷ್ಟ್ರಾಭಿಮಾನದ ಉಜ್ವಲತರಂಗಗಳು ನಭೋಮಂಡಲವನ್ನು ಮುಚ್ಚಿಬಿಟ್ಟಿದ್ದವು ಸೂರ್ಯಚಂದ್ರರು ತಮ್ಮ ಮೋರೆಯನ್ನು ಹೊರ ತೋರಿಸಲು ಅಂಜುತ್ತಿದ್ದರು. ಹಿಮಾಚಲದಿಂದ ಕನ್ಯಾಕುಮಾರಿಯವರೆಗೆ, ಅಸಹಕಾರತೆಯ ಸಿಂಹಗರ್ಜನೆಯು ಗಂಭೀರವಾಗಿ ಕೇಳಬರುತ್ತಲಿತ್ತು. ಹಿಂದೂ ಮುಹಮ್ಮದೀಯರು ತಮ್ಮ ಅಂತಃಕಲಹಗಳನ್ನು ಬದಿಗಿಟ್ಟು ಭಾರತವರ್ಷದಗತ ಸ್ವಾತಂತ್ರ್ಯವನ್ನು ಸಂಪಾದಿಸಲೋಸುಗ, ಏಕಮನಸ್ಕರಾಗಿ ಸ್ವಾತಂತ್ರ್ಯಯುದ್ಧದಲ್ಲಿ ಸ್ವಾರ್ಥದ ಆಹುತಿ ಕೊಡ ತೊಡಗಿದ್ದರು.

ಸ್ವದೇಶಭಕ್ತಿಯ ಪ್ರಚಂಡತೆರೆಗಳು ಆಸೇತು ಹಿಮಾಲಯುವವರೆಗೆ, ಎಲ್ಲವಾತಾವರಣದಲ್ಲಿಯೂ ಸಹಭರದಿಂದ ಸಾಗತೊಡಗಿದ್ದವು. ಸ್ವಾಭಿಮಾನದ ಮಧುರಗಾಯನವು ಎಲ್ಲಕಡೆಗೂ ಪಸರಿಸಿತ್ತು. ಲಕ್ಷಾವಧಿ ತರುಣರು ದೇಶಕಾರ್ಯದ ಸಲುವಾಗಿ ಅಪೂರ್ವ ಸ್ವಾರ್ಥ ತ್ಯಾಗಮಾಡಿ ಮುಂದೆಬರಲು ಎಡೆಬಿಡದೆ ಪ್ರಯತ್ನಿಸುತ್ತಿದ್ದರು. ಸಹಸ್ರಾರು ರಾಷ್ಟ್ರೀಯ ಮುಂದಾಳುಗಳು ರಾಷ್ಟ್ರಗೀತೆಯನ್ನುಹಾಡುತ್ತ ಸಂತೋಷದಿಂದ ಕಾರಾಗ್ರಹವನ್ನು ಪ್ರವೇಶಿಸುತ್ತಿದ್ದರು ಕಾರಾಗ್ರಹ ವಾಸಮಾಡುವ ದೇಶಾಭಿಮಾನಿಗಳ ಸಂಖ್ಯೆಯು ದಿನದಿನಕ್ಕೆಹೆಚ್ಚುತ್ತ ನಡೆದಿತ್ತು. ಅಧಿಕಾರಿಗಳು ಬೇಸರಿಯಹತ್ತಿದ್ದರು ಸೆರೆಮನೆಗಳು ರಾಷ್ಟ್ರೀಯ ಜನರಿಂದ ಕಿಕ್ಕಿರಿದಿದ್ದವು. ದೇಶದ ಸಲುವಾಗಿ, ರಾಷ್ಟ್ರದಸಲುವಾಗಿ, ಪಾರತಂತ್ರ್ಯದೊಳಗೆಬಿದ್ದು ಹೊರಳಾಡುತ್ತಿರುವ ಈ ಭಾರತವರ್ಷದಸಲುವಾಗಿ, ಸಾವಿರಾರುಜನರು ಸ್ವಾರ್ಥವನ್ನುದೂಡಿ ಸಂತೋಷದಿಂದ ಸೆರೆಮನೆಗಳಿಗೆ ಹೋಗುತ್ತಿದ್ದರು.

ಜನನದಾರಾಭ್ಯ ನೆಲದಮೋರೆಯನ್ನು ಸಹನೋಡದೆ ಮೆತ್ತನ್ನಗಾದಿಗಳಮೇಲೆ ಹೊರಳಾಡುವ ಮೋಟಾರ ಮುಂತಾದ ವಾಹನಗಳಲ್ಲಿ ಚಕ್ಕಂದದಿಂದ ತಿರುಗಾಡುವ, ಅಸಂಖ್ಯಜನರು ರಾಷ್ಟ್ರದ ದುರವಸ್ಥೆಯನ್ನು ನೋಡಿ, ತಮ್ಮದೇಶವನ್ನು ಪಾರತಂತ್ರ್ಯ ಸಂಕೋಲೆಗಳಿಂದ ಮುಕ್ತಮಾಡುವ ಉಚ್ಚಧ್ಯೇಯವನ್ನಿಟ್ಟು ಕೊಂಡು ಎದುರಾಳಿಗಳೆದುರಿಗೆ ಎದೆಗೊಟ್ಟು ನಿಂತು ಸ್ವಾರ್ಥದ ಅಭಿಲಾಷೆಯನ್ನು ಕಿಂಚಿತ್ತಾದರೂ ಇಡದೆ, ಸಂತೋಷದಿಂದ ತುರಂಗವಾಸ ಪತ್ಕರಿಸುವದನ್ನು ನೋಡಿದರೆ, ಯಾವ ಭಾರತ ಪುತ್ರನ ಬಾಹುಗಳು ಸ್ಫುರಣವಾಗದೆ ಇರುವವು?

ಮೇಲೆ ಹೇಳಿದ ದಿನಗಳೆಂದರೆ ಭಾರತದೊಳಗೆ ಆದರ್ಶಭೂತ ದಿನಗಳು ರಾಷ್ಟ್ರಮಾತೆಯ ಕೂಗಿಗೆ ಓ ಕೊಟ್ಟು, ಎಷ್ಟೋ ತರುಣವಿದ್ಯಾರ್ಥಿಗಳು ಸಾಲೆ ಕಾಲೇಜಗಳೊಳಗಿಂದ ಹೊರ ಹೊರಡುತ್ತಿದ್ದರು. ತರುಣರಹೃದಯಲ್ಲಿ ದೇಶಭಕ್ತಿಯ ಅಗ್ನಿಯು ಪ್ರಖರದಿಂದ ಪ್ರಜ್ವಲಿಸುತ್ತಿದ್ದುದರಿಂದ, ಗುಲಾಮಗಿರಿಯನ್ನು ಕಾಲಿನಿಂದೊದ್ದು ಅಸಹಕಾರತೆಯದೇದಿಪ್ಯಮಾನವಾದ ಜ್ವಾಲೆಯಲ್ಲಿ ಸ್ವಲ್ಪಾದರೂ ಹಿಂದುಮುಂದು ನೋಡದೆ ನಾಮುಂದೆ ನೀನು

ಮುಂದೆ ಎಂದು ಹಾರಿಕೊಳುತ್ತಿದ್ದರು. ಎಷ್ಟೋ ವಕೀಲರು, ಶಿಕ್ಷಕರು, ತಮ್ಮ ತಮ್ಮ ಕೆಲಸಗಳನ್ನು ಬಹಿಷ್ಕರಿಸಿ, ಖಾದಿಯು ಬಟ್ಟೆಯನ್ನುಟ್ಟು, ಅಸಹಕಾರದ ಮುಂದಾಳುಗಳಾದ ಮಹಾತ್ಮಾಜಿಯವರ, ರಾಷ್ಟ್ರೀಯ ಧ್ವನಿಗೆ ಧ್ವನಿಗೊಟ್ಟು ಅವರಿದ್ದೆಡೆಗೆ ಭರದಿಂದ ಧಾವಿಸತೊಡಗಿದ್ದರು.

ಅಸಹಕಾರ ಖಾದಿ ಇವೆರಡು ಶಬ್ದಗಳು ಎತ್ತನೋಡಿದತ್ತಿಲ್ಲ ವಾತಾವರಣದಲ್ಲಿಯೂ ಸಹ ದುಮಿ ದುಮಿಸುತ್ತಿದ್ದವು. ಈವೇಳೆಯಲ್ಲಿ ರಾಟಗಳಿಲ್ಲದ ಮನೆಗಳೇ ಇರಲಿಲ್ಲ. ಪ್ರತಿಯೊಂದು ಮನೆಯಿಂದ ರಾಟೆಯ ಚರ್ ಎಂಬ ಸಪ್ಪಳವು ಮುಂಜಾವಿನಿಂದ ಸಂಜೆಯ ವರೆಗೆ ಕೇಳಬರುತ್ತಿತ್ತು. ಲಕ್ಷಾವಧಿ ಜನರು ರಾಟೆಯಮೇಲೆ ತಯಾರಾಗುವ ಶುಭ್ರಖಾದಿಯ ಉಡುಪಿನಲ್ಲಿಯೇ ಇರುತ್ತಿದ್ದರು. ಎಷ್ಟೋ ಜನರು ಸ್ವಯಂಸೇವಕ ಪಥಕಗಳೊಳಗೆ ತಮ್ಮ ಹೆಸರುಗಳನ್ನು ನೊಂದಾಯಿಸಿ ಅಲ್ಲಲ್ಲಿನಡೆಯುತ್ತಿರುವ ಸತ್ಯಾಗ್ರಹ ಪಿಕೇಟಿಂಗಗಳೊಳಗೆ ಭಾಗ ತೆಗೆದುಕೊಂಡು ಅಂಜದೆ ಅಧಿಕಾರಿಗಳ ಕೈಗೆ ಸಿಕ್ಕು ಬೀಳುತ್ತಿದ್ದರು.

ಈ ಸಮಯದಲ್ಲಿ ತುರಂಗದಭಯವು ಯಾರಲ್ಲಿಯು ಇರುತ್ತಿರಲಿಲ್ಲ. ಆದಕ್ಕೆ ವಿರುದ್ಧವಾಗಿ ದೇಶಭಕ್ತರಿಗೆ ಕಾರಾಗ್ರುಹವಾಸವು ಭೂಷಣಾಸ್ಪದವಾಗಿ ಕಾಣುತ್ತಿತ್ತು. ಅಸಹಕಾರದ ದಿವಸಗಳವರೆಗೆ ಮಾತ್ರ ಕಾರಾಗ್ರುಹಗಳೆಂದರೆ ದುಃಖದ ಮರ್ಯಾದೆ ಇಲ್ಲದ ಶೋಚನೀಯ ಗೃಹಗಳಾಗಿ ಪರಿಣಮಿಸುತ್ತಿದ್ದವು. ಅಲ್ಲಿಯವರೆಗೆ, ತುರಂಗವೆಂದರೆ ಬಹುಜನರುಅಂಜುತ್ತಿದ್ದರು. ಅಸಹಕಾರದ ಚಲನ ವಲನವು ಸಲ್ಪಕಾಲದೊಳಗೆ ಕಾರಾಗ್ರುಹವಾಸದ ಅಂಜಿಕೆಯನ್ನು ಬೇರೂರಿಸಿ ಕಿತ್ತೊಗಿಯಿತು. ಸಾವಿರಾರು ಜನರು, ಸ್ವಲ್ಪಾದರೂ ಅನುಮಾನಿಸದೆ ಒಬ್ಬರಹಿಂದೊಬ್ಬರು ಸಾಲುಗಟ್ಟಿಹೋಗಹತ್ತಿಲು, ಜನರಲ್ಲಿದ್ದ ಸೆರೆಮನೆಯ ಅಂಜಿಕೆಯು ಹೇಳ ಹೆಸರಿಲ್ಲದೆ ಹೋಯಿತು ಅಂದಿನಿಂದ ಕಾರಾಗ್ರುಹ ವಾಸವೆಂದರೆ ಒಂದು ಉಚ್ಚತರದ ರಾಷ್ಟ್ರೀಯ ಲಕ್ಷಣವೆಂಬಂತೆ ತೋರಹತ್ತಿತು. ಉದಾರರು, ಸಜ್ಜನರು, ಸುಶಿಕ್ಷತರು, ಶ್ರೀಮಂತರೇ ಮೊದಲಾದ ಎಲ್ಲ ಸಂಗಡದವರೂ ತಿಲಮಾತ್ರವು ಹಿಂದು ಮುಂದು ನೋಡದೆ, ಸೆರೆಮನೆಯ ಕಡೆಗೆ ಸಾಗುತಲಿದ್ದರು ದೇಶಹಿತದ

ಉಚ್ಚ ಭಾವನೆಯನಿಟ್ಟುಕೊಂಡು ಸತ್ಯಾಗ್ರಹ ಪಿಕೆಟಿಂಗದಂಥ ರಾಷ್ಟ್ರೀಯ ಕಾರ್ಯಗಳಿಗೆ ಎದೆಕೊಟ್ಟು ಸೆರೆಮನೆಯಕಡೆಗೆ ನಿರ್ವ್ಯಸನದಿಂದ ಸಾಗತೊಡಗಿದ್ದರು. ಅವರಿಗೆ ಸೆರೆಮನೆ ಯಂದರೆ ದುರಭಿಮಾನವನ್ನು ಹೊಡದೋಡಿಸಿ ಸ್ವಾಭಿಮಾನರನ್ನಾಗಿ ಮಾಡುವ ಸ್ವಾತಂತ್ರ್ಯ ದೇವಿಯ ತವರು ಮನೆಯಹಾಗೆ ಕಾಣಿಸುತ್ತಿತ್ತು

ದುಷ್ಟ ದುರಾಚಾರಿಯಾದ ಕಂಸನನ್ನುಕೊಂದು ಅಧರ್ಮ ಅನೀತಿಯನ್ನು ಅಮೂಲಾಗ್ರನಾಶಮಾಡಿ, ಶಾಂತಿ ಸಾಮ್ರಾಜ್ಯವನ್ನು ಪ್ರಸ್ಥಾಪಿಸಿದ, **ಶ್ರೀ ಕೃಷ್ಣ ಭಗವಾನನ ಜನ್ಮವು** ಕಾರಾಗ್ರುಹದಲ್ಲ ಆದಂತೆ, ನೂರಾರು ವರ್ಷಗಳಿಂದ ಅತ್ಯಾಚಾರದ ಅಧಿಕಾರದೊಳಗೆ ಸಿಗಿಬಿದ್ದು ಭಾರತಮಾತೆಯ ದುರ್ದೆಶೆಯನ್ನು ದೂರಹೊಡೆದು ಸುದೈವವನ್ನು ಸೂರಿಗಳಿಸುವದಕ್ಕಾಗಿ ಜನ್ಮವೆತ್ತುವ ರಾಷ್ಟ್ರದೇವಿಯ ಜನ್ಮವು, ಇದೇ ಕಾರಾಗೃಹದಲ್ಲಿ ಆಗುವದೆಂದು ಎಲ್ಲರೂ ಖಂಡಿತವಾಗಿ ನಂಬಿದ್ದರು.

ಲೋಕ ಸಮುದಾಯದ ಆವೇಳೆಯ ರಾಷ್ಟ್ರಾಭಿಮಾನ ಉಜ್ವಲಪ್ರೇಮ, ಅವರ ಆವೇಶ, ವೀರಶ್ರೀ, ಅವರ ಭಾವಿಆಶೆ, ದೇಶೋದ್ಧಾರದ ಸಲುವಾಗಿ ಎಂಥ ಎಡರುಗಳುಬಂದರೂ ಎದೆಗೊಟ್ಟು ನಿಲ್ಲುವೆವೆಂಬ ಅವರ ಮನೋಧೈರ್ಯ ಇವೇಮೊದಲಾದ ಅವರಲ್ಲಿದ್ದ ಗುಣಗಳು ಆವರ್ಣನೀಯವಾಗಿದ್ದವು; ಆದುದರಿಂದಲೆ ಸಾಮ್ರಾಜ್ಯಶಾಹಿಯ ಭಯಂಕರ ಬೆಂಬಲವುಇದ್ದ ನೌಕರ ಶಾಹಿ ಜನರಲ್ಲಿಯೂ ಕೂಡ ಗೊಂದಲವೆದ್ದಿತ್ತು. ಅಸಹಕಾರತೆಯ ಕುರುಪಿನ ಹೆಚ್ಚುವಿಕೆಯನ್ನು ನೋಡಿ ಸಾಮ್ರಾಜ್ಯ ಶಾಹಿಯ ಮರಿಷ್ಮಸಭೆಯು ಸಹ ದಿಗಿಲುಗೊಂಡು ಹೋಗಿತ್ತು.

ನಿಖಿಲಭಾರತದಲ್ಲಿ, ಸ್ವತಂತ್ರತೆಯ ಪ್ರಚಂಡ ಅಗ್ನಿಯು ಪ್ರಜ್ವಲಿಸುತ್ತಿರುವಾಗ, ಆತ್ಮೀಯ ಸ್ವಾರ್ಥತೆಯಸಲುವಾಗಿ ವಿಲಾಸದಲ್ಲಿಲೋಲಾಡುವ ತರುಣರು ಅತಿಕ್ವಚಿತ್ತಾಗಿ ಸಿಕ್ಕುತ್ತಿದ್ದರೆಂದು ಧಾರಾಳವಾಗಿ ಹೇಳಬಹುದು. ಪ್ರತಿಯೊಬ್ಬತರುಣನ ಹೃದಯದಲ್ಲಿ ರಾಷ್ಟ್ರಾಭಿಮಾನದ ವಡಭಾಗ್ನಿಯು ಪ್ರಜ್ವಲಿಸುತ್ತಿತ್ತು.

ದೇಶದಲ್ಲಿ ನಡೆದಿರುವ ಈಘನಘೋರ ಸ್ವಾತಂತ್ರ್ಯ ಸಂಗ್ರಾಮದಲ್ಲಿ, ಸಾವಿರಾರು ಭಾರತನಿವಾಸಿಗಳು ತಮ್ಮ ಸ್ವಾರ್ಥವನ್ನು ಹಿಂದಕ್ಕೆ ದೂಡಿ, ಮುಂದೆ ಬಂದು ಎದೆಗೊಡುತ್ತಿರುವದನ್ನು ನೋಡಿ, ರಾಷ್ಟ್ರಾಭಿಮಾನದ ನವಚೈತನ್ಯ ತುಂಬಿರುವ ರಘುನಾಥನಿಂದ ಮುಗ್ಧನಂತೆ ಮನೆಯಲ್ಲಿ ಕುಳಿತುಕೊಳ್ಳುವದು ಹೇಗಾಗಬೇಕು? ಅವನ ಅಂಗಾಂಗದಲ್ಲಿ, ರೋಮ ರೋಮಗಳಲ್ಲಿ, ವೀರಶ್ರೀಯ ವಾಯುವು ಒಂದೆಡೆಯಲ್ಲಿ ನಿಲ್ಲದೆ ಪ್ರಬಲವಾಗಿ ಬೀಸುತ್ತಿತ್ತು.

ಸಾವಿರಾರು ರಾಷ್ಟ್ರವೀರರು ಸೆರೆಮನೆಯ ಸೋಪಾನಗಳನ್ನು ಸುಲಲಿತವಾಗಿ ಸಂತೋಷದಿಂದ ಎರುತ್ತಿರಲು, ಗುಲಾಮಗಿರಿಯಮೇಲೆ ಗದಾಪ್ರಹಾರಮಾಡಿ, ನಾಮುಂದೆ ನೀಮುಂದೆ ಎಂದು ಗುದ್ದುಮುರಿಸುತ್ತ ಗಣನೆ ಇಲ್ಲದೆ ಎಷ್ಟೋತರುಣರು ಆವೇಶದಿಂದ ಹೋಗುತ್ತಿರಲು, ಇದೆಲ್ಲವನ್ನೂ ನೋಡುತ್ತಿದ್ದ ರಘುನಾಥನಲ್ಲಿಯೂ, ರಾಷ್ಟ್ರೀಯ ಉಜ್ವಲ ಭಾವನೆಯು, ರಭಸದಿಂದ ಮುಂದರೆಯ ಹತ್ತಿತು. ಇಂಥಪರಿಸ್ಥಿತಿಯಲ್ಲಿ ಅವನಿಗೆ ತನ್ನ ಭಾವೀ ಬಾಳುವಿಕೆಯ ವಿಚಾರವು ಹೇಗೆತಾನೆ ಬರಬೇಕು? ಅವನು ತನ್ನನ್ನುತಾನು ಮರೆತುದದಲ್ಲದೆ ನೂತನ ವಧುವನ್ನು ಸಹ ಮರೆತುಬಿಟ್ಟನು.

ಪತ್ನಿಯನ್ನು ಮರೆತಮೇಲೆ ಸಂಸಾರದನೆನಪು ಹೇಗೆಉಳಿಯಬೇಕು? ಪ್ರೇಮದ ಆಪ್ತೇಷ್ಟರ ವಿಸ್ಮರಣೆಯಾಯಿತು. ಚಾಕರಿ ಮನೆಮಾರು ಮುಂತಾದವುಗಳಿಗೆ ತಿಲಾಂಜಲಿಕೊಟ್ಟು, ಸ್ವಾರ್ಥದಂಥ ನೀಚಭಾವನೆಯನ್ನು ಮನದಿಂದ ಹೊರದೋಡಿಸಿ, ರಾಷ್ಟ್ರಮಾತೆಯ ರಣಗರ್ಜನೆಗೆ ಧ್ವನಿಕೊಟ್ಟು ಹೋಗುತ್ತಲಿರುವ ಲಕ್ಷಾವಧಿ ತರುಣರ ಸಂಗಡ ತಾನೂ ಹೊರಡುವದನ್ನು ಖಂಡಿತವಾಗಿ ನಿಶ್ಚಯಿಸಿದನು.

ಪೂರ್ಣವಿಚಾರಮಾಡದೆ, ಮುತ್ತಿನಂತಿದ್ದ ಚಾಕರಿಗೆ ತಿಲಾಂಜಲಿಯನ್ನು ಕೊಟ್ಟು, ಪತ್ನಿಯೋರ್ವಳನ್ನೇಬಿಟ್ಟು ಹೋಗಬಾರದಾಗಿ ಕಕ್ಕನು ಅಂಗಲಾಚಿ ಹೇಳಿಕೊಂಡನು. ಆದರೆ ಅದರಿಂದ ಯಾವ ಉಪಯೋಗವೂ ಆಗಲಿಲ್ಲ. ಚಾಕರಿಮಾಡುತ್ತ ಕೈಲಾದಮಟ್ಟಿಗೆ ದೇಶೋದ್ಧಾರದ ಕಾರ್ಯ

ದಲ್ಲಿ ಕೈಹಾಕಲು ಬರುವದೆಂಬ ವಿಚಾರವನ್ನು ಪರಮ ಪೂಜ್ಯ ಚಿಕ್ಕಪ್ಪನು ಹೇಳಿದ್ದಲ್ಲದೆ, ತನಗಿಂತ ಚಿಕ್ಕವಳಾದ ಪತ್ನಿಯೂ ಸಹ ಹೇಳಿದಳು ಇದೆಲ್ಲವೂ ಕಿಂಚಿತ್ತಾದರೂ ಅವನಿಗೆ ರುಚಿಸಿದಂತೆ ತೋರಲಿಲ್ಲ.

ತನ್ನೋರ್ವಳನ್ನೆಬಿಟ್ಟು ಹೋಗಬಾರದೆಂಬದಾಗಿ ಜಾನಕಿಯು ಪರಿಪರಿಯಿಂದ ಬೇಡಿಕೊಂಡಳು. ಆದರೆ ಅವನು ತನ್ನ ನಿಶ್ಚಿತವಿಚಾರದಿಂದ ಹೊರಗೆಬರಲಿಲ್ಲ. ಕಡೆಗೆ ರಾಟಿಯಮೇಲೆ ನೂಲು ತೆಗೆಯುವದು, ಮತ್ತಿತರ ದೇಶಹಿತದ ಮಹತ್ವದ ಕೆಲಸಗಳನ್ನು ತಾನುಕೈಕೊಂಡು, ತಮ್ಮರಾಷ್ಟ್ರೀಯ ಕಾರ್ಯಕ್ಕೆ ನೆರವಾಗುವೆನು. ತಾವು ಚಾಕರಿ ಬಿಡಬಾರದು' ಎಂಬುದಾಗಿ ಜಾನಕಿಯು ಬಗೆಬಗೆಯಾಗಿ ಹೇಳಿದಳು.

ಏನು ಹೇಳಿದರೂ ಅವನು ಕೇಳದಂತಾದನು.

ಕಡೆಗೆ ಪತಿಯವಿಚಾರಗಳೇ ತನ್ನ ವಿಚಾರಗಳೆಂದು ತಿಳಿದು ಆ ನವತರುಣಿಯು ಪತಿಯ ಮನಾನುಕೂಲೆಯಾಗಿ ವರ್ತಿಸುವದನ್ನು ನಿಶ್ಚಯಿಸಿದಳು.

ದೇಶಕಾರ್ಯದಹೊರ್ತು ಅವನಿಗೆ ಎಲ್ಲ ವಿಷಯಗಳೂ ಬೇಡಾದವು. ಧ್ಯಾನದಲ್ಲಿಯೂ, ಮನದಲ್ಲಿಯೂ, ಸ್ವಪ್ನದಲ್ಲಿಯೂ ಕೂಡ ಅವನಿಗೆ ದೇಶಕಾರ್ಯವೇ ಕಣ್ಣಿಗೆ ಕಟ್ಟಿದಂತಾಯಿತು.

ರಘುನಾಥನು ಮೊದಲು ನಿಶ್ಚಯಿಸಿದ ತನ್ನವ್ರತವನ್ನು ಕೊನೆಯವರೆಗೂ ಸಾಧಿಸಿದನು.

ಒಟ್ಟಿನಮೇಲೆ, ರಾಷ್ಟ್ರಕಾರ್ಯದ ಗಾಳಿಯು ಸೋಂಕಿದನಂತರ, ಅದರಮೇಲೆ ಯಾವಪ್ರಕಾರದ ಮಾತ್ರೆಯ ಆಟವೂ ನಡೆಯಲಿಲ್ಲ.

ಅದರಂತೆಯೇ ಕಡೆಗೆ ಒಂದುದಿವಸ ತನ್ನಚಾಕರಿಗೆ ರಾಜಿನಾಮೆಕೊಟ್ಟು, ಹೆಂಡತಿಗೆ ಜತನದಿಂದಿರು ಎಂಬದಾಗಿ ಹೇಳಿ, ಚಿಕ್ಕಪ್ಪನಿಂದ ನಿರುಪಾಯದ ಅಪ್ಪಣೆಯನ್ನು ತೆಗೆದುಕೊಂಡು, ಖಾದಿಯ ಉಡಿಗೆ ತೊಡಿಗೆಗಳನ್ನು ಧರಿಸಿ ರಾಜದ್ರೋಹದ ದೀಕ್ಷೆಯನ್ನು ತೆಗೆದುಕೊಂಡು, ಸೊಲ್ಲಾಪೂರ ಕಾಂಗ್ರೇಸ್ ಕಮಿಟಿಗೆಹೋಗಿ, ಸ್ವಯಂಸೇವಕ ಪಥಕಗಳೊಳಗೆ ಸೇರ್ಪಡೆಯಾದನು.

✤ ✤ ✤ ✤ ✤ ✤ ✤ ✤

ರಘುನಾಥನು ೮, ೯ ವರುಷದವ ನಿರುವಾಗಲೇ ಪರದೇಶಿಯಾದನು ಮೂರು ನಾಲ್ಕು ತಿಂಗಳಗಳ ಅಂತರದಲ್ಲಿ, ತಂದೆತಾಯಿಗಳೀರ್ವರೂ ಈ ಪೃಥ್ವಿತಲದಮೇಲೆ ಇವನೊರ್ವನನ್ನೇ ಬಿಟ್ಟು ಸ್ವರ್ಗದ ದಾರಿಯನ್ನು ಹಿಡಿದರು.

ತಂದೆತಾಯಿಗಳ ನಿಧನದ ವೇಳೆಯಲ್ಲಿ ೮, ೯ ವರುಷದವನೆಂದರೆ ತೀರ ಸಣ್ಣವನು. ಆದೇ ಕನ್ನಡ ನಾಲ್ಕನೇ ಇಯತ್ತೆಯನ್ನೂ ಇಂಗ್ರೇಜಿ ಬಾಲ ಬೋಧಿನಿಯನ್ನೂ ಮುಗಿಸಿದ್ದನು.

ರಘುನಾಥನ ತಂದೆ ವಾಸುದೇವರಾಯರು ಮನೆತನದಿಂದ ತೀರ ಬಡವರು; ಆದರೂ ಬಹು ಸಜ್ಜನರು, ವಿನಯಶೀಲರು, ಉದಾರರು, ಆವರಿಗೆ ಇವನು ಒಬ್ಬನೇ ಒಬ್ಬಮಗನು.

ವಾಸುದೇವರಾಯರು ಕೃಷಿಕರ್ಮದಮೇಲೆ ತಮ್ಮ ಉಪಜೀವನವನ್ನು ಸಾಗಿಸುತ್ತಿದ್ದರು. ದಾರಿದ್ರ್ಯವು ಅವರನ್ನು ಬೆನ್ನಟ್ಟಿದ್ದರೂ ಅದರಲ್ಲಿಯೇ ಸುಖ ಸಮಾಧಾನದಿಂದ ಕಾಲ ಕಳೆಯುತ್ತಿದ್ದರು.

ವಾಸುದೇವರಾಯರ ಧರ್ಮಪತ್ನಿಯಾದ ತಾರಾಬಾಯಿ ಯಾದರೂ ಬಹು ಕುಲೀನಳು ಸುಶೀಲಳು. ಆ ಪತಿಪರಾಯಣಳು, ತನ್ನ ಬಡತನದ ಪ್ರಪಂಚದಲ್ಲಿ ಬರುವ ಎಡರುಗಳನ್ನು ತೋರಗೊಡದೆ ಪತಿಯಮನಾನುಕೂಲೆಯಾಗಿ, ಸಮಾಧಾನದಿಂದಲೂ ದಕ್ಷತೆಇಂದಲೂ ಎಲ್ಲವನ್ನೂ ನಿರ್ವಹಿಸುತ್ತಿದಳು. ಅವಳು ತಮ್ಮೀರ್ವರ ಬಡತನದ ಬಾಳುವಿಕೆಯನ್ನು ಒಂದು ಸಾರೆ ಯಾದರೂ ಹಳಿಯುತ್ತಿರಲಿಲ್ಲ.

ಅವರು ತಮ್ಮ ಚಿಕ್ಕಮನೆಯನ್ನೇ ಸುಖ ಸ್ವರ್ಗದ ಬೀಡನ್ನು ಮಾಡಿಕೊಂಡು, ತಮ್ಮ ಬಡತನದ ಸ್ಥಿತಿಯಲ್ಲಿಯೇ, ಸ್ವರ್ಗೀಯಸುಖದ ಸ್ವಾದವನ್ನು ತೆಗೆದು ಕೊಳ್ಳುತ್ತಿದ್ದರು.

ಜಗತ್ತಿನಲ್ಲಿಯ ಪ್ರತಿಯೊಬ್ಬ ಮಾನವನಿಗೂ ಸುಖಾನಂದದ ಮಹತ್ವಾಕಾಂಕ್ಷೆ ಇರುವದು. ಪ್ರಪಂಚದಲ್ಲಾಗುವ ಹೆಚ್ಚು ಕಡಿಮೆಯು ಸಂಪತ್ ಸುಖದಸಲುವಾಗಿಯೇ ಆಗುವದು. ಮನುಷ್ಯನು ಯಾವಾಗಲೂ ಸುಖ ಸಮಾಧಾನದ ಸಲುವಾಗಿ ಬಡೆದಾಡುವನು. ಆ ಸುಖಸಮಾಧಾನದ ಮೂಲ

ಗುಟ್ಟುದ್ರವ್ಯ, ಆದುದರಿಂದಲೇ ಭೂಮಿಯ ಮೇಲಿನ ಪ್ರತಿಯೊಬ್ಬನು, ಸುಖಸಾಧನದ ಮೂಲ ತತ್ವವಾದ, ದ್ರವ್ಯಕ್ಕೋಸುಗ ಪರಮಪ್ರಿಯ ಜೀವದ ಹಂಗು ದೊರೆಯುವನು.

ದ್ರವ್ಯವೇ ಸುಖದ ಆಗರವು. ಎಲ್ಲ ಸುಖಸಂತೋಷದ ಮೂಲವು ದ್ರವ್ಯ. ದುಡ್ಡೇ ದೊಡ್ಡಪ್ಪನು. ಹಣವಿಲ್ಲದವನು ಹೆಣದಸಮಾನ ನೆಂಬದು ಜನರ ದೃಢವಿಚಾರವು ನಿಜವಾಗಿ ನೋಡಿದರೆ ಇದೆಲ್ಲವೂ ಜನರ ತಪ್ಪು ತಿಳುವಳಿಕೆ.

ದುಡ್ಡಿದ್ದ ಮನುಷ್ಯನಿಗೆ ಯಾವಬಗೆಯ ಚಿಂತೆಯು ಇರುವದಿಲ್ಲೆನ್ನುವದು ಮಂಕುತನದಮಾತು. ಸಾಕಷ್ಟು ಹಣವಿದ್ದ ಎಷ್ಟೋಜನರು ಶಾಂತಿ ಸಮಾಧಾನ ಸಿಗದೆ ಗೋಳಾಡುವರು. ಅಂಚೆಯ ತುಪ್ಪಳದಂತಹ ಮೆತ್ತಗಿನ ಗಾದಿ ಲೋಡುಗಳಮೇಲೆ ಹೊರಳಾಡುವ ಶ್ರೀಮಂತಲಕ್ಷ್ಮೀಪುತ್ರರಿಗೂ ರಾಜಧಾನಿಯಲ್ಲಿ ರಾಜಲಕ್ಷ್ಮಿಯ ವೈಭವದೊಂದಿಗೆ ಮೆರೆಯುವ ರಾಜನಿಗೂ ದೊರೆಯದ ಸುಖಸಮಾಧಾನವು, ಬಡತನದ ಮುರುಕ ಮನೆಯಲ್ಲಿ ಕಾಲಕಳೆಯುವ ಬಡವರಿಗೆ ಸಿಗುವದನ್ನು ಕಣ್ಣಾರೆ ಕಂಡಕಡೆನೋಡಬಹುದು.

ಆದುದರಿಂದಲೇ ವಾಸುದೇವರಾಯ ತಾರಾಬಾಯಿಯವರು ತಮ್ಮಬಡತನದ ಜೀವಿತದಿಂದ, ಮುರುಕ ಮನೆಯಲ್ಲಿಯೇ ಸಂತೋಷದಿಂದ ಕಾಲ ಕಳೆಯುತ್ತಿದ್ದರು.

ರಘುನಾಥನ ಆಟಪಾಟ ವಿನೋದಗಳಿಂಲೂ, ಮುದ್ದು ಮಾತುಗಳಿಂದಲೂ ಬಡತನ ಕುಟುಂಬದ ಆಮನೆಗೆ ಹೆಚ್ಚಿನ ಶೋಭೆಯು ಬಂದಿತ್ತು. ಆ ಗರ್ವ ಶ್ರೀಮಂತಿಕೆಯ ಅರಮನೆಯಿಂದ ದೊರೆಯದ ಆನಂದವು ಬಡತನದ ಬೀಡಾದ ಮುರುಕ ಮನೆಯಲ್ಲಿ ದೊರೆಯುತ್ತಿತ್ತು.

ಹೊನ್ನಿನ ಮನೆಯಾದ ಹಿಂದೂದೇಶವು, ಬಹು ಭಾಗ್ಯಶಾಲಿಯಾದ ದೇಶವು. ಸಾವಿರಾರು ವರುಷ ಸ್ವಾತಂತ್ರ್ಯದಿಂದ ಸ್ವಚ್ಛಂದವಾಗಿ ನಂದನವನದಲ್ಲಿ ವಿಹಾರಮಾಡಿದ ಈ ಮಹಾಮಂಗಲ ಭಾರತವರ್ಷವು ಉಪಭೋಗಿಸಿದ ವೈಭವವನ್ನು ಪೃಥ್ವಿಯಮೇಲೆ ಇನ್ನಾವ ರಾಷ್ಟ್ರಗಳು ಅನುಭವಿಸಿರಕ್ಕಿಲ್ಲ.

ಇದೇ ಹಿಂದುಸ್ತಾನದಲ್ಲಿ **ಭಗವಾನ್ ಸ್ವಾಮಿಯು** ಒಂಬತ್ತುಸಾರೆ **ಅವತಾರ** ವೆತ್ತಿದನು. ಪರರಾಷ್ಟ್ರದವರನ್ನು ದಿಗ್ಭ್ರಮೆಮಾಡಿ ಅವರಕಣ್ಣು ಕುಕ್ಕಿಸಿದ ವೇದಗಳಿಗೆ ಅರ್ಥಬರೆದ, ಪ್ರಸಿದ್ಧಮತಸ್ಥಾಪನೆಗಳನ್ನುಮಾಡಿದ ಆಚಾರ್ಯತ್ರಯರಾದ " **ಶ್ರೀಶಂಕರಾಚಾರ್ಯರ, ಶ್ರೀರಾಮಾನುಜಾಚಾರ್ಯರ, ಶ್ರೀಮಧ್ವಾಚಾರ್ಯರ ಜನ್ಮವು** " ಇದೇ ಪುಣ್ಯಭೂಮಿಯಲ್ಲಿ ಆಗಿರುವದು. ಧಾರ್ಮಿಕ ಜಾಗ್ರತಿಯೊಂದಿಗೆ, ರಾಷ್ಟ್ರೀಯ ರಾಜ್ಯಕೀಯ ಜಾಗ್ರತೆಯನ್ನು ಹರಡಿ, ತಮ್ಮ ಯಶೋಪ್ರಭೆಯೊಂದಿಗೆ ಮೆರೆದ **ಶ್ರೀವಿದ್ಯಾರಣ್ಯ, ವ್ಯಾಸರಾಜ** ರಂಥ ಮಹಾತ್ಮರೂ **ಶ್ರೀಬಸವೇಶ್ವರ** ರಂಥಶಿವಶರಣರೂ ಇದೇ ಭಾರತದಲ್ಲಿ ಜನ್ಮವೆತ್ತಿರುವರು.

ಇಂಥ ಪುರಾತನ ಪುನೀತ ಪುಣ್ಯಭೂಮಿಯಾದ ಹಿಂದೂಸ್ತಾನದಲ್ಲಿ ದೊಡ್ಡ ದೊಡ್ಡ ಚಕ್ರವರ್ತಿಗಳೂ, ಎಷ್ಟೋ ಅರಸರೂ, ಬಲಾಢ್ಯಶಾಲಿಗಳಾದ ಅತಿರಥಿ ಮಹಾರಥಿಗಳೂ, ಮಹಾನ್ ಮಹಾನ್ ಋಷಿಗಳೂ ಕವಿಕುಲ ಶ್ರೇಷ್ಠರೂ ಆಗಿಹೋದರು. ಹಿಂದೆ ಹೇಳಿದಂತೆ ಭಗವಂತನಂತೂ ಒಂಬತ್ತುಸಾರೆ ಅವತಾರವೆತ್ತಿದನು; ಆದರೂ ಭಾರತೀಯರಿಗೆ ಬಂದಕಡುತರ ಶಾಪವಿಮೋಚನೆಯ ಕಾರ್ಯವು ಯಾರಿಂದಲೂ ಕೊನೆಗಾಣಲಿಲ್ಲ.

ಮೇಲೆ ಹೇಳಿದ ಶಾಪವು ಸಾಧಾರಣ ತರಗತಿಯ ಶಾಪವಲ್ಲ, ಆದರಿಂದ ಹಿಂದೂ ರಹವಾಸಿಗಳಿಗೆ ಕಡುತರ ದಕ್ಕೆತಗಲಿದೆ.

ಶಾಪದ ವಿವೇಚನೆಯು " ಅಲ್ಪಾಯುಷಿಯಾಗರಿ " ಎನ್ನುವದಾಗಿರುವದು.

ಭಾರತೀಯರಿಗೆ ಯಾವಕಲಿ ಪುರುಷನು ಶಾಪಕೊಟ್ಟನೋ ತಿಳಿಯದು ಈ ಶಾಪದಿಂದ ಹಿಂದೂ ರಹವಾಸಿಗಳಿಗೆ ಮಿತಿಮೀರಿದ ಹಾನಿಯಾಗಿದೆ ಈಗ ಆಗಹತ್ತಿದೆ. ಶಾಪವಿಮೋಚನೆ ಯಾಗದೆ ಇದ್ದಲ್ಲಿ, ಇದರಂತೆ ಮುಂದಾದರೂ ಹಾನಿಯ ಹಾವಳಿ ಯಾಗವದೆಂಬಲ್ಲಿ ಸಂದೇಹವಿಲ್ಲ.

ಹಿಂದುಸ್ತಾನ ದೊಳಗಣ ೩೧ ಕೋಟಿಜನರು ಕೀಳುತರದ ಪಾರತಂತ್ರ್ಯದೊಳಗೆ ಕೊಳೆಯುವದಕ್ಕೂ, ಭರತವರ್ಷದೊಳಗಿನ ಭಾರತೀಯರಿಗೆ

ಈ ತರದ ದೈನ್ಯಾವಸ್ಥೆ ಬಂದಿರುವದಕ್ಕೂ, ಮುಖ್ಯಕಾರಣವೆಂದರೆ, ನಮ್ಮ ಲ್ಲಿಯ ರಾಜ್ಯಕರ್ತರಿಗೂ, ಮತ್ತಿತರ ರಾಷ್ಟ್ರಪುರುಷರಿಗೂ, ತಗಲಿದ ಶಾಪ ಯೋ ದಿಂದ, ಅಲ್ಪಾಯುಷ್ಯದಲ್ಲಿ ಆಗುವ ಅವರ ನಿಧನದ ಹಾನಿಯೇ ಮುಖ್ಯ ಕಾರಣ.

ಉತ್ತಮ ಪ್ರಕಾರದ ಕರ್ತೃತ್ವ ಶಾಲಿಗಳಿಗೂ ರಾಜಕಾರಣ ಪಟುಗ ಳಿಗೂ, ಶೂರವೀರ ಮುತ್ಸದ್ದಿಗಳಿಗೂ ದೀರ್ಘಾಯುಷ್ಯದ ಬೆಂಬಲವಿದ್ದಿತ್ತೆಂ ದರೆ ಆಭಾಗಿ ಭರತವರ್ಷದ ಇತಿಹಾಸವು ಬೇರೆರೀತಿಯಿಂದ ಬರೆಯಲ್ಪಡು ತ್ತಿತ್ತೆಂದು ಧಾರಾಳವಾಗಿ ಹೇಳಬಹುದು. ಪಾರತಂತ್ರ್ಯದಿಂದ ಕಾಲ ಕಳೆ ಯುವ ಬದಲು ಸ್ವತಂತ್ರರೀತಿಯಿಂದ ಕಾಲ ಕಳೆಯುತ್ತಿದ್ದೆವು.

ಅರ್ವಾಚೀನಕಾಲದಲ್ಲಿ ಪೃಥ್ವೀರಾಜ ಮೊದಲಾದವರು, ಆಳಿಕೆಯ ಪ್ರಾರಂಭದಲ್ಲಿಯೇ ಅಲ್ಪಾಯುಷ್ಯದ ಶಾಪಕ್ಕೆ ಆಹುತಿಯಾದರು.

ಅಕಬರಬಾದಶಹನ ಕಾಲದಲ್ಲಿ ಪ್ರತಾಪಸಿಂಹರಥ ಪ್ರತಾಪಶಾಲಿಗ ಳೂ ಸಹ ಅಲ್ಪಾಯುಷಿ ಕಾಲನಬಾಯಿಗೆ ತುತ್ತಾದರು.

ಆಮೇಲೆ ವಿಜಯನಗರದ ಕೃಷ್ಣರಾಜ ಮೊದಲಾದವರಾದರೂ ಆಪ ವಾದವಾಗಿ ಉಳಿಯಲಿಲ್ಲ. ಒಬ್ಬ ಔರಂಗಜೇಬನ ಆಳಿಕೆಯಲ್ಲಿ, ರಜಪುತ ಸ್ಥಾನದ ಉದಯಪುರದ ಇಬ್ಬರುರಾಣಾರೂ, ಮರಾಠಾರಾಜ್ಯ ಸ್ಥಾಪಕರಾ ದ ಶಿವಾಜಿಛತ್ರಪತಿಗಳೂ ಅವರ ಮಕ್ಕಳಾದ ಸಂಭಾಜಿ, ರಾಜಾರಾಮ ಮಹಾರಾಜರು ಆಳಿ ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದರು.

ಮೇಲ್ಕಂಡ ಎಲ್ಲ ಉದಾಹರಣೆಗಳಿಂದ, ಹಿಂದೂಜನರಿಗೆ ಅಲ್ಪಾಯು ಷ್ಯದ ಶಾಪದಿಂದಾಗುವ ಅಗಣಿತ ಹಾನಿಯು ಸಹಜವಾಗಿ ತಿಳಿದು ಬರು ವಂತಿದೆ.

ಮೇಲಿನ ಎಲ್ಲ ಪ್ರತಾಪಶಾಲಿಗಳಿಗೆ **ಅಕಬರ, ಔರಂಗಜೇಬ, ವ್ಹಿ ಕ್ಟೋರಿಯಾ ರಾಣಿಯರಂತೆ,** ದೀರ್ಘಾಯುಷ್ಯದ ಆಶೀರ್ವಾದಲಾಭವು ಲಭಿಸಿತ್ತೆಂದರೆ, ಆಸೇತು ಹಿಮಾಲಯದ ವರಿಗೆ ಈವರೆಗೂ ಸ್ವಾತಂತ್ರತೆ ಯ ನಾಡಗುಡಿಯು ಸ್ವಚಂದ್ಧದಿಂದ ಮೆರೆಯುತ್ತಿತ್ತು.

ಆಧುನಿಕ ರಾಜ್ಯಕೀಯ ಚಲನ ವಲನದ ಉತ್ಪಾದಕರಾದ **ಲೋಕ ಮಾನ್ಯರೂ ಸಹ,** ಇರುವದಿವಸಗಳಿದ್ದರೂ ಅಲ್ಪಾಯುಷಿ ಅಪಮೃತ್ಯುವಿಗೆ ತುತ್ತಾದರು.

ಅಲ್ಪಾಯುಷ್ಯದ ಶಾಪವು ರಾಜರಿಗೂ, ರಾಜಕಾರಣ ಪಟುಗಳಿಗೂ, ಮತ್ತಿತರ ದೊಡ್ಡ ದೊಡ್ಡ ಜನರನ್ನು ಆಪಾಸಿವಂತೆ ಸಾಮಾನ್ಯ ಜನರಿಗಾದರೂ ತಗಲಿರುವದು.

ಒಟ್ಟಿನಮೇಲೆ ಹಿಂದೂ ರಹವಾಸಿಗಳ ಆಯುರ್ಮರ್ಯಾದಿಯೇ ಕಡಿಮೆಯಾಗಿದೆ ಎಂದು ನಿಃಸಂದೇಹವಾಗಿ ಹೇಳಬಹುದು.

ಅಲ್ಪಾಯುಷ್ಯದ ಪ್ರಮಾಣದಲ್ಲಿ, ಯಾವದೇಶವೂ ಹಿಂದೂದೇಶವನ್ನು ಸರಿಗಟ್ಟಲಾರದು.

ಎರಡನೆಯದೇಶಗಳ ಆಯುರ್ಮರ್ಯಾದೆಯು ೪೫ ರಿಂದ ೫೫ರ ವರೆಗೆಇದ್ದರೆ, ಹಿಂದುಸ್ತಾನದ ಆಯುರ್ಮರ್ಯಾದೆಯು ೨೨ ರಿಂದ ೨೫ರ ವರೆಗೆ ಇದೆ. ಹೀಗಿದ್ದು, ಇಷ್ಟಕ್ಕೆ ಮುಗಿಯದೆ ಇನ್ನೂ ಹೆಚ್ಚಿನ ಪರಿಮಾಣದ ಮೇಲೆ ನಡೆಯಹತ್ತಿದೆ.

ವಾಸುದೇವರಾಯ ತಾರಾಬಾಯಿಯರಾದರೂ, ಈ ಶಾಪದಿಂದಲೇ, ನಡು ಹರೆಯದ ಸಂಸಾರದ ಭರದಲ್ಲಿಯೇ ತಮ್ಮ ಜೀವಿತಯಾತ್ರೆಯನ್ನು ಮುಗಿಸಬೇಕಾಯಿತು.

ಪತಿ ಪತ್ನಿಯರು ೩, ೪ ತಿಂಗಳಗಳ ಅಂತರದಲ್ಲಿಯೇ ಕಾಲನು ಪಸಿರಿಸಿದ್ದ ಬಲೆಯೊಳಗೆಬಿದ್ದು, ಒಬ್ಬರಮಾರ್ಗವನ್ನು ಮತ್ತೊಬ್ಬರು ಅವಲಂಬಿಸಿ ರಘುನಾಥನಿಂದ ದೂರಾದದ್ದು ಹೆಚ್ಚಿನ ಖೇದಕಾರಕ ಸಂಗತಿಯು.

ನಡುವಿದ ಬೆರಳು ಎಡವುವದರ ನಿಜಾಂಶವು ಮೇಲ್ಕಂಡ ಉದಾಹರಣೆಯಿಂದ ಸ್ಪಷ್ಟವಾಗಿ ತಿಳಿದುಬರುವಂತಿದೆ.

ವಾಸುದೇವರಾಯರು ಮುರುಕ ಮನೆಯಲ್ಲಿ ಮಾಟಾದ ಸಂಸಾರವನ್ನು ಸುಖ ಸಮಾಧಾನದಿಂದ ಸಾಗಿಸುವ ರೀತಿಯನ್ನು ನೋಡಿ ಮಾತ್ಸರ್ಯದ ಮೃತ್ಯುವು, ಸುಶೀಲ ಸದಾಚಾರ ಕುಟುಂಬದಸೊಬಗನ್ನು ನೋಡ

ದವನಾಗಿ ಗುಣಕ್ಕೆ ತಕ್ಕಂತೆ ತನ್ನಕಾರ್ಯವನ್ನು ಶೀಘ್ರದಲ್ಲಿಯೇ ನೆರವೇರಿಸಿ ಕೊಂಡು ಸಂಸಾರದ ಸೊಬಗನ್ನು ಹಾಳುಮಾಡಿದನು.

ಪಾಪ! ಸುಖದ ಉತ್ತುಂಗ ಶಿಖರವನ್ನು ಮುಟ್ಟಿದ್ದ ರಘುನಾಥನು ಅಲ್ಪಾವಧಿಯಲ್ಲಿಯೇ ಒಮ್ಮಿಂದೊಮ್ಮೆ ನೂಕಲ್ಪಟ್ಟು ತೆಗ್ಗಾದ ಕಂದರದಲ್ಲಿ ಬಿದ್ದನು.

ಆಳವಾದ ನೀರೊಳಗೆ ಮನಬಂದಂತೆ ವಿಹಾರವಾಡುವ ಮೀನುಗಳನ್ನು ಜಾಲಗಾರನು ಬಲೆಹಾಕಿ ತೆಗೆದು, ಉಸುಗಿನಮೇಲೆ ಒದ್ದಾಡಲು ಎಸೆಯುವಂತೆ, ನಿಷ್ಠುರವಿಧಿಯು, ಪ್ರೇಮದ ತಾಯಿತಂದೆಗಳು, ಕೊಡೆಯಂತಿರುವ ಜಲಾಶಯದಿಂದ, ತೆಗೆದುತಂದು, ದುಃಖದ ವಿಶಾಲವಾದ ಉಸುಗಿನ ಬೈಲೊಳಗೆ ಒಗೆದನು.

ಬಡಪ್ರಾಣಿ ರಘುನಾಥನು ಪುತ್ರವಾತ್ಸಲ್ಯದ ತಾಯಿತಂದೆಗಳ ದಾರುಣವಾದ ವಿರಹದಿಂದ, ದುಃಖಬಡುತ್ತ ಕಣ್ಣೀರಮಣೆಯ ಸರವಾಡುತ್ತ ತನ್ನಆಯುಷ್ಯಪ್ರಮಾಣದ ಘಳಿಗೆಯನ್ನೆಣಿಸುತ್ತ ಕೂತುಕೊಳ್ಳಬೇಕಾಯಿತು

ರಘುನಾಥನಿಗೆ, ಪರದೇಶಿಯಾದ ರಘುನಾಥನಿಗೆ, ಭೂತಲದಮೇಲೆ ಸಮೀಪದ ಆಪ್ತೇಷ್ಟರಾರೂ ಇಲ್ಲೆನ್ನುವಂತಿದ್ದಿಲ್ಲ “ ಮುಣುಗುವವರಿಗೆ ಕಡ್ಡಿಯು ಸಹಾಯ ” ವೆಂಬುವಂತೆ ಚಿಕ್ಕಪ್ಪ ನೋವ-ನ.ಮಾತ್ರ ಇದ್ದನು.

ಆತನೇ ಕೃಷ್ಣರಾಯ—

ಕೃಷ್ಣರಾಯರು ಹೆಂಡತಿಯೊಡನೆ ರಾಯಿಚೂರಲ್ಲಿರುತ್ತಿದ್ದರು. ರಘುನಾಥನತಂದೆ ವಾಸುದೇವರಾಯರೂ, ಕೃಷ್ಣರಾಯರೂ ಒಡಹುಟ್ಟಿದವರು

ಕೃಷ್ಣರಾಯರ ಸ್ವಭಾವವು ತುಸು ತೀಕ್ಷ್ಣ. ಹೆಂಡತಿಯಾದರೂ ಗರ್ವಿಷ್ಠಸ್ವಭಾವದವಳಿದ್ದುದರಿಂದ, ಸ್ವಗ್ರಾಮದಲ್ಲಿ ತಮ್ಮ ವಿನಯೀ ಅತ್ತಿಗೆಯ ಸ್ವಭಾವಕ್ಕೂ ಹೆಂಡಿತಿಯ ಸ್ವಭಾವಕ್ಕೂ ಸರಿಹೋಗುತ್ತಿದ್ದಿಲ್ಲ. ಮೇಲಿಂದ ಮೇಲೆ ಮನೆಯಲ್ಲಿ ಮಾತಿನ ಸಣ್ಣಜಗಳಗಳೂ ಆಗುತ್ತಿದ್ದವು.

ಮುಂದೆ ತುಸು ದಿವಸಗಳಲ್ಲಿಯೇ ಕೃಷ್ಣರಾಯರಿಗೆ, ರಾಯಚೂರ ತಾಲೂಕದಾರ ಕಚೇರಿಯಲ್ಲಿ ಕೆಲಸಹತ್ತಿತು. ಹೆಂಡತಿಯೊಂದಿಗೆ ರಾಯಿ

ಚೂರಲ್ಲಿರಹತ್ತಿದರು. ಯಾವಾಗಾದರೊಮ್ಮೆ ವರ್ಷಾರು ತಿಂಗಳಗಳಿಗೆಹೋಗಿ ನಾಲ್ಕು ದಿವಸ ಅಣ್ಣನಲ್ಲಿದ್ದು ಬರುತ್ತಿದ್ದರು.

ಅಣ್ಣನಿಗಾದರೂ ಮುರುಕುಮನೆ ಎರಡು ಕೂರಿಗಿ ಭೂಮಿಯ ಹೊರ್ತು, ಹೆಚ್ಚಿನ ಯಾವಬಗೆಯ ಪಿತ್ರಾರ್ಜಿತ ಆಸ್ತಿಯೂ ಇದ್ದಿಲ್ಲ.

ಕೃಷ್ಣರಾಯರು ರಾಯಚೂರಿಗೆ ಬಂದಾಗ ಎತ್ತ ನೋಡಿದರೂ ಮೂರೇ ಮಂದಿ. ಗಂಡಹೆಂಡತಿ ಒಂದೇ ಹೆಣ್ಣು ಹುಡುಗಿ.

ವಾಸುದೇವರಾಯ ತಾರಾಬಾಯಿಯವರು ಸತ್ತಸುಮಾರಕ್ಕೆ ಕೃಷ್ಣರಾಯರು ರಾಯಿಚೂರಿಗೆ ಬಂದು ಸುಮಾರು ಹತ್ತುಹನ್ನೊಂದು ವರುಷಗಳಾಗಿದ್ದವು. ಈ ಮೊದಲೇ ಅವರು ತಮ್ಮ ಮಗಳಾದ ಕೃಷ್ಣವೇಣಿಯ ಲಗ್ನವನ್ನು ಮಾಡಿದ್ದರು.

ವಾಸುದೇವರಾಯ ತಾರಾಬಾಯಿಯವರ ಅಕಾಲ ನಿಧನವು ಕೃಷ್ಣರಾಯರನ್ನು ಗಾಸಿಮಾಡದೆ ಬಿಡಲಿಲ್ಲ. ಏನೂ ಸಹಾಯ ಸಿಗದಿದ್ದರೂ ಬೆಂಬಲದಂತಿದ್ದ ಬಂಧುಪ್ರೇಮಿ ಅಣ್ಣ, ಅತ್ತಿಗಿಯರ ನಿಧನದಿಂದ ರಾಯರಿಗೆ ಮಿತಿಮೀರಿದ ದುಃಖವಾಯಿತು. ಅಣ್ಣಸು ಗತಿಸಿದ ವಾರ್ತೆಯು ಬರುತಲೇ, ಕೃಷ್ಣರಾಯರು ಕೂಡಲೆ ಹೋಗಿ ಬ್ರಾಹ್ಮಣಿಕೆಗನುಸರಿಸಿ ಕ್ರಿಯಾಕರ್ಮಗಳನ್ನು ಮಾಡಿ ಅನಾಥ ಬಾಲಕನಾದ ರಘುನಾಥನನ್ನು ರಾಯಿಚೂರಿಗೆ ಸಂಗಡ ಕರೆತಂದರು.

ಮಗಳಾದ ಕೃಷ್ಣವೇಣಿಯು ಅತ್ತಿಯ ಮನೆಗೆ ಹೋದದ್ದರಿಂದ ಮನೆಯಲ್ಲಿ ಹುಡುಗರು ಇಲ್ಲದಂತಾದುದರಿಂದ, ಪತಿಪತ್ನಿಯರ ಪ್ರೇಮವು ನಿಜವಾಗಿ ರಘುನಾಥನಲ್ಲಿ ಕೂಡಲೆ ಬೇರೂರಿತು. ಯಾವಪ್ರಕಾರದ ಕಷ್ಟವು ಆಗದಂತೆ ಪುತ್ರವತ್ ಪಾಲನ ಮಾಡುವ ಭಾರವನ್ನು ಸತಿ ಪತಿಯರು ಕೈಕೊಂಡರು.

ಇಷ್ಟರಲ್ಲಿ ಕೃಷ್ಣರಾಯರ ಹೆಂಡತಿಯಲ್ಲಿದ್ದ ಗರ್ವಿಷ್ಠ ಗುಣವು ಪೂರ್ಣವಾಗಿ ಅಳಿದುಹೋಗಿತ್ತು. ಕೃಷ್ಣವೇಣಿಯ ಮೇಲೆ ಮಕ್ಕಳಾಗದೆ ಇದ್ದುದರಿಂದ ರಘುನಾಥನ ಮೇಲೆ ಸಹಜವಾಗಿಯೇ ಅವಳ ಪ್ರೇಮವು ಕೂ

ತಿತು. ರಘುನಾಥನು ತನ್ನ ವಿನಯಶೀಲ ನಡತೆ ನಡಾವಳಿಗಳಿಂದಲೂ ಮೃದು ಮಾತುಗಳಿಂದಲೂ, ತುಸು ದಿವಸಗಳಲ್ಲಿ ಕಕ್ಕ ಕಕ್ಕಿಯರ ಘನತರ ಪ್ರೇಮಾದರಕ್ಕೆ ಪಾತ್ರನಾದನು. ಅವನ ಪ್ರೇಮವು ಅವರ ಮೇಲೆ ತಂದೆತಾಯಿಗಳಿಗಿಂತ ಹೆಚ್ಚಾಗಿ ಇದ್ದಿತು.

ರಾಯಿಚೂರಿಗೆ ಬಂದ ನಂತರ ಕೃಷ್ಣರಾಯರು ರಘುನಾಥನನ್ನು ಹ ಮದರ್ದ ಶಾಲೆಗೆ ಕಳುಹ ಹತ್ತಿದರು. ರಘುನಾಥನ ಬುದ್ಧಿಯು ಬಹು ಚುರುಕು. ಪ್ರತಿಯೊರುಷ ತಪ್ಪದೆ ತೇರ್ಗಡೆ ಹೊಂದುತ್ತ ತನ್ನ ವಯಸ್ಸಿನ ೧೪ನೆಯ ವರುಷದಲ್ಲಿ ಮಿಡಲ್ ಪರೀಕ್ಷೆಯಲ್ಲಿ, ಮೊದಲನೇ ತರಗತಿಯಲ್ಲಿ ತೇರ್ಗಡೆಹೊಂದಿದನು.

ಅವನ ಬುದ್ಧಿಬಲವನ್ನು ನೋಡಿ, ಕೃಷ್ಣರಾಯರು ಮುಂದೋದಿಸುವ ಸಲುವಾಗಿ ಕಲಬುರ್ಗಿಗೆ ವರ್ಗಮಾಡಿಸಿಕೊಂಡು ಬಂದರು. ಅಲ್ಲಿಗೆ ಬಂದನಂತರ ನೂತನ ವಿದ್ಯಾಲಯಕ್ಕೆ, ಕಳುಹ ಹತ್ತಿದರು. ಅಲ್ಲಿಯೂ ಸರಿಯಾಗಿ ಪಾಸಾಗುತ್ತ ಮುಂದೆರಡು ವರುಷಗಳಲ್ಲಿ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಪಾಸಾದನು.

ಕೃಷ್ಣರಾಯರು ತಾಲೂಕದಾರ ಕಚೇರಿಯಲ್ಲಿ, ಕೆಲಸಮಾಡುತ್ತಿದ್ದುದೇನು ನಿಜ; ಆದರೆ ಇತರರಂತೆ ಲಂಚಗೂಳಿಗಳಾಗದೆ ನಿಸ್ಪೃಹ ವೃತ್ತಿಯವರಿದ್ದುದರಿಂದ,ಇವರಿಂದ ಹೆಚ್ಚಿನಸಂಪಾದನೆಯು ಆಗಲಿಲ್ಲ. ಹೊಟ್ಟೆಬಟ್ಟೆಗೆ ಮಾತ್ರ ಕೊರತೆ ಇದ್ದಿಲ್ಲ ಇದಲ್ಲದೆ ಮಗಳ ಮದುವೆಯೊಂದನ್ನು ಮಾಡಿದ್ದರು. ಈ ವೇಳೆಯಲ್ಲಿ ಇವರಲ್ಲಿ ವಿದ್ಯಾರ್ಥಿನಿಲಯ (ಹಾಸ್ಟೆಲ್)ದಲ್ಲಿ ಮಗನನ್ನಿಟ್ಟು ಓದಿಸುವಷ್ಟು ದ್ರವ್ಯವಿದ್ದಿಲ್ಲ. ಈ ಅವಧಿಯಲ್ಲಿ ರಾಯಿಚೂರಲ್ಲಿ ಪೆನ್‌ಶನ್‌ದಾರ್‌ಡೋರ್ವರು ಇವನ ಊಟ ಉಡಿಗೆಯ ಖರ್ಚನ್ನು ಹೊತ್ತುಕೊಂಡು ತಮ್ಮ ಒಬ್ಬಳೇ ಮಗಳ ಮದುವೆಯನ್ನು ಮಾಡಿಕೊಟ್ಟರು. ರಘುನಾಥನು ವಯಸ್ಸಿನಿಂದ ಸಣ್ಣವನಿದ್ದರೂ ಮದುವೆ ಮಾಡಿಕೊಳ್ಳುವದು ಮನಸ್ಸಿನಲ್ಲಿಲ್ಲದಿದ್ದರೂ, ಮುಂದಿನ ಅಭ್ಯಾಸದ ವಿಷಯವನ್ನು ಮನದಲ್ಲಿ ತಂದು, ಕಕ್ಕನ ಮಾತಿಗೆ ಒಪ್ಪಿ ಮದುವೆಮಾಡಿಕೊಂಡು, ಕೂಡಲೆ ಮುಂದಿನ ಅಭ್ಯಾಸದ ಸಲುವಾಗಿ ಪುಣೆಕ್ಕೆ ಹೋದನು.

ಕಕ್ಕನಾದರೂ ತನ್ನ ನೂರೆಂಟು ಕಷ್ಟಗಳನ್ನು ಬದಿಗಿಟ್ಟು ಮಗನಿಗೆ ಕಿಂಚಿತ್ತಾದರೂ ಕಷ್ಟವಾಗದಂತೆ, ಆಗಾಗ್ಗೆ ತನ್ನಿಂದಾದಷ್ಟು ಪುಸ್ತಕ ಫೀ ಪೂರತೆಗಾಗಿ ಹಣಕಳುಹುತ್ತಿದ್ದನು. ಅಲ್ಲಿಯಾದರೂ ತಪ್ಪದೆ ಪಾಸಾಗುತ್ತ, ಸುಲಲಿತವಾಗಿ ಎಮ್. ಎ. ಪರೀಕ್ಷೆಯನ್ನು ಪಾಸಾದನು.

ಇಷ್ಟರಲ್ಲಿ ಕೃಷ್ಣರಾಯರ ಹೆಂಡತಿಯು ಮೈಮೇಲಿನ ಒಂದೆರಡು ವಸ್ತುಗಳು ಹೋಗಿದ್ದವು. ಅವಳಾದರೂ ಮಗನ ವಿದ್ಯಾಭ್ಯಾಸದ ಸಲುವಾಗಿ ಕೊಡಲು ಕಿಂಚಿತ್ತಾದರೂ ಹಿಂದುಮುಂದೆ ನೋಡಲಿಲ್ಲ.

ಪರೀಕ್ಷೆ ಪಾಸಾಗಿ ಬರುತಲೆ ಹಿಂದೆಹೇಳಿದಂತೆ ಕೃಷ್ಣರಾಯರು ಅಧಿಕಾರಿಗಳ ಸಿಫಾರಸು ಮಾಡಿಸಿ, ಸದ್ಯದ ಸಂಸಾರಕ್ಕೆ ಸಾಕಷ್ಟು ಹಣಬರುವ ಕೆಲಸವನ್ನು ಹಚ್ಚಿಕೊಟ್ಟರು. ತಮಗೆ ಪೆನ್‌ಶನ್ ದಿವಸಗಳು ತೀರ ಸನಿಯಕ್ಕೆ ಬಂದಿದ್ದರಿಂದ, ಆ ಮೇಲೆ ತಾವು ಸ್ವಗ್ರಾಮಕ್ಕೆ ಹೋಗುವವರಿದ್ದುದರಿಂದ, ಮುಂದೆ ಮಗನಿಗೆ ಒಬ್ಬನೇ ಇರಲು ಯಾವ ತರದ ತ್ರಾಸವಾಗಬಾರದೆಂದು, ತಾವು ಸಂಭ್ರಮ ದಿಂದ ಸಂಸಾರ ಮಾಡುವದನ್ನು ನೋಡಬೇಕೆಂದು, ಸೊಸಿಯನ್ನು ಕರಿಸಿಕೊಂಡು ಬೇರೆ ಮನೆ ಮಾಡಿ ಇಟ್ಟರು.

ಈ ಸಮಯದಲ್ಲಿ ಬೇರೆ ಸಂಸಾರ ಸಾಗಿಸಹತ್ತಿ ಒಂದೆರಡು ವರುಷಗಳಷ್ಟೇ ಆಗಿರಬಹುದು.

ಮುನ್ನುಡಿದಂತೆ ಅಸಹಕಾರದ ಚಲನವಲನವು ಪ್ರಾರಂಭವಾಯಿತು. ರಘುನಾಥನು ಚಾಕರಿಯನ್ನು ಕಾಲಿನಿಂದೊದ್ದು, ಹೆಂತಿಯನ್ನೂ ಕಕ್ಕಕಕ್ಕಿಯರನ್ನೂ ಬಿಟ್ಟು ಅಸಹಕಾರದ ಮಾರ್ಗಹಿಡಿದು ಓಡಿದನು.

✣ ✣ ✣ ✣ ✣ ✣ ✣ ✣

ರಘುನಾಥನು ಒಳ್ಳೇ ಆನಂದದಿಂದ ಹೋಗಿ ಕಾಂಗ್ರೆಸ್ ಕಮೀಟಿಯಲ್ಲಿ ಸೇರಿದನು. ಅವನಲ್ಲಿಯ ಬುದ್ಧಿಬಲವನ್ನೂ ವಕ್ತೃತ್ವವನ್ನೂ ನೋಡಿ ಕಾಂಗ್ರೆಸ್ ಕಮೀಟಿಯವರು, ಪ್ರಚಾರಕನನ್ನಾಗಿ ನೇಮಿಸಿದರು. ವ್ಯಾಖ್ಯಾನಕೊಡುವದು, ರಘುನಾಥನ ಐಚ್ಛಿಕವಿಷಯ. ಪ್ರಚಂಡ ಜನಸ

ಮುದಾಯದಲ್ಲಿ, ಪರಿಣಾಮಕಾರಕ ಭಾಷಣಮಾಡಬೇಕೆಂಬ ಉತ್ಸುಕತೆ ಯು, ಮೊದಲಿನಿಂದಲೂ ಅವನಲ್ಲಿತ್ತು. ಅವನು ವಿದ್ಯಾರ್ಥಿ ಇದ್ದಾಗ ಸಾಲೆ ಕಾಲೇಜಗಳಲ್ಲಿ ಜರುಗುತ್ತಿದ್ದ, ವಾರ ಸಮ್ಮೇಲನಗಳಲ್ಲಿ ಹೆಚ್ಚಾಗಿ ಭಾಗ ತೆಗೆದುಕೊಳ್ಳುತ್ತಿದ್ದನು. ಎಲ್ಲರಮೇಲೆ ಇವನ ಭಾಷಣದ ಪರಿಣಾ ಮವೇ ಹೆಚ್ಚಾಗಿ ಆಗುತ್ತಿತ್ತು ವಿದ್ಯಾರ್ಥಿಗಳೆಲ್ಲರೂ ಇವನಿಗೆ 'ವಾಗ್ಮಿ' ಎಂದು ಕರೆಯುತ್ತಿದ್ದರು. ಜನಸಮೂಹ ನೆರೆದಾಗ, ಶ್ರೋತ್ರ ಸಮೂಹ ಕ್ಕೆ ಬಿಂಬಿಸುವಂತೆ ಭಾಷಣಮಾಡುವಾಗ, ಇವನಿಗೆ ಮಿತಿಮೀರಿದ ಹುರುಪು ಬರುತ್ತಿತ್ತು. ಕಾಂಗ್ರೇಸ್ ಕಮೀಟಿಯವರು ತನ್ನನ್ನು ಬೇಕಾದ ಸ್ಥಲದ ಮೇಲೆ ನೇಮಿಸಿದ್ದರಿಂದ ಇವನಿಗೆ ಹಿಡಿಸಲಾರದ ಹರುಷವಾಗಿತ್ತು.

ಪಟ್ಟಣದ ಮುಖ್ಯಮುಖ್ಯ ಭಾಗಗಳಲ್ಲಿಯೂ, ಸಾರ್ವಜನಿಕ ಬೈಲಿನ ಲ್ಲಿಯೂ, ರಘುನಾಥನ ಸ್ಫೂರ್ತಿದಾಯಕ ಭಾಷಣಗಳು ಆಗಹತ್ತಿದವು. ಅವನ ಹೊಸ ಹುರುಪಿನ ಉಜ್ವಲ ದೇಶಭಕ್ತಿಯ ಭಾಷಣ ಕೇಳುವದಕ್ಕೆ, ಜನರು ತಂಡತಂಡವಾಗಿ ಬರಹತ್ತಿದರು. ಹಾ ಹಾ ಅನ್ನುವದರಲ್ಲಿ, ಅವ ನ ಹೆಸರು ವೃತ್ತಪತ್ರಗಳಲ್ಲಿ ತಲೆದೋರಹತ್ತಿತು. ಕರ್ನಾಟಕದ ವೃತ್ತ ಪತ್ರಕಾರರಂತೂ ಅವನ ಭಾವಚಿತ್ರವನ್ನು ಛಾಪಿಸಿ 'ಬಿಸಿನೆತ್ತರದ, ತರು ಣ ದೇಶಭಕ್ತ'ನೆಂದು ಬರೆಯಹತ್ತಿದರು.

ಅಸಹಕಾರದ ಚಲನವಲನದಲ್ಲಿ ಬಹುಜನರು ವ್ಯಾಖ್ಯಾತರೆಂಬ ಬ ಹುಮಾನದ ಬಿರುದನ್ನು ತೆಗೆದುಕೊಂಡರು.

ವ್ಯಾಖ್ಯಾತರು, ವ್ಯಾಖ್ಯಾನ ಕೊಡುವಾಗ ಮನಬಂದಂತೆ ಒದರುವ ದೂ ಅತ್ತಿತ್ತ ಕೈಮಾಡಿ ನಾನಾಬಗೆಯಾಗಿ ಅಭಿನಯ ತೋರಿಸುವದೂ, ಪ್ರಸಿದ್ಧ ಭಾಷಣಕಾರರ ಲಕ್ಷಣವೆಂದು ತಿಳಿದು, ತಾವೂ ಮಾಡಲುಪಕ್ರ ಮಿಸಿ ತಮ್ಮಷ್ಟಕ್ಕೆ ತಾವೇ ಸರಸವಾಯಿತೆಂದು ಆನಂದಬಡುವರು.

ಒದರಿ, ಕೈಮಾಡಿ, ಮನಬಂದಂತೆ ಮಾತಾಡುವವರು ನಿಜವಾದ ವ್ಯಾಖ್ಯಾತರೆಂದೆನಿಸುವದಿಲ್ಲ.

ಎಷ್ಟೋಜನರು ತಮ್ಮ ಗುಡಿಗಿನಂತಹ ಗರ್ಜನೆಯಿಂದ ಭಾಷಣ

ಮಾಡುವಾಗ, ಜನರಿಗೆ ಭಾಷಣದ ಮಹತ್ವತಿಳಿಯದೆ ಹುರುಳಿಲ್ಲದ ಹೊರ ಧ್ವನಿಯೊಂದೇ ಕೇಳಬರುವದು.

ವ್ಯಾಖ್ಯಾನಕೊಡಲು ನಿಂತರೆ ವ್ಯಾಖ್ಯಾತರ ಪ್ರತಿಯೊಂದು ಶಬ್ದವು ಶ್ರೋತೃ ಸಮುದಾಯದ ಹೃತ್ಪಟಲದ ಮೇಲೆ ಮೂಡಿ ಅವರನ್ನು ಆ ಭಾಷಣದಲ್ಲಿ ತನ್ಮಯಮಾಡುವಂತಿದ್ದರೆ ಅದಕ್ಕೆ ವ್ಯಾಖ್ಯಾನವೆನ್ನಲು ಅಡ್ಡಿ ಇಲ್ಲ.

ಅಸಹಕಾರದ ಯುಗದಲ್ಲಿ, ಇನ್ನೊಂದು ಮಹತ್ವದ ವಿಷಯವೆಂದರೆ- ಸರಕಾರಕ್ಕೆ ಮನಬಂದಂತೆ ಬೈಯುವದು; ಇದೊಂದು ಉಜ್ವಲ ರಾಷ್ಟ್ರ ಭಕ್ತಿಯ ಲಕ್ಷಣವೆಂದು ತಿಳಿಯುತ್ತಿದ್ದರು.

ವ್ಯಾಖ್ಯಾತರು ವ್ಯಾಖ್ಯಾನದಲ್ಲಿ, ವೀರರಸವನ್ನು ತಂದರೆ, ಕೇಳುವವರ ತೋಳುಗಳು ವೀರ ಶ್ರೀಯಿಂದ ಸ್ಫುರಣಹೊಂದಿ, ಅಂಗಾಂಗದಲ್ಲಿ ಬಿಸಿನೆತ್ತರವು ಹರಿದಾಡುತ್ತಿರಬೇಕು. ಕರುಣಾರಸವನ್ನು ತಂದರೆ ಕೇಳುವವರ ಕಣ್ಣೊಳಗಿಂದ ನೀರು ಹರಿಯಬೇಕು. ಶೋಕ ರಸವನ್ನು ತಂದರೆ ಕುತ್ತಿಗೆಯ ನರಗಳುಬ್ಬಿಬರಬೇಕು. ಇಂಥ ಭಾಷಣಕ್ಕೆ ನಿಜವಾದ ಭಾಷಣವೆನ್ನಬೇಕು.

ಯಾವ ವಾಗ್ಮಿಯ ಭಾಷಣದಲ್ಲಿ ವಾಕ್‌ಚಾತುರ್ಯವಿಲ್ಲ. ಅವನ ಪ್ರತಿಯೊಂದು ಶಬ್ದವು ಶ್ರೋತೃ ಸಮುದಾಯದ ಹೃದಯವನ್ನು ಭೇದಿಸುವದಿಲ್ಲ. ಅಂಥ ವ್ಯಾಖ್ಯಾತನು, ಎಷ್ಟು ಒದರಿ ಯಾವಕಡೆ ಕೈಮಾಡಿದರೂ, ಯಾರ ಮೇಲೂ ಪರಿಣಾಮವಾಗುವದಿಲ್ಲ. ಶ್ರೋತೃ ಸಮುದಾಯದ ಮನದಮೇಲೆ ಮೂಡಿಸಿ ಅವರ ಅಂತಃಕರಣವನ್ನು ತನ್ನಕಡೆಗೆಳೆಯುವ ಕಲೆಯು ರಘುನಾಥನಿಗೆ ಮಾತ್ರ ಸಾಧಿಸಿತ್ತು.

ಅವನು ಪ್ರಚಾರಕ ಕಾರ್ಯ ಕೈಕೊಂಡಮೇಲೆ ಇತ್ತಿತ್ತಲಾಗಿ ಅವನ ಈ ಕಲೆಯು ವಿಕಸಿತ ಹೊಂದುತ್ತ ನಡೆದಿತ್ತು. ಭಾಷಣವು ಕೇಳುವವರ ಮನಸ್ಸಿನಮೇಲೆ ಕೂಡಲೆ ಪರಿಣಾಮವಾಗುತ್ತಿತ್ತು. ಅವನ ಭಾಷಣ ಕೇಳಲು ಮಿತಿಮೀರಿ ಜನರು ಬರುತ್ತಿದ್ದರು.

ರಘುನಾಥನ ರಸಗರ್ಭಿತ ಭಾಷಣದ ಪರಿಣಾಮದಿಂದ ಬಹು ಜನರು ಇದ್ದ ಚಾಕರಿಗೆ ತಿಲಾಂಜಲಿಕೊಟ್ಟು, ಸುಲಲಿತವಾಗಿ ಬಂದು ಸತ್ಯಾಗ್ರದಲ್ಲಿ ಸೇರುತ್ತಿದ್ದರು. ಶಾಲೆ ಕಾಲೇಜಗಳ ಹುಡುಗರು ಅವನ ಸ್ಫೂರ್ತಿ ಮತ್ತು ಪರಿಣಾಮಕಾರಕ ಭಾಷಣದ ಗುಟ್ಟನ್ನರಿತು, ತಡಮಾಡದೆ ಶಾಲೆ ಕಾಲೇಜಗಳಿಗೆ ಶರಣು ಹೊಡೆದು ಹೊರಹೊರಡುತ್ತಿದ್ದರು.

ತಮ್ಮ ಭಾವೀ ಭವಿತವ್ಯವನ್ನರಿತ, ದಿನಹೋದ ಹಳೆಯ ಜನರ ಮೇಲೆ ಇವನು ಎಂಥ ಭಾಷಣಮಾಡಿದರೂ ಪರಿಣಾಮವಾಗುವಂತೆ ಕಾಣಬರುತ್ತಿದ್ದಿಲ್ಲ. ಸಾರಾಸಾರ ವಿಚಾರವನ್ನರಿಯದ ಭಾವನಾಸ್ಪದ ತರುಣರು ಮಾತ್ರ ಅವನ ಆ ವಿಚಾರಕ್ಕೆ ಪಟಪಟ ಆಹುತಿಯಾಗುತ್ತಿದ್ದರು. ರಘುನಾಥನ ಪ್ರಸಂಶನೀಯ ಕಾರ್ಯದಿಂದ ಬಹುಜನರು ಬಹಳವಾಗಿ ಅವನನ್ನು ಗೌರವಿಸಹತ್ತಿದರು. ಎಲ್ಲ ಕಡೆಯಿಂದಲೂ ಅಭಿನಂದನ ಪರ ತಂತಿಗಳು ಬರಹತ್ತಿದವು.

ಒಂದುದಿವಸ ರಘುನಾಥನು ಮತ್ತಿತರ ಸ್ವಯಂಸೇವಕರೊಂದಿಗೆ ಒಬ್ಬ ಪಾರ್ಶಿಯ ಸರಾಯಿಯ ಅಂಗಡಿಯಮುಂದೆ ಸತ್ಯಾಗ್ರಹ ನಡೆಸಿದಾಗ ಅವನು ಈ ಜನರ ಮೇಲೆ ಸಿಟ್ಟಿಗೆದ್ದು ಕೈಯಲ್ಲಿ ಹಿಡಿದಿದ್ದ ಕಾಜಿನ ಪೇಲೆಯಿಂದ ಒಳಿತಾಗಿ ಇವನ ಮೇಲೆ ಏಸೆದನು. ಆದರ ಬಲವಾದ ಪೆಟ್ಟಿನಿಂದ ೩, ೪, ದಿವಸಗಳವರೆಗೆ ಮಾತ್ರ ಯಾವ ಕೆಲಸ ಮಾಡಲೂ ಬರಲಿಲ್ಲ.

೭, ೮, ದಿವಸಗಳಮೇಲೆ, ಇದರಂತೆ ಮತ್ತೊಬ್ಬ ಪರದೇಶಿ ಬಟ್ಟೆಯ ವ್ಯಾಪಾರಿಯ ಅಂಗಡಿಯ ಮುಂದೆ ಸತ್ಯಾಗ್ರಹ ನಡಸಿದಾಗ, ದಾರೀ ತರುಬಿದ ಆರೋಪದಿಂದ ಪೋಲಿಸರಕೈಗೆ ಸಿಗಬೇಕಾಯಿತು.

ಪೋಲಿಸರು ರಘುನಾಥನನ್ನು ಮ್ಯಾಜಿಸ್ಟ್ರೇಟರ ಮುಂದೆ ತಂದು ನಿಲ್ಲಿಸಿದರು ಮ್ಯಾಜಿಸ್ಟ್ರೇಟರು ೫೦ ರುಪಾಯಿಯ ದಂಡ ಇಲ್ಲವೆ ಒಂದು ತಿಂಗಳ ಸಾದಾ ಶಿಕ್ಷೆ ಎಂಬುದಾಗಿ ಶಾಸನ ವಿಧಿಸಿದರು.

ರಘುನಾಥನು ತಮ್ಮ ಸವಿನಯ ಸತ್ಯಾಗ್ರಹದ ತತ್ವಕ್ಕನುಸರಿಸಿ

ದಂಡ ಕೊಡದೆ ಸಂತೋಷದಿಂದ ಸೆರೆಮನೆಯ ಶೀಕ್ಷೆಯನ್ನು ಸ್ವೀಕರಿಸಿದನು.

ದೇಶ ಹಿತದ ಕಾರ್ಯದ ಸಲುವಾಗಿ ಬಡಿದಾಡಿ, ತುರಂಗವಾಸ ಪತ್ಕರಿಸಿದ್ದರಿಂದ ಜನರು ಬಹಳವಾಗಿ ಅವನನ್ನು ಗೌರವಿಸಿದರು. ಕೋರ್ಟನಿಂದ ಪೋಲಿಸರ ಸಂಗಡ ಹೊರಬರುವಾಗ ಮೋರೆ ಕಾಣಿಸದಂತೆ ಅವನ ಕೊರಳೊಳಗೆ ಹೂವಿನ ಸರಗಳು ಬಿದ್ದಿದ್ದವು. ಅದರಂತೆ ಮರುದಿವಸ ಎಲ್ಲ ವೃತ್ತಪತ್ರಿಕೆಗಳಲ್ಲಿಯೂ ಅವನ ಭಾವಚಿತ್ರವು ಶೋಭಾಯಮಾನವಾಗಿ ಪರಿಶೋಭಿಸುತ್ತಿತ್ತು. ಅವನು ಇದುವರೆಗೆ ಮಾಡಿದ ಅಪೂರ್ವ ಸ್ವಾರ್ಥತ್ಯಾಗದಿಂದ, ಎಷ್ಟೋ ಕರ್ನಾಟಕ ಮರಾಠಾ ವೃತ್ತಪತ್ರಕಾರರು ಅವನ ವಿಷಯದ ಮೇಲೆ ಮಹತ್ವದ ಅಗ್ರ ಲೇಖಗಳನ್ನು ಬರೆದರು. ರಘುನಾಥನಿಗೆ ಇಲ್ಲಿಂದಲೇ ದೇಶಭಕ್ತನೆಂಬ ಬಹುಮಾನಾಸ್ಪದ ಬಿರುದು ದೊರೆಯಿತು.

ಆವೇಳೆಯಲ್ಲಿ ದೇಶಭಕ್ತಿಯ ಬಿರುದನ್ನು ಗಳಿಸಲು ಅಷ್ಟೇನು ಮಹತ್ವದ ಕೆಲಸಗಳನ್ನು ಮಾಡಬೇಕಾಗುತ್ತಿದ್ದಿಲ್ಲ. ಕೆಲವು ದಿವಸ ಅಥವಾ ತಿಂಗಳದ ತುರಂಗವಾಸ ಪತ್ಕರಿಸುತಲೆ ಅದರ ಸಂಗಡ ದೇಶಭಕ್ತಿಯ ಬಿರುದು. ಆ, ಅಸಹಕಾರ ಯುಗದಲ್ಲಿ. ಹುರುಳಿಲ್ಲದ ಕೆಲಸಕ್ಕೆ ಬಾರದ ಜನರೂ ಸಹ ತುರಂಗ ಹೊಕ್ಕು ದೇಶಭಕ್ತಿಯ ಹೆಸರನ್ನು ಪಡೆದರು.

ಹಾ ಹಾ ಅನ್ನುವಷ್ಟರಲ್ಲಿ ಒಂದು ತಿಂಗಳು ಕಳೆದು ಹೋಯಿತು. ರಘುನಾಥನು ಸೆರೆಮನೆಯಿಂದ ಬಿಡುಗಡೆ ಹೊಂದಿ ಹೊರಗೆ ಬಂದನು. ಬಿಡುಗಡೆಯ ದಿವಸ ಹೂ ಸರವನ್ನು ಹಾಕುವದಕ್ಕಾಗಿ, ಸಾವಿರಾರು ಜನರು ತುರಂಗದ ತಲೆಬಾಗಿಲಿಗೆ ಹೋಗಬೇಕೆಂದು ನಿರ್ಧರಿಸಿದ್ದರು. ಅದರಂತೆ ವೃತ್ತಪತ್ರಕಾರರು ಸಹ ಕಾರ್ಯಕ್ರಮವನ್ನು ತಮ್ಮ ವೃತ್ತಪತ್ರಿಕೆಗಳಲ್ಲಿ ಪ್ರಸಿದ್ಧಿಸಿದರು. ಜನರು ಉತ್ಕಂಠತೆಯಿಂದ ಆ ದಿವಸದ ಮಾರ್ಗಪ್ರತೀಕ್ಷೆ ಮಾಡುತ್ತಿದ್ದರು. ರಾಜ್ಯದ್ರೋಹದ ಕಾರ್ಯವನ್ನುಕೈಕೊಂಡ, ಅದರಲ್ಲಿ ಸೆರೆಮನೆಯ ಸಹವಾಸವನ್ನು ಅನುಭವಿಸಿದ ಸತ್ಯಾಗ್ರಹಿಯ ಅಪೂರ್ವ ಸ್ವಾಗತವು ಸ್ವಾರ್ಥೀ ಸರಕಾರವು ಹೇಗೆ ತಾನೆ ಸೈರಿಸುವದು.

೫ ನೇ ತಾರೀಖಿನ ದಿವಸ ಅವನ ಬಿಡುಗಡೆ ಯಾಗುತ್ತಿದ್ದು, ೪ ನೇ ತಾರೀಖಿನ ರಾತ್ರಿ ಹತ್ತುಗಂಟೆಯ ಸುಮಾರಕ್ಕೆ ಹೇಳ ಹೆಸರಿಲ್ಲದೆ ಸುಮ್ಮನೆ ಬಿಟ್ಟುಕೊಟ್ಟರು. ಹೀಗಾಗಿ ಅವನ ಮೆರುವಣಿಗೆಯ ಸಮಾರಂಭವು ಹಾಗೆಯೇ ಉಳಿಯಿತು.

ಮುಂದೊಂದು ತಿಂಗಳದಲ್ಲಿ ಒಂದು ಕಡುತರ ಸತ್ಯಾಗ್ರಹದಲ್ಲಿ ಭಾಗ ತೆಗೆದುಕೊಂಡದ್ದಕ್ಕಾಗಿ, ರಘುನಾಥನಿಗೆ ೨ ವರುಷದ ಸಶ್ರಮಶಿಕ್ಷೆಯು ವಿಧಿಸಲ್ಪಟ್ಟಿತು. ಎರಡು ವರುಷದ ಕಠಿಣ ಶಿಕ್ಷೆಯ ಸುನಾವಣಿಯನ್ನು ಕೇಳಿ ವೃತ್ತಪತ್ರಕಾರರು ಅವನ ಉಜ್ವಲ ರಾಷ್ಟ್ರಭಕ್ತಿಯನ್ನು, ಸ್ವಾರ್ಥತ್ಯಾಗವನ್ನು, ಅಪೂರ್ವವಾಗಿ ಕೊಂಡಾಡಿ ವೃತ್ತಪತ್ರಗಳ ಕಂಬಗಳನ್ನು ತುಂಬಿಬಿಟ್ಟರು.

ನಿಃಸ್ವಾರ್ಥದಿಂದ ದೇಶಹಿತದ ಕೆಲಸಮಾಡಿ ತುರಂಗವಾಸಕ್ಕೈಕೊಂಡ ರಘುನಾಥನನ್ನು ಅಭಿನಂದಿಸಿ ದಡಪಶಾಹಿಯ ಧೋರಣವನ್ನು ಕೈಕೊಂಡ ಆಳರಸರನ್ನು ಅತಿಶಯವಾಗಿ ನಿಂದಿಸಿದರು.

✣ ✣ ✣ ✣ ✣ ✣ ✣ ✣

ಭರತ ವರ್ಷದ ಈ ಕಲಿಯುಗದಲ್ಲಿ ಹನುಮಂತ ದೇವರ ಗುಡಿಯಿಲ್ಲದ ಗ್ರಾಮಗಳೇ ಇಲ್ಲ. ಎಲ್ಲ ಗ್ರಾಮಗಳಲ್ಲಿಯೂ ಬಜರಂಗಬಲಿಯಾದ ಹನುಮಂತನ ವಿಗ್ರಹಗಳಿರುವವು. ತ್ರೈತಾಯುಗದಲ್ಲಿ ದುಷ್ಟಶಿಕ್ಷಣ ಶಿಷ್ಟಪರಿಪಾಲನ ಮಾಡಿ ಅನಿಯಂತ್ರಿತ ರಾಜ್ಯವಾಳಿದ ಶ್ರೀ ರಾಮಚಕ್ರವರ್ತಿಗೆ, ದುಷ್ಟ ದುರಾಚಾರಿಯಾದ ರಾಕ್ಷಸ ರಾವಣನು ಕೊಂಡೊಯ್ದ ಜಗನ್ಮಾತೆ ಸೀತೆಯನ್ನು ಯಾರಿಂದಲೂ ಸಾಧ್ಯವಿಲ್ಲದ ಸಮುದ್ರದಾಟಿಹೋಗಿ, ಶೋಧಹಚ್ಚಿ, ಮರುಳಿ ಸಂತೋಷದ ಸುದ್ದಿಯನ್ನು ಬೀರಿದ್ದರಿಂದ, ಅವನು ಮಾಡಿದ ಅತುಲ ಪರಾಕ್ರಮಕ್ಕೂ ಸೇವೆಗೂ ಮೆಚ್ಚಿ ದೇವಾದಿದೇವನಾದ ಶ್ರೀರಾಮನು, ಅಖಂಡ ಆಯುಷ್ಯವನ್ನಿತ್ತು, ಅವನ ಹೆಸರು ಅಜರಾಮರವಾಗಿ ಉಳಿಯುವಂತೆಯೂ, ''ಕಲಿಯುಗದಲ್ಲಿ ಪ್ರತಿಯೊಂದು ಗ್ರಾಮದಲ್ಲಿ ವಾಸವಾಗಿರುವ ಜನರಿಂದ ಪೂಜೆ ತೆಗೆದುಕೊಳ್ಳು'' ಎಂದು ಆಶಿರ್ವಾದ

ಮಾಡಿರುವನು. ಉತ್ತರದಲ್ಲಿ ಹಿಮಾಲಯನು ಕಾಯುವಂತೆ, ದಕ್ಷಿಣ ದಿಕ್ಕಿನ ಸಮುದ್ರದಾಚೆಯ, ದುಷ್ಟರನ್ನು ಧ್ವಂಸಮಾಡುನೆಂದು ತೋರಿಸುವಂತೆ, ತನ್ನ ನಿಡಿದಾದ ಬಲದೋಳನ್ನು ಮೇಲಕ್ಕೆತ್ತಿ, ದಕ್ಷಿಣಾಭಿಮುಖನಾಗಿ ಪ್ರತಿಯೊಂದು ಗ್ರಾಮದಲ್ಲಿ, ನೆಲೆಸಿರುವನು.

ಎಲ್ಲ ಗ್ರಾಮಗಳಲ್ಲಿದ್ದದ್ದೇನೋನಿಜ, ಆದರೆ ಒಂದೊಂದು ಸ್ಥಳದಲ್ಲಿ, ಅವನಿಗೆ ಪಕ್ಷಪಾತ. ಆತನ್ನಪ್ರಿಯಸ್ಥಳದಲ್ಲಿ, ಅವನ ಪ್ರಭಾವವು ಹೆಚ್ಚು.

ಇದರಂತೆ ಅವನಿಗೆ, ಪ್ರಿಯವಾದದ್ದೊಂದು ಸ್ಥಳವು ಕಲಬುರ್ಗಿಯ ಸ್ಟೇಶನದಾಚೆಯಲ್ಲಿದ್ದದ್ದು. ಕೆಲವು ದಿನಗಳವರೆಗೆ ತಪಸ್ಸಿಗೆ ಕುಳಿತಂತೆ ಮೌನವಾಗಿದ್ದನು. ಅವನ ಪ್ರಭಾವವು ಇತ್ತಿತ್ತಲಾಗಿ ಪ್ರತಿಯೊಬ್ಬರ ನಿದರ್ಶನಕ್ಕೂ ಬರಹತ್ತಿತು; ಆದುದರಿಂದ ಅವನಿರುವ ಆ ಸ್ಥಳದ ಮೇಲೆ ಭಾವಿಕಜನರು ಚಂದವಾಗಿರುವ ಮಾಟಾದ ಗುಡಿಯೊಂದನ್ನು ಕಟ್ಟಿ ಸುತ್ತಲೂ ಪ್ರದಕ್ಷಿಣಿಯಸಲುವಾಗಿಯೂ ಜನರುಕುಳಿತುಕೊಳ್ಳುವದಕ್ಕಾಗಿಯೂ ಶಾಬಾದಿಯ ಹಾಸುಬಂಡೆಗಳನ್ನು ಹಾಕಿರುವರು. ಈಗಲೂ ಪ್ರತಿ ಶನಿವಾರ ದರುಶನಕ್ಕೆ ಬಹುಜನರು ಗ್ರಾಮದ ದೂರ ದೂರದಭಾಗದಿಂದ ಬರುವರು.

ಮಾರ್ಗಶೀರ್ಷ ಶು|| ೧೩ ಹನುಮನ ಹುಟ್ಟಿದ ದಿವಸ. ಆದರಲ್ಲಿ ಶನಿವಾರ ಕೇಳುವದೇನು? ಭಾವಿಕ ಭಕ್ತಜನರು, ಕಾಯಿ ಕರ್ಪೂರಗಳನ್ನು ತೆಗೆದುಕೊಂಡು, ಎಲ್ಲ ಕಡೆ ಇಂದಲೂ ತೆರಪಿಲ್ಲದೆ ಬರುತ್ತಿದ್ದರು.

ಆ ಹೊತ್ತಿನ ಜನಸಂದಣಿಯು ಮಿತಿಮೀರಿತ್ತು. ಗುಡಿಯ ಸುತ್ತುಮುತ್ತಲಿನ ವಿಶಾಲವಾದ ಬೈಲು ಜನರಿಂದ ಕಿಕ್ಕಿರಿದಿತ್ತು. ಎಲ್ಲರೂ ಒಮ್ಮೆ ನಿಸಿನಿಂದ ಬರುವರೆಂದು ಮಾತ್ರ ಹೇಳಲು ಬರುವಂತಿದ್ದಿಲ್ಲ. ಕೆಲವರು ದೇವದರ್ಶನದ ಸಲುವಾಗಿ ಬರುತ್ತಿದ್ದರೆ, ಕೆಲವರು ಜನಸಮೂಹವನ್ನು ನೋಡುವದರ ಸಲುವಾಗಿ ನಾನಾಬಗೆಯ ಜನರು, ನಾನಾಪ್ರಕಾರದ ಭಾವನೆಗಳಿಂದ ಬರುತ್ತಿದ್ದರು. ಪಾರಮಾರ್ಥಿಕ ವಿಷಯವನ್ನರಿತ ದಿನಹೋದ ಜನರು ನಿಸರ್ಗದೇವಿಯು ಹಾಸಿದ ಹಾಸುಗೆಯಮೇಲೆ ಅಲ್ಲಲ್ಲಿ ಕುಳಿತು,

ಅವನ ಗುಣಗಾನ ಮಾಡುತ್ತಿದ್ದರು. ತರುಣಿಯರು ತಮ್ಮ ಪ್ರಿಯಕರರೊಂದಿಗೆ ಬೇಕಾದ ಮಾತು ಕತೆಗಳನ್ನಾಡುತ್ತಿದ್ದರು. ಪ್ರೌಢ ತರುಣ ತರುಣಿಯರು, ಇತ್ತಿಂದತ್ತ ಅತ್ತಿಂದಿತ್ತ ಜನಸಮೂಹದ ಸೊಬಗನ್ನು ನೋಡುತ್ತ, ಆಡ್ಡಾಡುತ್ತಿದ್ದರು. ಸಣ್ಣ ಸಣ್ಣ ಮಕ್ಕಳು ನೈಸರ್ಗಿಕ ಗುಣವನ್ನು ವ್ಯಕ್ತಮಾಡಲೋಸುಗ ಮಣ್ಣಿನಮೇಲೆ ಅತ್ತಿತ್ತ ಓಡಾಡುತ್ತಿದ್ದರು ಪೇಡೆ, ಬರ್ಫಿ, ಅವಲಕ್ಕಿ, ಮುಂತಾದ ತಿಂಡಿಯ ಸಾಮಾನುಗಳನ್ನೂ ಕಾಯಿ ಕಪ್ಪುರ ಮೊದಲಾದ ಪೂಜೆಯ ಸಾಮಾನಗಳನ್ನೂ ಮಾರುವ ಜನರಾದರೂ, ಅಲ್ಲಿಂದಿಲ್ಲಿ ಇಲ್ಲಿಂದಲ್ಲಿ ತಿರುಗಾಡುತ್ತಿದ್ದರು.

ಗುಡಿಯೊಳಗೆ ಹೋಗುವ ಕೆಲರು, ಒಳಗಿಂದ ಬರುವ ಕೆಲರು. ಹೀಗಾಗಿ ಎತ್ತನೋಡಿದತ್ತ ಜನಸಮ್ಮರ್ದವು ವಿಶೇಷವಾಗಿರುತ್ತಿತ್ತು.

ಸಹಸ್ರ ರಶ್ಮಿಯಾದ ಭಗವಾನ್ ಸೂರ್ಯನಾರಾಯಣನು ಪಶ್ಚಿಮಾಂಗನೆಯ ಗೃಹಕ್ಕೆ ತೆರಳಹತ್ತಿದ್ದನು. ಪತಿಯ ಆಗಮನದಿಂದ ಆನಂದಿತಳಾದ ಪಶ್ಚಿಮೆಯ ಗಲ್ಲದ ಮೇಲೆ, ಆನಂದದ ಆ ರಕ್ತವರ್ಣವು ವಿಲಸಿತವಾಗುತ್ತಿತ್ತು. ದಿನಾಲು ಉತ್ಕಂಠನಾಗಿ ಧೃತಗತಿಯಿಂದ ಹೋಗುವ ಸವಿತ್ರನು, ಆ ಹೊತ್ತು ಮಂದಗತಿಯಿಂದ ನಡೆದಿದ್ದನು. ಅವನ ಆ ಮಂದಗತಿಯನ್ನ ನೋಡಿ ಜನರು ಆಶ್ಚರ್ಯಚಕಿತರಾಗಬಹುದು; ಆದರೆ ಆಶ್ಚರ್ಯ ಹೊಂದಲವಶ್ಯಕತೆ ಇಲ್ಲ. ಯಾಕಂದರೆ ಆ ಹೊತ್ತಿನ ವಿಷಯವು ದಿನದಂತಿರದೆ ಬೇರೆತರದ್ದಾಗಿತ್ತು. ಪೃಥ್ವಿತಲದ ಮೇಲೆ ಕಾಣಿಸುವ ಸುಂದರ ಮತ್ತು ಸುಮನೋಹರವಾದ ನೋಟವನ್ನು ನೋಡಬೇಕೆಂಬ ಮೋಹವು ಅವನನ್ನಾವರಿಸಿತ್ತು. ಆದುದರಿಂದಲೇ ಮೆಲ್ಲಗೆ ನಡೆದಿದ್ದನು.

ಗುಡಿಯ ಒಳಹೊರಗಿನ ಸುತ್ತಮುತ್ತಲಿನ ಜನಸಂದಣಿಯ ಮನೋಹರವಾದ ನೋಟವನ್ನು ಮೃತ್ಯುಲೋಕದ ಸ್ತ್ರೀ ಪುರುಷರ ಆ ವಿಚಿತ್ರ ಗದ್ದಲವನ್ನು ನೋಡುತ್ತಿದ್ದ ಅವನಿಗೆ ನೋಡದವನಂತೆ ತ್ವರೆಯಿಂದ ಹೋಗುವದು ಹೇಗಾಗಬೇಕು.

ಆ ವೇಳೆಯಲ್ಲಿ ಗುಡಿಯ ಸುತ್ತಮುತ್ತಲಿನ ಬೈಲಿನಲ್ಲಿ ಸೂಕ್ಷ್ಮ ದೃಷ್ಟಿಯಿಂದ ನೋಡುವವರಿಗೆ ಇನ್ನೊಂದು ವಿಷಯವು ಗೋಚರವಾಗದೆ ಇರುತ್ತಿದ್ದಿಲ್ಲ.

ಆವಿಷಯವೆಂದರೆ, ಹಿಂದೂ ಜನಾಂಗದಲ್ಲಿಯ ಪರಸ್ಪರ ವೈಮನಸ್ಸಿನ ಏಕೀಕರಣವು. ಅದು ಸಹ ಒಡೆದು ಕಾಣಬರುತ್ತಿತ್ತು.

ಹನುಮನ ಜನ್ಮದಿನದ ಇಂಥ ಸುಮಂಗಲ ಸಂಧಿಯನ್ನು ಯಾರು ತಾನೇ ಕಳೆದುಕೊಳ್ಳುವರು ! ಮನೆಯೊಳಗಿನ ಕೆಲಸ ಬೊಗಸೆಗಳನ್ನು ಬದಿಗಿಟ್ಟು, ಭಕ್ತಿಭಾವದಿಂದ, ಎಲ್ಲ ಹಿಂದೂ ಜನರು ದರುಶನದ ಸಲುವಾಗಿ, ಸಾಲುಗಟ್ಟಿ ಬರುತ್ತಿದ್ದರು.

ಆದರೆ ಅದೆ ಮಂಗಲದಿವಸ ಅದೇವೇಳೆಯಲ್ಲಿ, ಸುವಿಚಾರ ಸಂಪನ್ನರಾದ ಸುಶಿಕ್ಷಿತ ತರುಣ ತರುಣಿಯರು ಯಾರು ಪಾಶ್ಚಾತ್ಯ ಸಂಸ್ಕೃತಿಯ ಪೊಳ್ಳು ಮಬ್ಬಿಗೆ ಮನಸೋತಿರುವರೋ, ಯಾರು ಆರ್ಯ ಸಂಸ್ಕೃತಿಯನ್ನು ಅಂಗಾಲಿನಿಂದೊದ್ದು ಆಂಗ್ಲ ಸಂಸ್ಕೃತಿಯನ್ನು ಎದೆಗವಚಿಕೊಂಡು ಸುಶಿಕ್ಷಿತ ಸುವಿಚಾರ ಸಂಪನ್ನರೆಂದು ಮೆರೆದಾಡುವರೋ, ದೇವದರಶನವನ್ನು ತೆಗೆದುಕೊಳ್ಳಲು ಬರುವ ಜನರನ್ನು ನೋಡಿ, ಅಂಧ ಶ್ರದ್ಧೆಯ ಜನರೆಂದು ಹಾಸ್ಯ ಮಾಡುತ್ತಿದ್ದರು. ದರ್ಶನಾಪೇಕ್ಷೆ ಜನರನ್ನು ನೋಡಿ ಹಾಸ್ಯಮಾಡುತ್ತ, ಬೂಟುಗಾಲಿನಿಂದ ನೆಲವಪ್ಪಳಿಸುತ್ತ ಗಾಳಿಯಸವಾರಿಗಾಗಿ ಅಡ್ಡಾಡುವ ಎಷ್ಟೋ ಮೂರ್ಖ ಗೊರವಂಕಗಳಿಗೆ, ( ಗೊರವಂಕಗಳ ಧ್ವನಿಯಮೇಲಿಗೆ ಹೆಜ್ಜೆಹಾಕುವ ಮೂರ್ಖ ಗಿಳಿಗಳಿಗೆ ) ಸಂಧ್ಯಾ ಕಾಲದಂಥ ಸುಸಮಯವನ್ನು, ಗಾಳಿ ತಿನ್ನುವದಕ್ಕುಪಯೋಗಿಸದೆ, ಕೆಲಸ ಬೊಗಸೆಗಳನ್ನು ತೊರೆದು ದೇವ ದರ್ಶನಕ್ಕೆ ಬರುವವರುಮೂರ್ಖರೆಂಬಂತೆ ಕಾಣುತ್ತಿದ್ದರು.

ಜನರಲ್ಲಿದ್ದ ಅಂಧಶ್ರದ್ಧೆಯ ಅಜ್ಞಾನಕ್ಕಾಗಿ, ಅವರು ಮರಮರನೆ ಮರಗುತ್ತಿದ್ದರು. ಒಟ್ಟನಮೇಲೆ ಹಿಂದೂ ಸಮಾಜದ ಮೂರ್ತಿ ಪೂಜೆಯ ಮೂರ್ಖತನದಿಂದ ಈ ಸುಧಾರಕರ ಅಂತಃಕರುಣಕ್ಕೆ ದಕ್ಕೆ ತಗುಲುತ್ತಿತ್ತು.

ತಮ್ಮ ಪ್ರಚಂಡ ಹಿಂದೂ ಜನಾಂಗವು ಅಜ್ಞಾನದ ಕತ್ತಲೆಯೊಳಗಿಂದ ಪಾರಾಗಿ, ಪಾಶ್ಚಾತ್ಯ ಜನಾಂಗದ ತೇಜೋಮಯವಾದ ಸಂಸ್ಕೃತಿಯಲ್ಲಿ ಎಂದು ಬರುವದೆಂದು ಹಗಲಿರಳು ಚಿಂತಿಸುತ್ತಿದ್ದರು.

ವೃತ್ಯಲೋಕದ ಸೊಬಗನ್ನವಲೋಕಿಸುತ್ತ ಮೆಲ್ಲಗೆ ತನ್ನಪ್ರಿಯತಮೆಯಾದ ಪಶ್ಚಿಮಾಂಗನೆಯ ಕಡೆಗೆ ಮುಂದಡೆ ಇಡುತ್ತಿದ್ದ ದಿನಕರನು, ಅವಳ ಅರಮನೆಯ ಮೆಟ್ಟಿಲಗಳನ್ನು ಒಂದೊಂದನ್ನಾಗಿ ಏರಿ ಕಡೆಗೆ ಅವಳ ಬಾಹು ಪಾಶದಲ್ಲಿ ಶಿಲುಕಿ ಯಾರಿಗೂ ಕಾಣದಂತಾದನು.

ಸೂರ್ಯನು ಅಸ್ತಾಚಲಕ್ಕೆ ತೆರಳಿದನು. ದರುಶನದ ಸಲುವಾಗಿ ಬರುವ ಜನರ ಸಂಖ್ಯೆಯೂ ತೀರ ಕಡಿಮೆಯಾಯಿತು. ಬಂದಿದ್ದ ಜನರು ಒಬ್ಬರೂ ಉಳಿಯದಂತೆ ಗುಂಪು ಗುಂಪಾಗಿ, ಕೆಲವರು ನಡೆಯುತ್ತ, ಕೆಲವರು ಟಾಂಗಾ ಮುಂತಾದ ವಾಹನಗಳಲ್ಲಿ ಕುಳಿತು, ಹೋಗಹತ್ತಿದರು. ಜನ ಸಂಖ್ಯೆಯು ಕಡಿಮೆಯಾದಂತೆ, ಜನರ ಗದ್ದಲವೂ ಕೇಳ ಬರದಂತಾಯಿತು.

ಇಷ್ಟರಲ್ಲಿ ೩೫, ೪೦ ವರುಷದ, ನಡುಹರೆಯದ ವಿಧವೆಯೋರ್ವಳು, ೧೭, ೧೮ ವರುಷದ ಹೊಸಹರೆಯದ ತರುಣಿಯೋರ್ವಳನ್ನೊಡಗೊಂಡು, ಕೈಯಲ್ಲಿ ಕಾಯಿ ಕಪ್ಪುರಗಳನ್ನು ಹಿಡಿದುಕೊಂಡು, ಉಗುಬಗೆಯಿಂದಲ್ಲಿಗೆ ಬಂದಳು. ತಂದ ಸಾಮಾನುಗಳನ್ನು ದೇವರಮುಂದಿಟ್ಟು ಇಬ್ಬರೂ ಪ್ರದಕ್ಷಿಣೆ ಹಾಕಹತ್ತಿದರು.

ಇಷ್ಟಾಗುವದರೊಳಗೆ, ಪಡುವಣದಿಕ್ಕಿನ ಸಂಜೆಯ ನಸುಗೆಂಪು ಪೂರ್ಣಹರಿದು, ಚಂದ್ರನ ಸ್ವಚ್ಛಂದ ಪ್ರಕಾಶವು ಎಲ್ಲಕಡೆಗೂ ಪಸರಿಸುತ್ತ ನಡೆದಿತ್ತು. ಗುಡಿಯಲ್ಲಿ, ದಿನಹೋದ ಅರ್ಚಕನು, ಅಸ್ಫುಟ ಸ್ವರದಿಂದ ಮಂತ್ರಗಳನ್ನು ಗುಣಗುಟ್ಟುತ್ತಿರುವದು ಮಾತ್ರ ಕೇಳಬರುತ್ತಿತ್ತು. ಸಮೀಪದಲ್ಲಿ ಸುತುಮುತ್ತು ಯಾರೂ ಕಾಣಬರುತ್ತಿದ್ದಿಲ್ಲ.

ಪ್ರದಕ್ಷಿಣೆಯ ಕೆಲಸವು ಮುಗಿಯಿತು. ದೇವರೆದುರಿಗೆ ಬಂದರು. ಕಾಯಿ ಒಡೆಸಿ, ಪೇಡೆಯ ನೈವಿದ್ಯವನ್ನು ತೋರಿಸಿ, ಮಂಗಳಾರುತಿ

ಬೆಳಗಿಸಿದರು. ಪೂಜ್ಯಾರಿಯು ಸೌಭಾಗ್ಯವತಿ ತರುಣಿಗೆ ಫಲಮಂತ್ರಾಕ್ಷತೆಯನ್ನೂ, ವಿಧವೆಗೆ ಪೇಡೆಯ ಪ್ರಸಾದವನ್ನೂ ಕೊಟ್ಟನು. ಪ್ರಸಾದ ತೆಗೆದುಕೊಂಡು ಇಬ್ಬರೂ, ಗುಡಿಯ ಹಿಂದಿನ ಭಾಗದಲ್ಲಿ ಬಂದು ಕುಳಿತುಕೊಂಡರು.

**ತರುಣಿ:—** ಅಕ್ಕಾ ! ನಡೆಯಿರಿ. ಹೊತ್ತಾಗುತ್ತದೆ. ನಾವು ಅರ್ಧ ಮುಕ್ಕಾಲುಗಂಟೆ ಮೊದಲೇ ಬಂದಿದ್ದರೆ ಚೆನ್ನಾಗುತ್ತಿತ್ತು. ಬಹ್ಮಪುರವು ಇಲ್ಲಿರುವದೇ? ಎರಡು ಮೈಲಿನಮೇಲಿರುವದು. ಸ್ಟೇಶನ ದಾಟಿತೆಂದರೆ ನೂತನವಿದ್ಯಾಲಯದ ವರೆಗೆ, ಒಂದೂ ಮನೆಗಳಿಲ್ಲ ದಾರಿಯು ನಿರ್ಜನ ಪ್ರದೇಶದಂತಿರುವದು. ಅಲ್ಲಲ್ಲಿ ಅಂಜಿಕೆಯ ಸ್ಥಳಗಳಿರುವವೆಂದು ಕೇಳಿದ್ದೇನೆ. ಅಲ್ಲೊಂದು ಇಲ್ಲೊಂದು ಮನೆಗಳಿದ್ದರೆ, ಅವೂ ಯವನರ ವಿರುವವು. ಮುಚ್ಚಂಜಿ ಯಾಗುತಲೇ ವರು ಒಳಮನೆಬಿಟ್ಟು ಹೊರಗೆ ಬರುವದಿಲ್ಲ. ಇದು ಗಾಡಿಯು ಬರುಹೋಗುವ ಸಮಯವೂ ಅಲ್ಲ. ಜನದೊಡಾಟವೂ ಇರಲಾರದು. ಬಹ್ಮಪುರಕ್ಕೆ ಹೋಗುವವರು ನಾವಿಬ್ಬರೇ, ಹೆಣ್ಣುಮಕ್ಕಳು. ಇದು ಯವನರ ರಾಜ್ಯ. ಎಂದೂ ಮನೆಬಿಟ್ಟು ಹೊರಡದ ನಾನು, ಈ ಹೊತ್ತೇ ನಿಮ್ಮ ಆಗ್ರಹದ ಸಲುವಾಗಿ ಹೊರಟೆನು

ಒಂಬತ್ತು ಗಂಟೆಯ ವರೆಗೆ ಜನರಿರುವರೆಂದು ಹೇಳಿದಿರಿ. ಹೊತ್ತು ಮುಳುಗುವ ಮುಂದೆ ಮನೆಬಿಟ್ಟು ಹೊರಟೆರಿ. ಅಷ್ಟು ಹೊತ್ತಿನವರೆಗೆ, ಮನೆಯಲ್ಲಿಯ ಕೆಲಸ ಬೊಗಸೆಗಳನ್ನು ಬಿಟ್ಟು ಇಲ್ಲೇಕಿರುವರು. ಸಮೀಪದ ದಾರಿಯೇ? ನಮ್ಮ ಮನೆಯಿಂದಂತೂ, ಒಂದು ಹರದಾರಿಯ ಮೇಲಿರುವದು. ಇಂತಹ ದೂರದ ಗುಡಿಗಳಿಗೆ, ಹೊತ್ತಿರುವಾಗಲೇ ಬಂದು ಹೋಗಬೇಕು. ಬರೇ ಹೆಣ್ಣುಮಕ್ಕಳು ಹೋಗಿಬರುವ ಗುಡಿಯು ಇದಲ್ಲ.

**ವಿಧವೆ:—** ದೇವರಿಗೆ ಬಂದವರು, ದೇವದರುಶನ ತೆಗೆದುಕೊಂಡು, ಕುಳಿತುಕೊಳ್ಳದೆ ಹಾಗೆಯೇ ಹೋಗಬಾರದು. ಎಂದೂ ಬಾರದ ನೀನು ಈ ಹೊತ್ತು ಬಂದಿರುವಿ, ಕುಳಿತುಕೋ ತುಸು. ಇಷ್ಟೇಕವಸರ. ಹೋಗೋಣವಂತೆ. ತಿನ್ನು ಈ ಪೇಡೆಯ ಪ್ರಸಾದವನ್ನು.

**ತರುಣಿ:—**(ಪೇಡೆಯನ್ನು ಬಾಯಿಯಲ್ಲಿ ಹಾಕಿಕೊಂಡು.) ಅಕ್ಕಾ!

ಸುತ್ತುಮುತ್ತು ನೋಡಿರಿ. ಒಬ್ಬರೂ ಕಾಣಬರುವದಿಲ್ಲ. ನಾವಿಬ್ಬರೇ ಹೆಣ್ಣುಮಕ್ಕಳು. ಮತ್ತೊಬ್ಬರೂ ಇಲ್ಲ. ಹೊತ್ತಾಯಿತು, ತೀವ್ರನಡೆಯಿರಿ.

**ವಿಧವೆ:**— ದೇವ ದರುಶನಕ್ಕೆ ಬಂದಿರುವಿ. ಮತ್ತೊಮ್ಮೆ ಚನ್ನಾಗಿ ಕೈಮುಗಿದು ಗಂಡನ ಬಿಡುಗಡೆಯ ಬಗ್ಗೆ ಬೇಡಿಕೊಳ್ಳು. ಇಂಥ ಸುಸಂಧಿಯು ಎಂದು ದೊರೆಯಬೇಕು?

**ತರುಣಿ:** —ಇಷ್ಟು ಕೈಮುಗಿದ ಮಾತ್ರಕ್ಕೆ ಆಯಿತೇನು? ನಾನು ಹಗಲಿರಳು ಮನದಲ್ಲಿ ಪ್ರಾರ್ಥಿಸುತ್ತೇನೆ. ಅವರ ಬಿಡುಗಡೆಯಬಗ್ಗೆ ಯಾವಗಲೂ ಯಾಚಿಸುತ್ತಿರುವೆನು. ಹರಟೆ ಹೊಡೆಯುತ್ತ ಕುಳಿತುಕೊಳ್ಳಲು ಇದು ಮನೆಯಲ್ಲ. ನನಗಂತೂ ಅಂಜಿಕೆ ಬಂದಂತಾಗುತ್ತದೆ.

**ವಿಧವೆ:**— ಛೀ ! ಹುಚ್ಚೀ !! ದೇವರಗುಡಿ. ಇಲ್ಲಿ ಅಂಜಿಕೆ ಯಾತಕ್ಕೆ? ನಮ್ಮನ್ನೂ ಎನೂ ತಿನ್ನುವದಿಲ್ಲ

**ತರುಣಿ:**—ಇಲ್ಲೇ ಸಮೀಪದಲ್ಲಿರುವದೆಂದು ಹೇಳಿದ್ದರಿಂದಬಂದೆನು. ನನ್ನಿಂದ ಇಲ್ಲಿ ಬಹಳಹೊತ್ತು ಕುಳಿತುಕೊಳ್ಳುವದಾಗುವದಿಲ್ಲ. ಜನರಿಲ್ಲದ ಸ್ಥಳದಲ್ಲಿ ಇಬ್ಬರೇ ಇಬ್ಬರು ಹೆಣ್ಣುಮಕ್ಕಳು. ನಿಮ್ಮ ಈ ಕೃತಿ ನೋಡಿ ನನಗೆ ಕೌತುಕವಾಗುತ್ತದೆ.

**ವಿಧವೆ:**— ಬಂದುದಕ್ಕೆ ತಪ್ಪೇನಾಯಿತು? ದೇವರ ದರುಶನ ವಾಯಿತು

**ತರುಣಿ:**— ಹೀಗೇಕೆ ನುಡಿಯುವಿರಿ. ತಪ್ಪಾಯಿತೆಂದು ನಾನೆಲ್ಲಿ ಹೇಳುವೆನು. ದೇವರ ದರುಶನವಾಯಿತು. ಪ್ರಸಾದ ತೆಗೆದುಕೊಂಡೆವು. ಬಂದಕೆಲಸವಾಯಿತು. ಅಕ್ಕಾ! ಏಕೋ ನಾಲಿಗೆಯು ಒಣಗಹತ್ತಿತು. ಮಾತಾಡಬೇಕೆನ್ನುತಲೆ ನಾಲಿಗೆಯು ಒಳ ಸೆಳೆದಂತಾಗುತ್ತದೆ. ನನ್ನಿಂದ ಕುಳಿತುಕೊಳ್ಳುವದಾಗುವದಿಲ್ಲ. ನಾನಂತೂ ಹೊರಟೆನು. ಇದೇನು? ಕಣ್ಣಿಗೆ ಕತ್ತಲು ಕವಿದಂತಾಗುತ್ತದೆ ಎಂದು ಕೆಳಗೆ ಕುಳಿತುಕೊಂಡಳು.

**ವಿಧವೆ:**—ಈಗಿನ ಹೆಣ್ಣು ಹುಡುಗರ ಸ್ವಭಾವವೇ ಬೇರೆ. ಪ್ರತಿಯೊಂದಕ್ಕೆ ಉತಾವಳಿತನ.

ಈ ವೇಳೆಯಲ್ಲಿ ಅಲ್ಲಿ ಯಾರೂ ಇರಲಿಲ್ಲ. ಇಷ್ಟಾಗುವದರೊಳಗೆ ಸುಮಾರು ೭||, ೮ ಗಂಟೆ ರಾತ್ರಿಯಾಗಿರಬಹುದು. ವೃದ್ಧ ಅರ್ಚಕನು ಭಕ್ತ ಜನರಿಂದರ್ಪಿಸಿದ, ಹಣ್ಣು ಹಂಪಲಗಳನ್ನು ತಿಂದು ಗರ್ಭಾಗಾರದ ಬಾಗಿಲ ಮುಚ್ಚಿಕೊಂಡು ಮಲಗಿದ್ದನು. ದೂರದಲ್ಲಿ ಮಾತ್ರ ಒಂದು ಫೈಟನ್ ಗಾಡಿಯು, ಬಿಳಿಯ ಬಟ್ಟೆಗಳನ್ನುಟ್ಟ, ಎರಡು ಮನುಷ್ಯಾಕೃತಿಗಳು ಮಸುಕು ಮಸಕಾಗಿ ಕಾಣುತ್ತಿದ್ದವು.

ವಿಧವೆಯು ಮೇಲಕ್ಕೆದ್ದಳು. ತರುಣಿಗೂ ಏಳಲು ಹೇಳಿದಳು. ಆವಳು ಮೇಲಕ್ಕೇಳುತಲೆ ಫಿಟ್ ಬಂದಂತಾಗಿ ಎಚ್ಚರದಪ್ಪಿ ಒಮ್ಮಿಂದೊಮ್ಮೆ ಕೆಳಗೆ ಬೀಳುವಳು, ಅದರೆ ಸಮಯವರಿತು ವಿಧವೆಯು ಅವಳನ್ನು ಹಿಡಿದು ಕೆಳಗೆ ಮಲಗಿಸಿದಳು.

ವಿಧವೆಯು ಗಾಬರಿ ಗೊಂಡಿದ್ದೇನು ನಿಜ; ಆದರೆ ಅದು ತುಸು ಹೊತ್ತಿನ ಸಲುವಾಗಿ. ಮತ್ತಿತರ ಸ್ತ್ರೀಯರಂತವಳು ಧೈರ್ಯಹೀನಳಿದ್ದಿಲ್ಲ. ಪ್ರಸಂಗಾವಧಾನವರಿತ ಧೈರ್ಯಶಾಲಿ ವಿಧವೆ ಇದ್ದಳು.

ತರುಣಿಯು ಬೇಶುದ್ಧ ಸ್ಥಿತಿಯಲ್ಲಿ ಬೀಳುತಲೆ, ಅವಳು ಕೈಕಾಲು ಬಿಟ್ಟು ಸುಮ್ಮನೆ ಕುಳಿತುಕೊಳ್ಳಲಿಲ್ಲ. ಕೂಡಲೆ ದೂರದಲ್ಲಿ ಕಾಣಬರುವ ಫೈಟನ್ ಗಾಡಿಯ ಬಳಿಯಲ್ಲಿ ಹೋಗಿ ಆವರೀರ್ವ ಗಂಡಸರನ್ನು ಸಹಾಯಕ್ಕೆ ಕರೆದಳು. ಅವರಾದರೂ ಒಳ್ಳೇ ಪರೋಪಕಾರಿಗಳಿದ್ದಂತೆ ಕಾಣಬಂದಿತು. ವಿಧವೆಯ ಕೇಳಿಕೆಗೆ ಒಪ್ಪಿ ಕೂಡಲೆ ಅವಳ ಹಿಂದೆ ಬಂದರು. ಗಾಡಿಯು ಸಿದ್ಧವಾಗಿಯೇ ನಿಂತಿತ್ತು. ಮೂವರೂ ಕೂಡಿ ಅವಳನ್ನು ಎತ್ತಿ ಗಾಡಿಯಲ್ಲಿ ಮಲಗಿಸಿದರು. ತಾವೂ ಮೂವರು ಒಳಗೆ ಕುಳಿತರು. ಗಾಡಿಯು ಹೊರಟಿತು. ಯಾವಕಡೆಗೆ ? ದವಾಖಾನೆಯ ಕಡೆಯೋ ! ತರುಣಿಯ ಮನೆಯ ಕಡೆಯೋ ! ಮತ್ಯಾವಕಡೆಗೆ ?

✤ ✤ ✤ ✤ ✤ ✤ ✤ ✤

ಗಾಡಿಯು ಹೋದದ್ದೇನೋ ನಿಜ; ಆದರೆ ಅದು ಯಾವಕಡೆಗೆ? ಆ ತರುಣಿಗೆ ಒಮ್ಮಿಂದೊಮ್ಮೆ ಫಿಟ್ ಬರಲು ಕಾರಣವೇನು? ಈ ಮೊದಲು ಎಂದಾದರೂ ಬರುತ್ತಿತ್ತೋ ಅಥವಾ ಇದೇ ಮೊದಲೋ? ಫಿಟ್ ಬಂದರೂ ಕೂಡ ಇಷ್ಟು ಅಲ್ಪಾವಧಿಯಲ್ಲಿ ಎಚ್ಚರವಿಲ್ಲದಂತಾಯಿತೆಂದರೆ ಕೌತುಕವೇಸರಿ.

ತರುಣಿಯು ಎಚ್ಚರತಪ್ಪಿ ಬೀಳುತಲೆ, ಗಾಡಿಯು ಅದೇ ವೇಳೆಯಲ್ಲಿ ಸಿಕ್ಕಿದ್ದೆಂದರೆ ಆ ಬಡಪ್ರಾಣಿಯ ಸುದೈವವೆಂದೇ ತಿಳಿಯಬೇಕು. ಅದೇ ವೇಳೆಯಲ್ಲಿ ಗಾಡಿಯನ್ನು ಅಲ್ಲಿಗೆ ತರಲು, ತಂದವರ ಗುಟ್ಟೇನಿರಬಹುದು? ನಿಶ್ಚೇಷ್ಟಳಾದ ತರುಣಿಯನ್ನು ವಿಧವೆಯು ಗಾಡಿಯಲ್ಲಿ ಹಾಕಿಕೊಂಡು ಹೋಗುವಾಗ, ಗಾಡಿಯ ಸಂಗಡಿದ್ದ ಇಬ್ಬರು ಪುರುಷರು, ಅವಳೊಡನೆ ಹೋಗುವದು ಅವಶ್ಯವಿತ್ತೋ ಹೇಗೆ? ಒಳ್ಳೇದು. ಗಾಡಿಯು ಹೊದದ್ದಾರೂ ಯಾವಕಡೆಗೆ? ತರುಣಿಯ ಮನೆಯ ಕಡೆಗೋ ದವಾಖಾನೆಯ ಕಡೆಗೋ ? ವಿಧವೆಯ ಮನೆಯಕಡೆಗೋ ಅಥವಾ ಆ ಈರ್ವ ಸದ್ಗೃಹಸ್ಥರ ಮನೆಯಕಡೆಗೋ? ಮೂರ್ಛೆಹೊಂದಿದ ತರುಣಿಯನ್ನು, ನಿಜವಾಗಿ ಮೋರೆಗೂ ತಲೆಗೂ ತಣ್ಣೀರು ತಟ್ಟಿ, ಎಚ್ಚರದಲ್ಲಿ ತರುವದು, ಹದವನ್ನರಿತ ಆ ಸದ್ಗೃಹಸ್ಥರ ಮೊದಲನೆಯ ಕೆಲಸ; ಆದರೆ ಹಾಗೆ ಮಾಡದೆ, ಕೂಡಲೆ ಅವಳನ್ನು ಎತ್ತಿಗಾಡಿಯಲ್ಲಿ ಹಾಕಿಕೊಂಡು ಹೋದುದರ ಅರ್ಥವೇನು?

ಈ ಎಲ್ಲ ವಿಷಯಗಳನ್ನು ವಿಚಾರಮಾಡಿ ನೋಡಿದರೆ, ಕಠಿಣ ಪ್ರಶ್ನೆಯೊಂದು ಉಪಸ್ಥಿತವಾಗುತ್ತದೆ. ಜರುಗಿದ ಈ ಎಲ್ಲ ವಿಷಯವು ನೈಸರ್ಗಿಕದಿಂದಾಗದೆ, ಕಪಟಕಾರಸ್ತಾನಿ ವ್ಯಕ್ತಿಗಳು ತಮ್ಮ ವಿಶಿಷ್ಟ ಹೇತುವನ್ನು ಪೂರ್ತಿಗೊಳಿಸಲೋಸುಗ ಈ ಎಲ್ಲಕೆಲಸ ಹೂಡಿರಬಹುದೆಂದು ಮತ್ತೊಂದು ಹೊಸ ಪ್ರಶ್ನೆಯು ಉದ್ಭವಿಸುತ್ತದೆ.

ಸುಮ್ಮನೆ ತರ್ಕ ವಿತರ್ಕ ಮಾಡುತ್ತ ಕುಳಿತುಕೊಳ್ಳದೆ, ಪ್ರಿಯವಾಚಕರೇ! ನಾವು ಕುದುರೆಯ ಗಾಡಿಯನ್ನು ಹಿಂಬಾಲಿಸಿ, ಅದು ಯಾವಕಡೆಗೆ ಹೋಗುತ್ತದೆ. ಮುಂದೆ ಅಲ್ಲೇನಾಗುತ್ತದೆಂಬದನ್ನು ಪ್ರತ್ಯಕ್ಷ ನೋಡೋಣ. ಅಂದರೆ ಯಾವ ಅನುಮಾನವೂ ಉಳಿಯುವದಿಲ್ಲ.

ಅಕೋ! ನೋಡಿರಿ!! ಕುದುರೆಯು ಖುರದಿಂದ ಗಟ್ಟಿಯಾಗಿ ನೆಲವನ್ನಪ್ಪಳಿಸುತ್ತ, ವಾಯುವೇಗದಿಂದ ಗಾಡಿಯನ್ನು ತೆಗೆದುಕೊಂಡು ಹೋಗಹತ್ತಿದೆ. ಗಾಡಿಯು ಸ್ಟೇಶನದಾಟಿತು ಇದೇನು? ನಡುವಿನ ದೊಡ್ಡ ದಾರಿಯಿಂದ ಹೋಗದೆ, ಹಿಂದಿನ ಸಣ್ಣದಾರಿಯನ್ನೇಕೆ ಹಿಡಿಯಿತು? ಅತ್ತ ನೋಡಿರಿ ಬ್ರಹ್ಮಪುರದ ದಾರಿಯನ್ನು ಬಿಟ್ಟಿತು ಮಕ್ತುಮಪುರದ ದಾರಿಯನ್ನೂ ಬಿಟ್ಟಿತು. ಜನರಡ್ಡಾಡದಿರುವ ರಿಝರ್ವ ಪೋಲಿಸ ಠಾವಣಿಯ ಕಡೆಗೆ ಹೋಗುವ, ಕೆರೆಯಾಚೆಯ ದಾರಿಯನ್ನು ಹಿಡಿಯಿತು. ನೋಡಿರಿ! ಗಾಜೀಪುರದ ದಾರಿಯನ್ನು ಹಿಡಿಯಿತು. ಚಕ್ರಗಟ್ಟಿಯ ಪೋಲಿಸ ಠಾಣೆಯ ಹತ್ತರ ಬಂದಿತು. ಯಾವಾಗಲೂ ತೆರೆದಿರುವ ಗಾಡಿಯ ಪರದೆಗಳು ಈ ಹೊತ್ತು [illegible] ಮುಚ್ಚಿರುವವು. ಇಕೋ! ಗಾಡಿಯು ಮೊದಲಿಗಿಂತಲೂ ಒತ್ತರದಿಂದ ಸಾಗಹತ್ತಿತು.

ಗಾಡಿಯಲ್ಲಿ ಯಾವ ಬಗೆಯ ಗದ್ದಲವು? ಇನ್ನು ಗಾಡಿಯೊಳಗೆ ಇಣಿಕಿ ಹಾಕೋಣ. ನೋಡಿರಿ! ಮಲಗಿದ ತರುಣಿಯು ತುಸು ಕೈಕಾಲು ಅಲ್ಲಾಡಿಸಹತ್ತಿದಳು. ಅವಳು, ಇನ್ನು ಅಲ್ಪಾವಧಿಯಲ್ಲಿಯೇ ಎಚ್ಚರ ಹೊಂದಬಹುದು. ಅದುನೋಡಿರಿ! ಅವಳು ಕಣ್ಣು ಪಿಳುಕಿಸಹತ್ತಿರುವದು ಗಾಡಿಯ ದೀವಿಗೆಗಳ ಮಂದಪ್ರಕಾಶದಲ್ಲಿ ಕಾಣಬರಹತ್ತಿತು.

ಇಲ್ಲ! ಇದೆಲ್ಲ ಇರಲಿ. ಬ್ರಹ್ಮಪುರ ಬಿಟ್ಟು ಗಾಡಿಯು ಹಫ್ತಗುಂಬದಗಳ ಕಡೆಗೇಕೆ ಹೊರಟಿತು. ತರುಣಿಯ ಮನೆಯೊಂದಲ್ಲಿರುವದೇನು? ವಿಧವೆಯ ಮನೆ ಇರುವದೋ, ಅಥವಾ ಆ ಸದ್ಗೃಹಸ್ಥರ ಮನೆಯು ಇರುವದೋ ಅಲ್ಲಿ? ಮುಸಲ್ಮಾನ ಮತ್ತಿತರ ಹಿಂದೂ ಪಂಗಡದವರಿಂದ ತುಂಬಿದ ಆ ಓಣಿಯಲ್ಲಿ ಇವರ ಮನೆ ಇರುವದೇ? ಹೆಣ್ಣುಮಕ್ಕಳ ಆಸ್ಪತ್ರಿಗೆ ತೆಗೆದುಕೊಂಡು ಹೋಗುವದು ಅವರ ವಿಚಾರವಿರಬಹುದು; ಆದರೆ ಮಕ್ತುಮಪುರ ಬಿಟ್ಟು ಇತ್ತಕಡೆಗೇಕೆ ಬಂದರು? ಜನರರಿಯದ ಸ್ಥಳದಲ್ಲೊಂದೇನಾದರೂ, ಆಸ್ಪತ್ರಿ ಇರುವದೋ?

ತರುಣಿಯು ಕಣ್ದೆರೆದಳು. ಬಾಯಿ ತೆರೆಯಹತ್ತಿದಳು. ಕೂಡಲೆ ಹತ್ತರ ಕುಳಿತಿದ್ದ ವಿಧವೆಯು ಸೇಡೆಯ ತುಣಕನ್ನೊಂದು ಬಾಯಿಯಲ್ಲಿ

ಹಾಕಿದಳು. ಎಲ! ಇದೇನು? ತರುಣಿಯು ತೆರೆದ ಕಣ್ಣನ್ನು ಪುನಃ ಮುಚ್ಚಹತ್ತಿದಳು. ತರುಣಿಯು ಯಾರಿರಬಹುದು? ತಿಳಿಯದಾಗಿದೆ; ಆದರೆ ಬಡಪ್ರಾಣಿಯು ಹತಭಾಗಿ ಇದ್ದಂತೆ ಕಾಣುತ್ತದೆ.

೯ ಗಂಟೆಯ ಸಮಯ. ಜನರ ಊಟದವೇಳೆಯು. ದಾರಿಯ ಮೇಲಿನ ಜನರೋಡಾಟವು ಬಹುಮಟ್ಟಿಗೆ ಕಡಿಮೆಯಾಗಿದೆ. ಗಾಡಿಯು ಒಳ್ಳೇ ವೇಗದಿಂದ ಹೋಗಹತ್ತಿದೆ. ಈಗ್ಗೆ ಮಾತ್ರ ಇದರಲ್ಲಿ ಏನಾದ ರೊಂದು ಕಪಟಕಾರಸ್ಥಾನವಿರಬಹುದೆಂದು ಕಲ್ಪಿಸಲು ಅಡ್ಡಿ ಇಲ್ಲ. ಸುಮ್ಮನೆ ಕಲ್ಪಿಸುವದೇತಕ್ಕೆ? ಮನೆದಟ್ಟಣೆ ಮಾಡಿಕೊಳ್ಳಲೇಬೇಕು.

ಒಟ್ಟನಮೇಲೆ ಈ ಎಲ್ಲ ವಿಷಯದ ಮೂಲಗುಟ್ಟು ಗುಪ್ತಕಾರಸ್ಥಾನ. ಯಾವಪ್ರಕಾರದ ಕಾರಸ್ಥಾನವೆನ್ನುವದನ್ನು, ಇನ್ನು ನಾವು ಶೋಧಿಸಲೇ ಬೇಕು.

೯॥ ಗಂಟೆಯ ಸುಮಾರಕ್ಕೆ ಕುದುರೆಯ ಗಾಡಿಯು ಹಫ್ತಗುಂಬದ ಗಳಾಚೆಯಲ್ಲಿರುವ ಓಣಿಗೆ ಬಂದು ತಲುಪಿತು. ಓಣಿಯ ಕೊನೆಯ ಭಾಗ ದಲ್ಲಿರುವದೊಂದು ಅಚ್ಚುಕಟ್ಟಾದ ಮನೆಯ ಕಾಂಪೌಂಡದ ಬಾಗಿಲಲ್ಲಿ ಬಂದುನಿಂತಿತು.

ತರುಣಿಯು ಇನ್ನೂ ಮೂರ್ಛಿತಾವಸ್ಥೆಯಲ್ಲಿಯೇ ಇದ್ದಳು. ಗಾಡಿಯು ಬಂದುನಿಂತಿದ್ದ ಮನೆಯ ಸುತ್ತುಮುತ್ತು, ತುಸು ದೂರದಮೇಲೆ ಅಲ್ಲೊಂದು ಇಲ್ಲೊಂದು ಮನೆಗಳಿದ್ದರೂ, ಏಕಾಂತ ಸ್ಥಳದಲ್ಲಿದ್ದಂತೆ ಇತ್ತು. ಯಾಕಂದರೆ ಮನೆಯ ಸುತ್ತುಮುತ್ತಲಿನ ಆವಾರದ ಗೋಡೆಯು, ಎತ್ತರವಾಗಿ ಕಟ್ಟಿದ್ದರಿಂದ, ಹೊರಗಿನ ಒಬ್ಬ ಮನುಷ್ಯನೂ ಒಳಗೆ ಕಾಣ ಬರುತ್ತಿದ್ದಿಲ್ಲ. ಸುತ್ತುಮುತ್ತಲಿನ ಆವಾರವು ಉಪವನದಂತಿತ್ತು. ಅಲ್ಲಲ್ಲಿ ನಾನಾಬಗೆಯ, ನಾನಾಜಾತಿಯ ಹೂಗಿಡಗಳಿದ್ದವು. ನಡುವೆ ಕಾರಂಜಿಯೊಂದು ಇದ್ದಿತು.

ಗಾಡಿಯು ಹೊರಗಿನ ಬಾಗಿಲಿಗೆ ಬರುತಲೆ, ಆಗಮನ ಸುದ್ದಿಯನ್ನು ಸೂಚಿಸುವಂತೆ, ಗಾಡಿಯುವನು ಗಂಟೆಯನ್ನೊಳಿತಾಗಿ ಬಾರಿಸಿದನು. ಗಂಟೆ

ಯ ನಾದವನ್ನು ಕೇಳುತಲೆ, ಕಾರಂಜಿಯು ಮೇಲೆ ಕುಳಿತಿದ್ದ ಹೂವಾಡಿಗನು, ಬಾಗಿಲಿಗೆ ಬಂದು ಕದ ತೆರೆದನು. ಗಾಡಿಯು ಒಳಹೊಕ್ಕಿತು. ಮುನ್ನಿನಂತೆ ಕದಗಳು ಮುಚ್ಚಲ್ಪಟ್ಟವು.

ಪಾಪ ! ತರುಣಿಯು ಇನ್ನೂ ವಿಸ್ಮೃತಿಯಲ್ಲಿಯೇ ಇದ್ದಳು.

ಓದುಗರು ಅಚ್ಚರಿಗೊಳ್ಳಬಹುದು. ೮ ಹೊಡೆಯುವ ಸುಮಾರಕ್ಕೆ ಎಚ್ಚರದಪ್ಪಿ ಬಿದ್ದ ತರುಣಿಯು, ಇಷ್ಟು ಹೊತ್ತಿನವರೆಗೆ ಚೇತರಿಸಿಕೊಂಡು ಏಳಬಾರದೆಂದರೆ, ಏನನ್ನಬೇಕು? ತರುಣಿಗೆ ಇಂಥ ಗಾಢ ಮೂರ್ಛೆ ಬರಲು ಕಾರಣವೇನು? ದಾರಿಯಲ್ಲಿ ಒಂದೆರಡುಸಾಗೆ ಎಚ್ಚರವಾಗಿ ಪುನಃ ಮೊದಲಿನ ಸ್ಥಿತಿಗೆ ಬಂದ ವಿಷಯುವಾದರೂ ಓದುಗರಿಗೆ ಗೊತ್ತಿರಲಿಕ್ಕೇಬೇಕು.

ಗಾಡಿಯು ಮನೆಯ ಆವಾರದಲ್ಲಿ ಬಂದು ನಿಂತಿತು. ಹೊಸಹೊದರಿಯ ಉಡುಪು ತೊಡಪನ್ನು ಧರಿಸಿದ, ಹೊಸಹರೆಯದ ತರುಣನೋರ್ವನು, ಉಪವನದಲ್ಲಿ ಅತ್ತಿತ್ತ ತಿರುಗಾಡುತ್ತಿದ್ದನು. ಅವನು ಗಾಡಿಯ ಪರದೆಯನ್ನು ಓರೆಮಾಡಿ ನಿಶ್ಚೇಷ್ಟವಾಗಿ ಬಿದ್ದ ವ್ಯಕ್ತಿಯಕಡೆಗೆ ತನ್ನ ವಕ್ರದೃಷ್ಟಿಯನ್ನು ಹೊರಳಿಸಿ ಸಾಕಷ್ಟು ನೋಡಿದನು.

ಗಾಡಿಯು ನಿಲ್ಲುತಲೆ ಒಳಗಿದ್ದಿರ್ವರಸದ್ಗೃಹಸ್ಥರು, ಲಗುಬಗೆಯಿಂದ ಕೆಳಗಿಳಿದರು. ಬಾಗಿಲ ತೆರದ ಮನುಷ್ಯನನ್ನು ಕರೆದು, ಮೂವರೂ ಕೂಡಿ ಒಳಗೆ ಎಚ್ಚರಿಲ್ಲದೆ ಮಲಗಿರುವ ತರುಣಿಯನ್ನು, ಹಗುರಾಗಿ ಮೇಲಕ್ಕೆತ್ತಿ, ಮನೆಯೊಳಗಿನ ಮೂಲಿಯಲ್ಲಿರುವ ದೊಂದು ಹಸನಾದ ಕೋಣೆಯಲ್ಲಿ ತಂದು, ಮಂಚದ ಮೇಲಿರುವ ಮೆತ್ತಗಿನ ಗಾದಿಯಮೇಲೆ ಮಲಗಿಸಿದರು. ಪಾಶ್ಚಾತ್ಯ ಪದ್ಧತಿಯ ಉಡುಪು ತೊಡಪನ್ನು ಧರಿಸಿದ ತರುಣನಾದರೂ ಅವರ ಹಿಂದೆಯೇ ಒಳಹೊಕ್ಕನು.

ಸುಮಾರು ೧೧॥ ಗಂಟೆ ರಾತ್ರಿಯಾಗಿರಬಹುದು. ಎಲ್ಲಕಡೆಗೂ ನಿಃಶಬ್ದತೆಯು. ಹಪ್ತಗುಂಬದ ಹಿಂದಿನ ಓಣಿಯಲ್ಲಿರುವದೊಂದು ಮನೆಯಲ್ಲಿ, ಓರ್ವ ತರುಣಿಯು ಮೂರ್ಛಿತಾವಸ್ಥೆಯಲ್ಲಿ ಮಲಗಿದ್ದಳು. ಇಬ್ಬರು ಗಂಡಸರು ಪಕ್ಕದಲ್ಲಿಯೇ ಕುಳಿತು ಎಚ್ಚರಿಸಲೋಸುಗ ಉಪಚಾರಮಾಡು

ತ್ತಿದ್ದರು. ಓದುಗರೇ! ಮೂರ್ಛಿತ ತರುಣಿಯು ಬೇರೊಬ್ಬಳಿರದೆ ಮೇಲೆ ಹೇಳಿದ ತರುಣಿಯೇ ಇರುವಳು. ಯೋಗ್ಯ ಉಪಚಾರವಾದ ಮೇಲೆ, ತುಸು ಹೊತ್ತಿನಲ್ಲಿಯೇ, ತರುಣಿಯು ಸಾವಕಾಶವಾಗಿ ಎಚ್ಚರವಾಗಹತ್ತಿದಳು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಪೂರ್ಣ ಎಚ್ಚರಿಕೆ ಬಂದಿತು. ಕಣ್ಣು ತೆರೆದಳು. ಮಂಚದಮೇಲೆದ್ದು ಕುಳಿತಳು. ಈ ವೇಳೆಯಲ್ಲಿ ಎಚ್ಚರಿಸಲು ಇದ್ದ ಇಬ್ಬರು ಸದ್ಗೃಹಸ್ಥರು, ಹೊಸ ಉಡಿಗೆ ತೊಡಿಗೆಯ ತರುಣನ ಹೊರ್ತು ಆ ತರುಣಿಯ ಕೋಣೆಯಲ್ಲಿ ಯಾರೂ ಇರಲಿಲ್ಲ. ವಿಧವೆಯಂತೂ ಎಲ್ಲಿಯೋ ಮಾಯವಾಗಿ ಹೋಗಿದ್ದಳು.

ತರುಣಿಯು ಪೂರ್ಣ ಎಚ್ಚರವಾಗಿ ಮಂಚದಮೇಲೆ ಎದ್ದೆರೆದು ಕುಳಿತುಕೊಂಡಳು. ಒಂದುಸಾರೆ ಚೆನ್ನಾಗಿದೃಷ್ಟಿಸಿ ನಾಲ್ಕೂಕಡೆಗೆ ನೋಡಿದಳು. ಕೂಡಲೆ ಅವಳ ಹೃದಯವು ಅಲ್ಲೋಲಕಲ್ಲೋಲವಾಯಿತು ಅಲ್ಲಿ ನಡೆದ ಎಲ್ಲ ಅಪರಿಚಿತ ಕೃತಿಯನ್ನು ನೋಡುತಲೆ ಅವಳ ಎದೆಧಸ್ಸೆಂದಿತು.

ಹಿಂದೆ ಜರುಗಿದ ಸಂಗತಿಯು ಅವಳ ಕಣ್ಣೆದುರಿಗೆ ಕಟ್ಟಿದಂತಾಯಿತು. ಹೊತ್ತು ಮುಳುಗುವ ಮುಂದೆ, ವಿಧವೆಯ ಸಂಗಡ ದೇವದರುಶನಕ್ಕೆ ಹೋದದ್ದು, ಅಲ್ಲಿ ಬಹಳ ಹೊತ್ತಿನವರೆಗೆ ಕುಳಿತದ್ದು, ಪೇಡೆಯ ಪ್ರಸಾದ ತಿಂದಿದ್ದೂ, ವಿಧವೆ ತನ್ನ ನಡುವೆ ನಡೆದ ಮಾತುಕತೆಗಳೂ, ಕಡೆಗೆ ಕಣ್ಣಿಗೆ ಕತ್ತಲು ಕವಿದಂತಾಗಿ ಕೆಳಗೆ ಕುಳಿತದ್ದೂ, ಎಲ್ಲ ವಿಷಯವೂ ಅವಳ ನೆನಪಿಗೆ ಬಂದಿತು.

ಎಚ್ಚರದಪ್ಪಿ ಬಿದ್ದಮೇಲೆ ಮುಂದೊದಗಿದ ಹಾಗೂ ಆ ಅಪರಿಚಿತ ಸ್ಥಳದಲ್ಲಿ ಬಂದು ಸಿಲುಕಿದ ವಿಷಯದ ಬಗ್ಗೆ ವಿಚಾರಮಾಡಹತ್ತಿದಳು.

ನಡುವೆ ಒಂದೆರಡುಸಾರೆ ಎಚ್ಚತ್ತಾಗ ತಾನು ಒಂದು ಕುದುರೆಯ ಗಾಡಿಯಲ್ಲಿ ಮಲಗಿದ್ದಂತೆ ಭಾಸವಾಯಿತು; ಆದರೆ ಅದು ತುಸು ವೇಳೆಗಾಗಿ. ಯಾಕಂದರೆ ಪುನಃ ಎಚ್ಚರದಪ್ಪಿ ಬೀಳುತಿದ್ದಳು.

ತರುಣಿಯು ಬಹಳ ಚತುರಳು. ಆವರಂತೆ ಧೂರ್ತಳೂ ಚಾಣಾಕ್ಷಳೂ ಇದ್ದಳು. ಅವಳು ಕೂಡಲೆ ಅಲ್ಲಿಯ ಎಲ್ಲ ವಿಷಯವನ್ನು ಕಂಡು

ಹಿಡಿದಳು. ಆ ಅಪ್-ಟು-ಡೇಟ್ ಪೋಷಾಕಿನ ತರುಣನು, ಅವಳಿಗೆ ಮೋರೆ ತೋರಗೊಡಬಾರದೆಂದು ಎಷ್ಟು ಎಚ್ಚರದಿಂದಿದ್ದರೂ, ಅವಳು ಅವನನ್ನು ಗುರ್ತಿಸದೆ ಬಿಡಲಿಲ್ಲ.

ತರುಣನನ್ನು ಗುರ್ತಿಸುತಲೆ ತಾನು ಯಾವತರದ ಮತ್ತು ಎಂಥ ಸಂಕಟಮಯ ಪರಿಸ್ಥಿತಿಯಲ್ಲಿರುವೆನೆಂದು ಆ ತರುಣಿಯು ಕೂಡಲೆ ತಿಳಿದು ಹಿಡಿದಳು. ಒಳ್ಳೇದು! ಆ ತರುಣನು ಯಾವನಿರಬಹುದು?

✣ ✣ ✣ ✣ ✣ ✣ ✣ ✣ ✣

ಅಸಹಕಾರದ ತತ್ವವು. ವಕೀಲಿಯನ್ನು ಕೊಡಬಾರದು. ಯಾವತರದಿಂದಲೂ ಸ್ವಂತದ ಸಂರಕ್ಷಣೆ ಮಾಡಿಕೊಳ್ಳಬಾರದು; ಆದುದರಿಂದಲೇ ರಘುನಾಥನಿಗೆ ೨ ವರುಷದ ಸಶ್ರಮ ಶಿಕ್ಷೆಯು ವಿಧಿಸಲ್ಪಟ್ಟಿತು. ರಘುನಾಥನು ಮಾಡಿದ ತಪ್ಪು ಅಷ್ಟೇನು ಮಹತ್ವದ್ದಿದ್ದಿಲ್ಲ. ನೂರಿನ್ನೂರು ರೂಪಾಯಿಯ ದಂಡ, ದಂಡ ಕೊಡದಿದ್ದರೆ ೩, ೪ ತಿಂಗಳ ಶಿಕ್ಷೆ; ಇಷ್ಟರ ಮೇಲೆ ಅವನು ಪಾರಾಗುವಂತಿದ್ದನು. ವಕೀಲಿಯನ್ನು ಕೊಟ್ಟು ರೀತಿಯ ಪ್ರಕಾರ ಖಟ್ಲೆ ನಡಿಸಿದ್ದರೆ, ಅವನು ಎಂದಿಗೂ ಇಂಥ ಕಠಿಣ ಶಿಕ್ಷೆಯನ್ನು ಹೊಂದುತ್ತಿದ್ದಿಲ್ಲ. ಇದರಂತೆ ಎಷ್ಟೋ ಜನರು ಅವನಿಗೆ ಸಲುಹೆ ಹೇಳಿದರು. ಒಬ್ಬಿಬ್ಬ ಉದಾರ ಮತವಾದಿ ವಕೀಲರು, ಪುಕ್ಕಟೆಯಾಗಿ ಕೆಲಸ ನಡೆಸಲು ಸಹ, ಸಿದ್ಧರಿದ್ದರು; ಆದರೆ ರಘುನಾಥನಂಥ, ಉಜ್ವಲ ರಾಷ್ಟ್ರಭಕ್ತಿಯ ನವಚೈತನ್ಯ ತುಂಬಿದ ತರುಣನು, ಅಸಹಕಾರದ ತತ್ವವನ್ನುಲ್ಲಂಘಿಸಿ, ಇಂಥ ಕ್ಷುಲ್ಲಕ ಆತ್ಮೀಯ ಸ್ವಾರ್ಥದ ಸುಖಕ್ಕೆ ಮನಸೋಲುವನೇ? ಅವನು ಯಾರಮಾತನ್ನೂ ಕೇಳದೆ ಸ್ವಸಂತೋಷದಿಂದ ಸೆರೆಮನೆಯ ಸೋಪಾನವನ್ನೇರಿದನು.

ಆಸಹಕಾರದ ತತ್ವವನ್ನೊಪ್ಪಿಕೊಳ್ಳದೆ, ತಮ್ಮ ಮತವೇ ಶ್ರೇಷ್ಠವೆಂದು ಮೆರೆದಾಡುವ ಉದಾರ ಮತವಾದಿಗಳು ಮಾತ್ರ, ರಘುನಾಥನು ತುರಂಗವಾಸ ಪತ್ಕರಿಸುವದನ್ನು ನೋಡಿ, ಮರುಗದೆ ಇರಲಿಲ್ಲ. ಖಟ್ಲೆಯ ವಿಚಾರಣೆಯು, ವಕೀಲರ ಮುಖಾಂತರವಾಗಿ, ಯೋಗ್ಯರೀತಿಯಿಂದಾಗಿದ್ದರೆ,

ಮೇಲೆ ಬರದಂತೆ, ದಂಡ ಇಲ್ಲವೇ ಅಲ್ಪಾವಧಿಯ ಶಿಕ್ಷೆಯಿಂದಲೇ ಪಾರಾ ಗುತ್ತಿದ್ದನೆಂದು ಎಲ್ಲರೂ ಮತಕೊಟ್ಟರು. ಯಾಕಂದರೆ ಅವನಮೇಲಿಟ್ಟ ಆರೋಪವೇ, ಆಪ್ರಕಾರ ಕ್ಷುಲ್ಲಕ ತರಗತಿಯದಾಗಿತ್ತು.

ರಘುನಾಥನಿಗೆ ಶಿಕ್ಷೆವಿಧಿಸಿದದಿವಸ ಊರಲ್ಲೆಲ್ಲ ಹರತಾಳ. ಕಾಂಗ್ರೆಸ್ ಕಮೀಟಿಯವರು ಸಭೆ ನೆರೆಯಿಸಿದರು. ಅಧ್ಯಕ್ಷರ ಹಾಗೂ ಪ್ರಸಿದ್ಧ ರಾಷ್ಟ್ರ ಭಕ್ತರ ಭಾಷಣಗಳಾದವು. ರಘುನಾಥನ ನಿಸ್ವಾರ್ಥಬುದ್ಧಿಯನ್ನೂ ಅವನು ಮನಸ್ಸುಗೊಟ್ಟು ಮಾಡಿದ ಕೆಲಸವನ್ನೂ, ಕೊಂಡಾಡಿ ಅವನನ್ನು ಆದರದಿಂದ ಬೀಳ್ಕೊಟ್ಟು, ಆಳರಸರು ಕೈಕೊಂಡ ಅತ್ಯಾಚಾರದ ಧೋರಣವನ್ನು ಅತಿಶಯವಾಗಿ ನಿಂದಿಸಿದರು. ಕಲಬುರ್ಗಿಯ ವರೆಗೂ ಈ ಸುದ್ದಿಯು ಹೋಯಿತು.

ತುರಂಗವಾಸ ಪತ್ಕರಿಸಿದಮೇಲೆ ಎಡೆಬಿಡದೆ ೧೫, ೨೦ ದಿವಸಗಳ ವರೆಗೆ, ಅವನ ವಿಷಯದ ಸ್ತುತಿ ಪರ ಲೇಖಗಳು ಕರ್ನಾಟಕ ಮರಾಠಾದ ಪ್ರತಿಯೊಂದು ವರ್ತಮಾನ ಪತ್ರದಲ್ಲಿ ಬರುತ್ತಿದ್ದವು.

ದಿವಸದಮೇಲೆ ದಿವಸಗಳು ಹೋಗಹತ್ತಿದವು. ಅಖಿಲಭಾರತ ರಾಷ್ಟ್ರೀಯ ಸಭೆಯ ದಿನಗಳು ತೀರ ಸನಿಯಕ್ಕೆ ಬಂದವು. ದೇಶಬಂಧು ಚಿತ್ತರಂಜನ ದಾಸರ ಅಧ್ಯಕ್ಷತೆಯಲ್ಲಿ ಗಯಾ ಸಭೆಯು ನೆರವೇರಿತು

ಸಭೆಯಲ್ಲಿಎರಡುಪಂಗಡಗಳಾದವು. ಸ್ವರಾಜ್ಯವಾದಿಗಳು ಮಹಾತ್ಮರ ಮತವಾದಿಗಳು. ಒಬ್ಬರು ಶಾಸನ ವರಿಷ್ಠ ಸಭೆಗಳಲ್ಲಿ ಪ್ರವೇಶ ಮಾಡಬೇಕೆನ್ನುವವರು. ಮತ್ತೊಂದು ಪಂಗಡದವರು ಮಾಡಬಾರದೆನ್ನುವವರು.

ಅಸಹಕಾರದ ಕಾರ್ಯವು ಅನಿಯಂತ್ರಿತ ಅವ್ಯಾಹತ ಸಾಗಬೇಕಾದರೆ, ಜನರಲ್ಲಿ ಪೂರ್ಣ ವಿಚಾರ ಬರಬೇಕು. ಪರಿಪಕ್ವ ಪೂರ್ಣವಿಚಾರ ಬರಬೇಕಾದರೆ, ಇನ್ನೂ ದಿನಗಳು ಬೇಕೆಂದು, ಅಷ್ಟಕ್ಕೆ ಕೈಕೊಂಡ ಕಾರ್ಯವನ್ನು ನಿಲ್ಲಿಸಿ, ಮುಂದೆ ಪೂರ್ಣ ಸಿದ್ಧಿಗೆ ತರಬೇಕೆಂಬ ವಿಚಾರವು ಪ್ರತಿಯೊಬ್ಬರ ಹೃತ್ಪಟಲದಮೇಲೆ ಚೆನ್ನಾಗಿ ಬಿಂಬುವಂತೆ, ಪ್ರೇರಣೆ ಮಾಡಲೋಸುಗ, ಭಗವಂತನನ್ನು ಕುರಿತು ತಪಸ್ಸು ಮಾಡಬೇಕೆಂಬುದಾಗಿ

ಮಹಾತ್ಮಾಜಿಯವರು ಮರುಳಿ ತಮ್ಮ ಸಾಬರಮತಿ, ಮಹಾ ಆಶ್ರಮಕ್ಕೆ ಬಂದರು.

ರಘುನಾಥನು, ಸೆರೆಮನೆಯ ಸಂಕಟವನ್ನು ಅನುಭೋಗಿಸಹತ್ತಿ, ಇಷ್ಟರಲ್ಲಿ ಸುಮಾರು ೮, ೯ ತಿಂಗಳುಗಳಾಗಿರಬಹುದು. ಅಸಹಕಾರದ ಚಲನವಲನವು ಹಿಮ್ಮೆಟ್ಟಹತ್ತಿತ್ತು. ರಾಷ್ಟ್ರಮುಂದಾಳುಗಳು ಜನರಿಂದ ಮರೆಯಾಗಹತ್ತಿದ್ದರು. ಅದರಂತೆ ರಘುನಾಥನ ವಿಸ್ಮರಣೆಯಾದರೂ ಆಗಹತ್ತಿತು. ಮುಂದೆ ತುಸು ದಿವಸಗಳಲ್ಲಿ ಇವನನ್ನು ಸಂಪೂರ್ಣವಾಗಿ ಮರೆತುಬಿಟ್ಟರು.

ರಘುನಾಥನು ತುರಂಗಕ್ಕೆ ಹೋದಮೇಲೆ ಅವನ ಸಚ್ಛೀಲಪತ್ನಿಯು ಹೇಗೆ ದಿನಗಳೆಯುತ್ತಿದ್ದಳೆಂಬದನ್ನು ನೋಡುವ!

ರಘುನಾಥನು ಸ್ವತಂತ್ರವಾಗಿ ಇರಹತ್ತಿದಮೇಲೆ ಸುಮಾರು ಎರಡು ಎರಡೂವರೆ ವರುಷಗಳವರೆಗಷ್ಟೇ ಚಾಕರಿ ಮಾಡಿದನು. ಮಾಸಿಕ ವೇತನವು ಚೆನ್ನಾಗಿಯಿದ್ದು, ಮನುಷ್ಯನು ಮಿತವ್ಯಯಿ ಇದ್ದುದರಿಂದ, ತಿಂಗಳೊಂದಕ್ಕೆ ತುಸು ಹಣವು ಉಳಿಯುತ್ತಿತ್ತು. ಹೀಗಾಗಿ ಐದಾರುತಿಂಗಳದವರೆಗೆ ಮಾತ್ರ ಕುಳಿತು ತಿಂದರೆ ಕರಗದಷ್ಟು ಹಣವು ಅವನು ಕಾರಾಗ್ರಹಕ್ಕೆ ಹೋಗುವಕಾಲಕ್ಕೆ ಮನೆಯಲ್ಲಿತ್ತು.

ರಘುನಾಥನ ಹೆಂಡತಿ ಜಾನಕಿಯು ಬಹು ಕುಲೀನಳು, ಸುಶೀಲಳು, ಪತಿಪರಾಯಣಳು. ಇಂಗ್ರೇಜಿ ಕಲಿತಿದ್ದರೂ ಕೂಡ, ಆರ್ಯಲಲನಾಮಣಿಯರಲ್ಲಿರಬೇಕಾದ, ಎಲ್ಲ ಗುಣಗಳೂ ಆ ಗೃಹಣಿಯಲ್ಲಿದ್ದವು ಇತ್ತೀಚಿನ ಸುಶಿಕ್ಷಿತ ತರುಣಿಯರಲ್ಲಿ ಕಂಡಬರುವ ಒನಪು ಒಯ್ಯಾರ ಸುಧಾರಕತನದನಡತೆ ನಡಾವಳಿಗಳಿಂದವಳು ಯಾವಾಗಲೂ ಹಿಂದೆ ಇರುತ್ತಿದ್ದಳು.

ಕಲಬುರ್ಗಿಗೆ, ಸೊಲ್ಲಾಪುರ, ಪುಣೆ ಪಟ್ಟಣಗಳು ಬಹಳ ಸನಿಯ ಪಾಶ್ಚಾತ್ಯ ಪದ್ಧತಿಯ ಮರುಳಮಬ್ಬಿಗೆ ಬಿದ್ದ ಜನರು ಅಲ್ಲಲ್ಲಿ ವಾಸಿಸಿರುವಂತೆ ಕಲಬುರ್ಗಿಯಲ್ಲಾದರೂ ಇರುವರು. ಈ ಎಲ್ಲಜನರ ಸಂಪರ್ಕವು ಇಲ್ಲಿಗೆ ಬಂದನಂತರ ಮೇಲಿಂದಮೇಲೆ ಆಗುತ್ತಿತ್ತು. ಅವರ ಬಾಹ್ಯಾ

ಡಂಬರದ ಬೆಡಗಿಗಾಗಿ ಅವರಿವರಲ್ಲಿ ಮೇಲಿಂದಮೇಲೆ ವಾಗ್ವಿವಾದ ವಾಗು ತ್ತಿತ್ತು. ಹಿಂದೂ ನಾಗರೀಕತೆಯನ್ನು ಹಿಯ್ಯಾಳಿಸಿ, ಪಾಶ್ಚಾತ್ಯನಾಗರೀ ಕತೆಗೆ ಪೂರ್ಣ ಮನಸೋತು, ಮೆರೆದಾಡುವ ಫ್ಯಾಶನಪ್ರಿಯ ಜನರಿಂದ ಇವಳು ಯಾವಾಗಲೂ ದೂರಿರುತ್ತಿದ್ದಳು. ಜಾನಕಿಯು ನಿಜವಾಗಿ ಓರ್ವ ಆದರ್ಶ ಗುಣವುಳ್ಳ ಆರ್ಯಮಹಿಳೆಯೇಸರಿ. ಕುಲಿನ ಮನೆತನದಲ್ಲಿ ಕಂಡು ಬರುವ ವಿನಯ ಓದಾರ್ಯಶೀಲ ನಾಚಿಕೆ ಗೃಹದಾಕ್ಷಿಣ್ಯ ಮೊದಲಾದ ಸ್ತ್ರೀಯರಿಗುಚಿತವಾದ ಆದರ್ಶ ಗುಣಗಳು ಅವಳಲ್ಲಿ ಅಡಕವಾಗಿದ್ದವು. ಸ್ವಲ್ಪದರಲ್ಲಿ ಹೇಳುವದಾದರೆ, ಸೀತೆ, ಸಾವಿತ್ರಿಯರಂತೆ, ಜಾನಕಿಯು ಕಲಿಯುಗದಲ್ಲಿ ಹುಟ್ಟಿದ ಮೂರ್ತಿಮಂತ ದೇವತೆ ಎಂದು ಬೇರೆ ಹೇಳ ಬೇಕಾಗಿಲ್ಲ.

ಇನ್ನು ಸೌಂದರ್ಯದ ವಿಷಯದಲ್ಲಿ. ಅದರಲ್ಲಿಯು ಕೂಡ ಅವಳು ಒಳ್ಳೇ ಭಾಗ್ಯಶಾಲಿಯು. ದೇವರು ಗುಣಕ್ಕೆ ತಕ್ಕಂತೆ ಮಿತಿಮೀರಿದ ಸೌಂದರ್ಯವನ್ನು ದಯಪಾಲಿಸಿದ್ದನು.

ಒಂದು ದೃಷ್ಟಿಯಿಂದ ಭಾಗ್ಯಶಾಲಿ ಇದ್ದಂತೆ, ಮತ್ತೊಂದು ದೃಷ್ಟಿ ಯಿಂದ ಹತಭಾಗ್ಯಳೂ ಇದ್ದಳು. ಯಾಕೆಂದರೆ ರೂಪಕ್ಕೂ ಗುಣಕ್ಕೂ ಅನುಗುಣವಾಗಿ, ಲಕ್ಷ್ಮಿ ನೆಲೆಸಿರುವ ಮನೆಯಲ್ಲಿ ಜನ್ಮಿಸದೆ, ದಾರಿದ್ರ್ಯ ದೇವಿಯ ಒಕ್ಕಲಾದ ಬಡವರ ಮನೆಯಲ್ಲಿ ಹುಟ್ಟಿದ್ದಳು.

ಸದ್ಯದಕಲ್ಲಿಯುಗದಲ್ಲಿ ದುಡ್ಡಿಲ್ಲದ ಬಡವರಾಗಿರುವದೊಂದು ದೊಡ್ಡ ತಪ್ಪೇ ಆಗಿರುವದು. ಜಗತ್ತಿನಲ್ಲಿ, ಅತ್ಯಾಚಾರ, ಅನ್ಯಾಯ, ಅಪಮಾನ, ಮುಂತಾದ ವಿಷಯಗಳು, ಯಾವಾಗಲೂಬಡವರನ್ನೇ ಬೆನ್ನಟ್ಟಿರುವವಲ್ಲದೆ ಶ್ರೀಮಂತರ ಸನಿಯಕ್ಕೆ ಸಹ ಹೋಗುವದಿಲ್ಲ. ಹಣವಿಲ್ಲದೆ ಬಡವನಾಗಿ ರುವನೆಂಬ, ಒಂದೇ ದೊಡ್ಡ ತಪ್ಪಿನಿಂದ, ಲಕ್ಷ್ಮೀಪುತ್ರರಿಂದಾಗುವ ನಾ ನಾಬಗೆಯ ಸಂಕಟಪರಂಪರೆಯನ್ನು ಮಾನಹಾನಿಯನ್ನು ಬಡವನು ಹೇಗೆ ಸೈರಿಸಬೇಕಾಗುತ್ತದೆಂಬ ವಿಷಯವನ್ನು, ಈ ಜಗತ್ತಿನ ಜಾಲದಲ್ಲಿ ಪ್ರತಿ ಯೊಬ್ಬನು ಕಣ್ಣಾರೆ ಕಂಡಕಡೆ ನೋಡಬಹುದು. ಹಣದ ಹೊಮ್ಮಿನಿಂದ ಕಣ್ದೆರೆಯದಿರುವ ಹಣವಂತರು, ಬಲಿಯಲ್ಲಿ ಸಿಕ್ಕ ಬೇಟೆಯಂತೆ ಬಡವ

ನನ್ನು ಬಹಳವಾಗಿ ಬಳಲಿಸಿ, ಬಲ್ಲಂತೆ ನೋಯಿಸುವದನ್ನು ಬಹುಮಂದಿ ಬಹುತರವಾಗಿ ನೋಡಬಹುದು.

ಒಟ್ಟಿನಮೇಲೆ ಬಡವನಾಗಿ ಭೂಮಿಯಮೇಲೆಬಾಳಬಾರದೆನ್ನುವದೇ ಬಲ್ಲಿದರ ಬಹುಮತ.

ಪರಮೇಶ್ವರರೂಪಿ ಪತಿಯು ತುರಂಗದೊಳಗೆ ಹೋದ ಸುದ್ದಿಯನ್ನು ಕೇಳಿ ಪತಿಭಕ್ತಿ ಪರಾಯಣಳಾದ ಜಾನಕಿಗೆ ಬಹಳೇ ವ್ಯಸನವಾಯಿತು. ಕಾರಣವಿಲ್ಲದೆ ಕ್ಷುಲ್ಲಕ ಆರೋಪದಿಂದ ಎರಡು ವರ್ಷದ ಸಶ್ರಮ ಶೀಕ್ಷೆಯ ದುರ್ವಾರ್ತೆಯನ್ನು ಕೇಳಿದಮೇಲಂತೂ ಅವಳಿಗೆ ಸಹಿಸಲಾರದ ಸಂಕಟ ವಾಯಿತು. ಅವಳು ಈ ಸುದ್ದಿಯನ್ನು ಕೇಳಿದದಿವಸ ಸರಿಯಾಗಿ ಸಂಜೆಯ ವರೆಗೆ ಶೋಕಮಾಡಿದಳು.

ಕಳವು ಕೊಲೆಗಡಕತನ ಮಾಡಿ ಕ್ರೂರಕರ್ಮಿಯಂತೆ ಸೆರೆಮನೆಯನ್ನು ಸೇರದೆ, ತನ್ನಪತಿಯು ರಾಷ್ಟ್ರದೇವಿಯ ಧ್ವನಿಗೆ ಧ್ವನಿಗೊಟ್ಟು ದೇಶ ಕಾರ್ಯದ ಉಚ್ಚಧ್ಯೇಯವನ್ನು ಮುಂದೆಮಾಡಿಕೊಂಡು ಸಂತೋಷದಿಂದ ಸೆರೆಮನೆಯನ್ನು ಸೇರಿದ್ದರಿಂದ ಅವಳಿಗೆ ಅಭಿಮಾನ ವೆನಿಸುತ್ತಿತ್ತು.

ದೇಶ ಹಿತದ ಸಲುವಾಗಿ, ಪಂಚಪ್ರಾಣದ ಪೂರ್ಣಾಹುತಿಯನ್ನು ಕೊಡುವ ರಘುನಾಥನ ಧರ್ಮಪತ್ನಿ ಇರುವೆನೆಂಬುದು ಅವಳಿಗೆ ಪೂರ್ಣಗೊತ್ತಿತ್ತು. ಇದೆಲ್ಲವೂ ತಿಳಿಯುತ್ತಿದ್ದರೂ ಅವಳು ಅಬಲೆಯು, ಕೋಮಲಸ್ವಭಾವದವಳು. ಯಾವಾಗಲೂ ಪತಿ ಪಾದಸೇವೆಯಲ್ಲಿ ತತ್ಪರಳಾದ ಅವಳಿಗೆ, ಪತಿಯಿಂದ ದೂರಿರುವದು, ಅವನು ನಾನಾಬಗೆಯಕಷ್ಟವನ್ನು ಅನುಭೋಗಿಸುತ್ತ, ಕಾರಾಗ್ರುಹದಲ್ಲಿ ಕೊಳೆಯುತ್ತಿರುವಾಗ, ತಾನು ಚಕ್ಕಂದದಿಂದಿರುವದು ಅವಳಿಂದ ಹೇಗಾಗ ಬೇಕು?

ದಿವಸದಮೇಲೆ ದಿವಸಗಳು ಹೋಗಹತ್ತಿದವು; ಆದರೂ ಅವಳ ಕಣ್ಣೀರುಗಳು ಒಂದು ದಿನವಾದರೂ ಹರಿಯದೆ ಇರಲಿಲ್ಲ.

ಹೃದಯ ಮಂದಿರದಲ್ಲಿ ಅಕ್ಷಯವಾಗಿ ಸ್ಥಾಪಿಸಿದ ರಘುನಾಥನ ಸುಂದರವಾದ ಮೂರ್ತಿಯು, ಕೊಂಚಕಾಲವಾದರೂ ಅವಳ ಮನಗಣ್ಣಿನಿಂದ ದೂರಾಗುತ್ತಿದ್ದಿಲ್ಲ. ವಿರಹದ ಷಡಭಾಗ್ಯಿಯಿಂದ ಅವಳ ಹೃದಯವು ತಡೆಯದೆ ತಲ್ಲಣಗೊಳ್ಳುತ್ತಿತ್ತು

ಜಾನಕಿಯು ತನ್ನ ಕೋಣೆ ಯಲ್ಲಿ ಒಬ್ಬಳೇ ಇರುತ್ತಿದ್ದಳು. ಇತ್ತ ಅತ್ತೆ ಮಾವಂದಿರನ್ನೂ ಕಳೆದುಕೊಂಡಿದ್ದಳು. ಅತ್ತ ತಾಯಿತಂದೆಗಳನ್ನೂ ಕಳೆದು ಕೊಂಡಿದ್ದಳು. ಅವಳಿಗೆ ಸಮಾಧಾನ ಹೇಳುವದಕ್ಕಾಗಿಯೂ, ಧೈರ್ಯ ಕೊಡುವದಕ್ಕಾಗಿಯೂ ಒಬ್ಬರೂ ಉಳಿದಿದ್ದಿಲ್ಲ. ತನ್ನ ಪತಿಯ ಪ್ರೀತಿಯ ಕಕ್ಕಂದಿರೊಬ್ಬರು ಸಹಿತ, ತಮ್ಮ ಮಗನು ಶೀಕ್ಷೆಗೆ ಗುರಿಯಾದ ವಾರ್ತೆಯನ್ನು ಕೇಳಿ ಅವರ ಕೋಮಲವಾದ ಹೃದಯದಮೇಲೆ ವಜ್ರಾಘಾತ ವಾದಂತಾಗಿ ಮುಂದೆ ತುಸು ದಿವಸಗಳಲ್ಲಿ ಮರಣ ಹೊಂದಿದರು.

ಹೆಂಡತಿಯೋರ್ವಳು ನಿರಾಧಾರಿಯಾದಳು. ಇತ್ತ ಪತಿಯು ಪರಲೋಕಕ್ಕೆ ತೆರಳಿದನು. ಅತ್ತ ಮಗನು ಸೆರೆಮನೆಯಲ್ಲಿ ಕುಳಿತುಕೊಂಡನು. ಸೊಸಿಯೊಬ್ಬಳಿಗೆ ಸಂಕಟ ಕೊಡಬಾರದೆಂದು, ದುಃಖದ ಪರಮಾವಧಿಯಿಂದ, ತನ್ನ ದೂರದ ಬಂಧುಗಳಮನೆಯನ್ನು ಸೇರಿದಳು. ಹೋಗುವ ಕಾಲಕ್ಕೆ ಜಾನಕಿಯನ್ನು ಕರೆದಳು; ಆದರೆ ಜಾನಕಿಯು ಒಡಂಬಡಲಿಲ್ಲ.

ಅಪ್ತೇಷ್ಟರೆನ್ನುವವರು ಒಬ್ಬರೂ ಇಲ್ಲದಾದಮೇಲೆ, ಜಾನಕಿಯು ಬಹಳೇ ಅಸಹಾಯ ಸ್ಥಿತಿಯಲ್ಲಿರಹತ್ತಿದಳು. ಈ ವೇಳೆಯಲ್ಲಿ, ದೇವರಹೊರ್ತು ಆ ಬಡಪ್ರಾಣಿಗೆ ಹಿತಚಿಂತಕ ರೆನ್ನುವವರು ಒಬ್ಬರೂ ಇದ್ದಿಲ್ಲ.

ಕಲಬುರ್ಗಿಯಂಥ ಇಬ್ಬಣದಪಟ್ಟಣದಲ್ಲಿ ಒಬ್ಬಳೇ ಒಬ್ಬಹೆಣ್ಣುಮಗಳು. ಅದರಲ್ಲಿ ತರುಣಿಯು. ರೂಪವತಿಯು ಮರ್ಯಾದೆಯನ್ನು ಕಾದುಕೊಂಡು ಇರುವದೆಂದರೆ ಬಹು ಕಠಿನಪ್ರಸಂಗವೇಸರಿ.

ಅಸಹಾಯ ಸ್ಥಿತಿಯಲ್ಲಿರುವ ರೂಪವತಿಯರಾದ ತರುಣಿಯರು ಅಕಸ್ಮಾತ, ಯಾವನಾದರೊಬ್ಬ ತಾರುಣ್ಯದ ಮದದಿಂದ ತಿರುಗಾಡುವ ತರುಣನ ಮೋಸದ ಮಾತಿಗೆ ಮರುಳಾದರೆಂದರೆ ಅವರ ಅವಿಚಾರದಿಂದ ಎಂಥ ಅನರ್ಥವು ಸಂಭವಿಸುವ ದೆನ್ನುವದು ಹೇಳುವಹಾಗಿಲ್ಲ.

ಜಾನಕಿಯು ಮೊದಲಿನ ಆರೇಳು ತಿಂಗಳುಗಳನ್ನು ಸಾಧಾರಣ ಸ್ಥಿತಿಯಲ್ಲಿ ಕಳೆದಳು. ರಘುನಾಥನು ಕೊಡಿಟ್ಟ ಅಲ್ಪದ್ರವ್ಯವು ಆರೇಳು ತಿಂಗಳವರೆಗೆ ಪೂರೈಸಿದ ನಂತರ, ಮೈಮೇಲೆ ಇದ್ದಬಿದ್ದ ಒಂದೆರಡು ಆಭರಣಗಳ

ನ್ನು ಮಾರಿಕೊಂಡು ಮುಂದೆ ನಾಲ್ಕೈದು ತಿಂಗಳು ಕಾಲಹಾಕಿದಳು ಅವೆ ಲ್ಲವೂ ಮುಗಿದನಂತರ ಮಾತ್ರ ಯಾವಬಗೆಯಿಂದ ಜೀವ ಹಿಡಿದುಕೊಂಡು ಇರಬೇಕೆಂಬುದು ಅವಳಿಗೆ ತಿಳಿಯದಾಯಿತು.

ಜಾನಕಿಯು ಮನೆಯ ಎದುರಿನ ಮನೆಯಲ್ಲಿ ಓರ್ವ ಸದ್ಗೃಹಸ್ಥನು ಇರುತ್ತಿದ್ದನು. ಅವನಹೆಸರು ಹನುಮಂತರಾಯ. ಹೆಂಡತಿ ಭಾರತೀ ದೇವಿ ಎನ್ನುವವಳು. ಹಳ್ಳಿಯಊರ ಹೆಣ್ಣುಮಗಳು. ಸ್ವಭಾವವು ಉತ್ತಮ, ದೇ ವಬ್ರಾಹ್ಮಣರಮೇಲೆ ಬಹುವಿಶ್ವಾಸ. ಭಾರತಿ ಜಾನಕಿ ಈರ್ವರೂ ಸಮೀಪ ದಲ್ಲಿರಹತ್ತಿದಮೇಲೆ ಪರಸ್ಪರರಲ್ಲಿ ಸಖ್ಯವು ನೆಲೆಗೊಂಡಿತ್ತು.

ಇಬ್ಬರೂ ಸನಾತನ ಧರ್ಮ ಸಂಸ್ಕೃತಿಯ ಆರ್ಯ ಮಹಿಳೆಯರು. ಇಬ್ಬರಿಗೂ ಪ್ರಚಲಿತ ಪದ್ಧತಿಯ ಪಾಶ್ಚಾತ್ಯದೇಶದ ನವನಾಗರೀಕತೆಯು ಎಳ್ಳಷ್ಟಾದರೂ ಮನಸ್ಸಿಗೆ ಬರುತ್ತಿದ್ದಿಲ್ಲ. ಇಬ್ಬರ ಇರುವಿಕೆಯೂ ಸಾದಾತ ರದ್ದು. ಇಬ್ಬರೂ ತಮ್ಮ ಪವಿತ್ರಪಾತಿವ್ರತ್ಯಧರ್ಮದ್ವಾಸಲುವಾಗಿ ಪರರಿಗೆ ಆ ದರ್ಶ ಭೂತರಾಗಿ ಕಾಣುತ್ತಿದ್ದರು

ರಘುನಾಥನು ಸೆರೆಮನೆಗೆ ಹೋದಮೇಲೆ, ಅಸಹಾಯುಸ್ಥಿತಿಯಲ್ಲಿರು ವ ಜಾನಕಿಗೆ ಸಚ್ಛೀಲ ಭಾರತಿಯದೇಸಹಾಯ. ಭಾರತಿಯು, ನಿರಾಶ್ರಿತಸ್ಥಿ ತಿಯಲ್ಲಿರುವ ಜಾನಕಿಗೆ ಕೈಲಾದಮಟ್ಟಿಗೆ ಮನಮುಟ್ಟಿ ಸಹಾಯಮಾಡು ತ್ತಿದ್ದಳು.

ಒಡಹುಟ್ಟಿದ ಅಕ್ಕನಂತಿರುವ ಇವಳಿಂದಲೇ ಜಾನಕಿಯು, ದೇವರ ಮೇಲೆ ಎಲ್ಲಭಾರಹಾಕಿ, ಒಂದೊಂದು ದಿನವನ್ನು ಒಂದೊಂದು ಯುಗದಂ ತೆ ಕಳೆಯುತ್ತಿದ್ದಳು. ಜಾನಕಿಯು ತನ್ನಕೋಣೆಯನ್ನು ಜೀವದ ಗೆಳತಿಯಾ ದ ಭಾರತಿಯ ಮನೆಯನ್ನೂ ಬಿಟ್ಟು ಎಲ್ಲಿಯೂ ಹೊರ ಹೊರಡುತ್ತಿದ್ದಿಲ್ಲ. ಜಾನಕಿಗೆ ಬೇಕಾದ ಊಟ ಉಡಿಗೆಯ ಎಲ್ಲಸಾಮಾನುಗಳನ್ನು ಪೇಟೆಯಿಂ ದ ಭಾರತಿಯ ಗಂಡ ಹನುಮಂತರಾಯರೇ ತಂದುಕೊಡುತ್ತಿದ್ದರು.

"ಕುಳಿತು ತಿಂದರೆ ಕುಡಿಕೆ ಹೊನ್ನು ಸಾಲದು" ಎಂಬಂತೆ ಜಾನಕಿ ಯ ಹತ್ತಿರ ಇದ್ದ ಹಣವೂ ಮುಗಿಯುತ್ತ ಬಂದಿತು. ಹೊರಗಣ ಆದಾಯ

ವಿಲ್ಲದ ಹತ್ತಿರಇದ್ದ ಹಣದಿಂದ ಎಂದಿಲ್ಲವಾದ ರೊಂದುದಿನ ಕಟ್ಟಾಗಿ ನಿಲ್ಲ ಲೇ ಬೇಕಾಗುತ್ತದೆ.

ಒಂದೆರಡುದಿನಗಳಲ್ಲಿ ಹತ್ತಿರ ಒಂದೂ ದುಡ್ಡು ಇಲ್ಲದಂತಾದಮೇಲೆ, ಏನುತಾನೇ ಮಾಡಬೇಕೆಂಬುದೊಂದು ಕಠಿಣಪ್ರಶ್ನೆಯು ಅವಳಮುಂದೆ ಬಂದು ನಿಲ್ಲಹತ್ತಿತು.

ಇತ್ತಿತ್ತಲಾಗಿ ಜಾನಕಿಯು ದಿನಾಲು ಒಂದೇಸಾರಿ ಊಟಮಾಡಿ ಸಂಜೆಯ ಊಟವನ್ನು ನೀರಿನಮೇಲೆ ತೀರಿಸಿಕೊಂಡು ಮಲಗುತ್ತಿದ್ದಳು. ಈ ವಿಷಯುವನ್ನು ಪ್ರೀತಿಯ ಗೆಳತಿಯುಮುಂದೆಯೂ ಹೇಳುತ್ತಿದ್ದಿಲ್ಲ. ಇದ ರಂತೆ ಮುಂದೆ ತುಸು ದಿವಸಗಳು ಹೋದಮೇಲೆ ಒಂದುಸಾರೆಯ ಅನ್ನಕ್ಕೆ ಕೊರತೆ ಬರಹತ್ತಿತು. ರಘುನಾಥನು ಅಸಹಕಾರದ ದೀಕ್ಷೆಯನ್ನು ತೆಗೆದು ಕೊಂಡಾಗ ಅವನಿಗನುಕೂಲವಾಗಿ ರಾಟಿಯಮೇಲೆ ನೂಲುವಕಲೆಯನ್ನು ಕಲಿತಿದ್ದಳು. ರಘುನಾಥನು ಹೊರಗಿರುವಾಗಲೇ ಎಷ್ಟೋನೂಲು ನೂತಿ ದ್ದಳು ಆನೂಲಿನಿಂದಲೇ ಇಬ್ಬರೂ ತಮ್ಮವರ್ಷದ ಬಟ್ಟೆಯನ್ನು ಮಾಡಿ ಕೊಂಡಿದ್ದರು.

ಅವನು ತುರಂಗಕ್ಕೆ ಹೋದಮೇಲೂ ದಿನಾಲು ತನ್ನಕೆಲಸ ಬೊಗಸೆ ಗಳನ್ನು ತೀರಿಸಿಕೊಂಡು ನೂಲುತ್ತಿದ್ದಳು ಆದರೆ ಪ್ರಾರಂಭದ ವೇಳೆಯಲ್ಲಿ ಅದರಿಂದ ಏನುತಾನೇ ಹೊಟ್ಟೆಗೆ ಸಾಲುವಷ್ಟು ಸಿಗುವದು?

ಮುಂಜಾವಿನಿಂದ ಸಂಜೆಯುವರೆಗೆ ನೂತರೆ ದಿನಾಲು ೨, ೩ ಆಣೆಯ ನೂಲು ಹೊರಡಬೇಕಾದರೆ ಸಾಕು ಬೇಕಾಗುತ್ತಿತ್ತು. ಅಂಥತುಟ್ಟಿಯ ದಿವ ಸಗಳಲ್ಲಿ ೨, ೩ ಆಣೆಯಿಂದ ಹೇಗೆತಾನೆ ಉದರನಿರ್ವಾಹ ಸಾಗುವದು ?

ಭಾರತಿಯ ಮನೆಯ ಪಕ್ಕದಲ್ಲಿಯೇ ಇನ್ನೊಂದು ಕುಟುಂಬದವರು ಇರುತ್ತಿದ್ದರು. ಮನೆಯಲ್ಲಿ ಗಂಡ, ಹೆಂಡತಿ, ಮೂರು ನಾಲ್ಕು ಮಕ್ಕಳು ಗೃ ಹಸ್ಥನ ವಿಧವೆ ತಂಗಿಯೋರ್ವಳು. ಹೀಗೆ ಅವನ ಪರಿವಾರ. ಗೃಹಸ್ಥನು ಕುಟುಂಬ ವತ್ಸಲನು. ತನ್ನ ಬಡತನದ ಸಂಸಾರದಲ್ಲಿ ಕಾಲ ಕಳೆಯುತ್ತಿದ್ದ ನು. ಆ ವಿಧವೆಯ ಹೆಸರು ಗುಂಡವ್ವ. ಓಣಿಯಲ್ಲಿ ನೀರು ನಿಡಿ ಮುಂತಾದ ಕೆಲಸಗಳನ್ನುಮಾಡಿ, ತನ್ನ ಹೊಟ್ಟೆಯ ಖರ್ಚನ್ನು ಹೊರಗೆ ತೆಗೆಯುತ್ತಿ ದ್ದಳು.

ಹತ್ತರ ಇದ್ದ ಎಲ್ಲಹಣವೂ ಹೋದಮೇಲೆ ಜಾನಕಿಯು ಧಾರ್ಣಿ ಪಾರ್ಣಿಯನ್ನು ಮಾಡಬೇಕಾಯಿತು. ಪಾಪ! ಅಸಹಾಯ ಸ್ಥಿತಿಯಲ್ಲಿರುವ ಅಬಲೆಯು ಏನುತಾನೇ ಮಾಡುವಳು?

ಹೀಗೆ ೮, ೧೦ ದಿನಗಳು ಹೋದಮೇಲೆ, ಒಂದು ದಿನ ಸಹಜವಾಗಿ ಗುಂಡವ್ವನ ಬೆಟ್ಟಿಯಾಯಿತು. ಕಲಬುರ್ಗಿಗೆ ಬಂದಮೇಲೆ ಪರಸ್ಪರರಲ್ಲಿ ಗಾಢಪರಚಯವಾಗಿತ್ತು. ಮನೆತನದ ಒಳಸುದ್ದಿಯನ್ನು ಎಂದೂ ಹೊರ ನುಡಿಯದ ಜಾನಕಿಯು ಈ ಹೊತ್ತು ಅವಳಮುಂದೆ ಎಲ್ಲವನ್ನೂಹೇಳಿದಳು ಪರಸ್ಪರರು ಸುಖದುಃಖದ ಸಂಗತಿಯನ್ನು ಹೇಳಿ ಕೇಳಿಕೊಂಡಮೇಲೆ ಗುಂ ಡವ್ವನು ತನ್ನ ಕೆಲಸಗಳಲ್ಲಿ ಜಾನಕಿಯನ್ನು ಪಾಲುಗಾರತಿಯನ್ನಾಗಿ ಮಾಡಿಕೊಂಡಳು.

ಅವಲಕ್ಕಿ ಕುಟ್ಟುವದು, ಹಿಟ್ಟು ಬೀಸುವದು, ಕುಬುಸ ಹೊಲೆಯು ವದು, ಮುಂತಾದ ಮನೆಗೆಲಸಗಳನ್ನು ಗುಂಡವ್ವನು ತೆಗೆದುಕೊಂಡು ಬರ ಬೇಕು. ಜಾನಕಿಯು ಮನೆಯಲ್ಲಿ ಮಾಡಬೇಕು. ಬಂದಕೂಲಿಯಲ್ಲಿ ಸರಿ ಯಾಗಿ ಹಂಚಿಕೊಳ್ಳಬೇಕು. ಈ ಪ್ರಕಾರ ಜಾನಕಿಯು, ಹೊಟ್ಟೆ ಹೊರೆಯ ಹತ್ತಿದಮೇಲೆ ಕೆಲವಂಶದ ಮಟ್ಟಿಗೆ ಹೊಟ್ಟೆಯ ಹಂಬಲ ವೊಂದು ದೂರಾ ದಂತಾಯಿತು. ಮುಂಜಾವಿನಿಂದ ಸಂಜೆಯವರೆಗೆ ತೆರಪಿಲ್ಲದೆ ದುಡಿದರೆ೫, ೬ ಆಣೆಗಳು ಬರುತ್ತಿದ್ದವು. ಅಷ್ಟರಮೇಲೆ ಅವಳು ಎರಡುಹೊತ್ತಿನ ತನ್ನ ಊಟದಖರ್ಚನ್ನು ಸಾಗಿಸುತ್ತಿದ್ದಳು; ಆದರೆ ತಾನಿದ್ದ ಕೋಣೆಯ ಬಾಡಿಗೆ ಗೆಮಾತ್ರ ಕೊರತೆ ಬರುತ್ತಿತ್ತು. ಹತ್ತರ ಹಣವಿದ್ದಾಗ ತಿಂಗಳೊಂದಕ್ಕೆ ಸರಿಯಾಗಿ ಬಾಡಿಗೆಯನ್ನು ಕೊಡುತ್ತಿದ್ದಳು. ಮುಂದೆ, ಒಂದು ಊಟ ಒಂ ದು ಉಪವಾಸದಿಂದ ಕಾಲ ಕಳೆಯಹತ್ತಿದಮೇಲೆ ಅವಳಿಂದ ಸರಿಯಾಗಿ ಬಾಡಿಗೆ ಕೊಡುವ ದಾಗಲಿಲ್ಲ. ಹೀಗಾಗಿ ೩, ೪ ತಿಂಗಳ ಬಾಡಿಗೆ ನಿಂತಿತು.

ದುಡ್ಡಿಲ್ಲದದರಿದ್ರರನಿಜವು, ದೈವುಳ್ಳ ದುಡ್ಡಿನವರಿಗೆ, ಹೇಗಾತಾನೆ ತಿಳಿ ಯುವದು. ಮನೆಯ ಎಜಮಾನನು ಬಾಡಿಗೆಯ ವಸೂಲಿಗಾಗಿ ಮನಬಂ ದಂತೆ ಮಾತಾಡ ಹತ್ತಿದನು. ಒಂದೆರಡು ತಿಂಗಳ ತಡೆದದ್ದೇಹೆಚ್ಚು. ೩, ೪ ತಿಂಗಳು ಸುಮ್ಮನೆ ಇರುವನೇ ? ಅವಳ ದುರ್ದೈವ !

ದುಡ್ಡಿದ್ದ ಮನುಷ್ಯನು ದಾರಿದ್ರ್ಯಕ್ಕೆ ಬರುತ್ತಲೆ, ಪರಿಸ್ಥಿತಿಯದ್ವಿಧಾರೆಯ ಕತ್ತರಿಯ ಇಕ್ಕಟ್ಟಿನಲ್ಲಿ ಸಿಕ್ಕಂತಾಗಿ, ಅಸಹಾಯಸ್ಥಿತಿಯಲ್ಲಿಬರುತ್ತಲೆ "ಬಲವಿಲ್ಲದಾಗ ನೆಲವೆದ್ದು ಬಡೆಯುತ್ತದೆ" ಎನ್ನುವಂತೆ ನಾನಾಬಗೆಯ ಜನರಿಂದ ನಾನಾರೀತಿಯ ಸಂಕಟಗಳು ಬಂದೊದಗುತ್ತವೆ.

ಜಾನಕಿಯಂಥ ಪತಿವ್ರತೆಯ ಪಾದಸೋಂಕಲುಸಹ ಯೋಗ್ಯತೆ ಇಲ್ಲದ ಮನೆಯೊಡೆಯನ ಕ್ಷುಲ್ಲಕ ಆಳು, ಕ್ಷುಲ್ಲಕ ಬಾಡಿಗೆಯ ಹಣಕ್ಕಾಗಿ, ಕ್ಷುಲ್ಲಕ ಮಾತಾಡಹತ್ತಿದನು.

ಅವನ ಕೆಟ್ಟಮಾತುಗಳು, ಅವಳ ಕಿವಿಯಲ್ಲಿ ಕಾದ ಕಬ್ಬಿಣದ ಸಲಾಕಿಯಂತೆ ಪ್ರವೇಶಿಸುತ್ತಿದ್ದವು. ಈ ಎಲ್ಲಬಗೆಯ ಅವಮಾನವನ್ನು ಅವಳು ಸಹಿಸದೆ ಗತ್ಯಂತರವಿದ್ದಿಲ್ಲ.

ಜಾನಕಿಯು, ಜಗತ್ತಿನ ಸಂಕಟ ಪರಂಪರೆಯ ಸಹವಾಸದಲ್ಲಿ ಸಿಕ್ಕುಬಿದ್ದ ಅಬಲೆಯು, ಸಪ್ಪಳಿಲ್ಲದೆ ಕೆಸರಿನಲ್ಲಿ ಸಿಗಬಿದ್ದ ಸಭ್ಯ ಆಕಳು, ಬಲುಮೆ ಮಾಡುವ ಬೇಡನ ಬಲೆಯಲ್ಲಿ ಸಿಕ್ಕುಬಿದ್ದ ಬಡ ಜಿಂಕೆಯು, ಯಾವ ಸಿಂಹದ ಗರ್ಜನೆಯಿಂದ, ಸಮಸ್ತ ಶ್ವಾಪದಗಳು ಸದ್ದಿಲ್ಲದೆ ಸುಮ್ಮನೆ ಓಡುವವೋ, ಅದೇಸಿಂಹವು, ತೆಗ್ಗಿನಲ್ಲಿ ಬಿದ್ದಾಗ ನರಿಯಂಥ ಕ್ಷುದ್ರಪ್ರಾಣಿಯಿಂದ ಸಹ ನಡುಗಬೇಕಾಗುತ್ತದೆ.

ಜಾನಕಿಯು ತನ್ನ ಪಾತಿವ್ರತ್ಯಧರ್ಮದಿಂದ ಪರರಿಗೆ ಸಿಂಹಿಣಿ ಯಂತಿದ್ದರೂ, ಪ್ರಪಂಚದ ಪರಿಸ್ಥಿತಿಯಲ್ಲಿ ಸಿಕ್ಕು ಪರರಿಂದ ಪರಿಪರಿಯ ಮಾತು ಆಡಿಸಿಕೊಳ್ಳ ಬೇಕಾಗುತಿತ್ತು.

ಕಡೆಗೊಂದುದಿನ ಮನೆಯೊಡೆಯನು ಜಾನಕಿಗೆ ಮನೆ ಬಿಡಬೇಕಂಬುದಾಗಿ ನೋಟೀಸ ಕೊಡಿಸಿ, ಜಪ್ತಿಯ ಜವಾನನ್ನು ಕರೆದುಕೊಂಡು ಬಂದು ಮನೆಯೊಳಗಿನ ಎಲ್ಲಸಾಮಾನುಗಳನ್ನು ಹೊರಗೆ ಒಗಿಸಿದನು.

ಏನುತಾನೆ ಮಾಡುವಳು! ಬಡಪ್ರಾಣಿ ಜಾನಕಿಯು ಮನೆಯ ಮುಂದಿನ ಕಟ್ಟೆಯಮೇಲೆ ನಿಂತುಕೊಂಡು ಮುಳು ಮುಳು ಅಳ ಹತ್ತಿದಳು.

❖ ❖ ❖ ❖ ❖ ❖ ❖ ❖

ಅಸಹಕಾರದ ಚಲನ ವಲನದಲ್ಲಿ ಕೆಲಸಮಾಡುತ್ತಿರುವ ವೇಳೆಯಲ್ಲಿ, ನೂರಾರುಜನರು ರಘುನಾಥನ ಬೆನ್ನುಬಿಡದೆ ತಿರುಗಾಡುತ್ತಿದ್ದರು. ವರ್ತಮಾನ ಪತ್ರದವರಂತೂ ಅಭಿನಂದನ ಪರ ಸುರಿ ಮಳೆಯನ್ನು ಸುರಿಸುತ್ತಿದ್ದರು. ಆದರೆ ಅದೆ ರಘುನಾಥನು, ತುರಂಗ ಪ್ರವೇಶಮಾಡಿ ಒಂದುವರ್ಷವಾಗುತ್ತಬಂದಿತು. ಅವನ ಹಿಂದೆ ಅವನ ಕುಟುಂಬದ ಸ್ಥಿತಿ ಏನಾಗಿರುವದೆಂದು ಯಾರೂ ಕೇಳಬರಲಿಲ್ಲ.

ಅಲೌಕಿಕ ಸ್ವಾರ್ಥತ್ಯಾಗ ಉಜ್ವಲ ರಾಷ್ಟ್ರಭಕ್ತಿಯ ಸಲುವಾಗಿ, ಅವನ ಗುಣ ಗೌರವಕ್ಕೆ ವೃತ್ತ ಪತ್ರಗಳ ಕಂಬಕ್ಕೆ ಕಂಬವನ್ನು ತುಂಬಿ ಬಿಡುವ ವೃತ್ತಪತ್ರಕಾರರು ಅವನು ಹೋದಮೇಲೆ ಅವನ ಮನೆತನಸ್ಥಿತಿ ಏನಾಗಿರುವದೆಂದು ತಿಳಿದು ಕೊಳ್ಳಲೂ ಒಬ್ಬನನ್ನಾದರೂ ಪ್ರತಿನಿಧಿಯನ್ನು ಕಳುಹಲಿಲ್ಲ.

ಜಾನಕಿಯ ಮನೆಯೊಳಗಿನ ಸಾಮಾನುಗಳನ್ನು ಮನೆಯ ಎಜಮಾನನ ಮನುಷ್ಯನೂ ಜಪ್ತಿಯ ಸಿಪಾಯಿಯು ಹೊರಕ್ಕೆಗೆದು ಒಗೆಯ ಹತ್ತಿದರು. ನಡೆದ ಗದ್ದಲು ನೋಡಲು ಓಣಿಯೊಳಗಿನ ಹತ್ತುಹದಿನೈದು ಜನರು ಸುತ್ತಲೂ ನೆರೆದಿದ್ದರು. ಜನರ ಒದರಾಟಕೇಳಿ ಹನುಮಂತ ರಾಯರೂ ಒಳಮನೆಯಿಂದ ಲಗುಬಗೆಯಾಗಿ ಹೊರಗೆ ಬಂದರು. ಸುಮ್ಮನೆ ಸಾಮಾನ ಕಿತ್ತೊಗಿಯುವದು ನೋಡಿ ಅವರಿಗೂ ಸಿಟ್ಟು ಬಂದಿತು.

ತಿಂಗಳೊಂದಕ್ಕೆ ನೂರಿನ್ನೂರು ರೂಪಾಯಿ ಗಳಿಸುವ ಸುಶಿಕ್ಷಿತ ತರುಣನು, ದೇಶಹಿತದ ಧ್ಯೇಯವನ್ನು ಮುಂದಿಟ್ಟುಕೊಂಡು ಕಾರಾಗ್ರಹಕ್ಕೆ ಹೋಗಿರಲಾಗಿ, ಅವನಹಿಂದೆ ಅವನಹೆಂಡತಿಯು, ಯಾರೂ ದಿಕ್ಕಿಲ್ಲದವಳಂತೆ, ಒಬ್ಬಳೇ ಒಬ್ಬಳು ಕರುಣಾಜನಕ ಸ್ಥಿತಿಯಲ್ಲಿರುವದನ್ನು ಕಂಡು, ಯಾರಿಗೆಆನೆ ಕೆಡಕೆನಿಸಲಿಕ್ಕಿಲ್ಲ.

ಹೊರಗಿನ ಕಟ್ಟೆಯಮೇಲೆ ಒಂದು ಕೊನೆಯಲ್ಲಿ ಹರುಕು ಮಡಿಸೀರಿಯನ್ನುಟ್ಟುಕೊಂಡು ಹಲ್ಲಿಗೆ ಅರಿವೆಕಚ್ಚಿಕೊಂಡು ಹೀನಸ್ಥಿತಿಯಲ್ಲಿ ದುಃಖಿಸುತ್ತ ನಿಂತಿರುವ ಜಾನಕಿಯನ್ನುನೋಡಿ ಎಲ್ಲರಕಣ್ಣೊಳಗೂನೀರುಬಂದವು

ಕೂಡಿದ ಜನರಲ್ಲಿ ಮೂವರು ನಾಲ್ವರು ಉದಾರ ಮನಸ್ಸಿನ ಸಜ್ಜನರೂ ಇದ್ದರು. ಅವರಿಗಂತೂ ಜಾನಕಿಯ ಈ ದುರ್ದಶೆಯನ್ನು ನೋಡಿ ಬಹಳೇ ಖೇದವೆನಿಸಿತು. ಆ ಮೂವರು ನಾಲ್ವರೂ ಹನುಮಂತರಾಯರೂ ಕೂಡಿ, ತಮ್ಮ ತಮ್ಮೊಳಗೆ ಪಟ್ಟಿಮಾಡಿಕೊಂಡು, ಮೂರು ತಿಂಗಳ ಬಾಡಿಗೆಯ ಹಣವನ್ನು ಆಗಲೇತಂದು, ಜಪ್ತೀಸಿಪಾಯಿಃಯಸ್ವಾಧೀನಪಡಿಸಿ ಪಾವತೀ ತೆಗೆದುಕೊಂಡರು. ಉಳಿದೊಂದು ತಿಂಗಳ ಬಾಡಿಗೆಗಾಗಿ ಹದಿನೈದು ದಿವಸದ ಅವಧೀ ತೆಗೆದುಕೊಂಡರು. ಮುಂದಾದರೂ ಬಾಡಿಗೆಯ ಹಣವನ್ನು ತಾವೇ ಕೊಡುವೆ ವೆಂಬದಾಗಿಯೂ ಆ ಹೆಣ್ಣುಮಗಳಿಗೆ ಯಾವಬಗೆಯ ತೊಂದರೆಕೊಡಬಾರದೆಂಬದಾಗಿಯೂ ಮನೆ ಎಜಮಾನನ ಮನುಷ್ಯನಿಗೆ ಒತ್ತಾಯವಾಗಿ ಹೇಳಿದರು.

ಹನುಮಂತರಾಯರು ಇನ್ನುಳಿದ ಸದ್ಗ್ರಹಸ್ಥರೂ ಕೂಡಿ, ರಘುನಾಥನು ಕಾರಾಗ್ರುಹದಿಂದ ಬಿಡುಗಡೆಹೊಂದಿ ಬರುವವರೆಗೆ, ಮನೆಯ ಬಾಡಿಯ ಹಣದನ್ನು ತಾವೇಕೊಡಬೇಕೆಂಬದಾಗಿ ನಿರ್ಧರಿಸಿ ಕೊಂಡರು.

ಆ ಮನೆಗಳ ಸದ್ಯದ ಒಡೆಯನು ಒಬ್ಬ ಸುಧಾರಕ ತರುಣನು- ಅವನು ಅದೇ ಓಣಿಯಲ್ಲೊಂದು ತನ್ನ ಭವ್ಯಮನೆಯಲ್ಲಿರುತ್ತಿದ್ದನು. ಅವನ ಒಡೆತನದ ಬೇರೆ ಕೆಲವು ಮನೆಗಳೂ ಬೇರೆ ಓಣಿಯಲ್ಲಿದ್ದವು. ಮನೆಗಳ ಪೂರ್ವದ ಎಜಮಾನನು ಕೆಲವು ದಿನಗಳ ಹಿಂದೆ ಮರಣಹೊಂದಿದ್ದು, ಅವನ ಒಡತನದ ಆಸ್ಥಳಕ್ಕೆ ಈ ಹೊಸಮಾದರೀಯ ತರುಣನು ಬಂದಿದ್ದನು. ತರುಣನ ಹೆಸರು ನ ಟೇ ಶ.

ನಟೇಶನು ಶ್ರೀಮಾನ್ ತಂದೆಯ ಒಬ್ಬನೇ ಒಬ್ಬಮಗನು ಅನಾಯಾಸ ಪತ್ತರ ಸಾಕಷ್ಟುಹಣ. ಹೊಸತರದ ಪಾಶ್ಚಾತ್ಯಸುಧಾರಣೆ. ಶ್ಯಾಮನಂಥ ಸ್ವಾರ್ಥೀಸಲುಹೆಗಾರ. ಅಂದಮೇಲೆ ಕೇಳುವದೇನು? ಅವನ ವಿಲಾಸವು ಪರಮಾವಧಿಗೇರಿತ್ತು. ಬಹುಶಃ ಅವನು ದುರ್ವ್ಯಸನದಲ್ಲಿಯೇ ದಿನಗಳೆಯುತಿದ್ದನು.

ಮೇಲ್ಕಂಡ ಮಾತಿಗೆ ನಾಲ್ಕೈದು ದಿನಗಳಾಗಿರಬಹುದು. ಒಂದುದಿನ ಗುಂಡವ್ವನು ನಿತ್ಯದಂತೆ ಕುಟ್ಟಬೀಸಲು ಕಾಳುತಂದುಕೊಟ್ಟು, ಮರುಳಿ ಮ

ನೆಗೆ ಹೋಗುವಾಗ, ಏನೋ ನೆನಪುಮಾಡಿಕೊಂಡವಳಂತೆಮಾಡಿ "ತಂಗೀ! ನಿನ್ನನ್ನು ಈ ಮನೆಯ ಧನಿಯರು ಕರೆಕಳುಹಿದ್ದರು. ಹೇಳಲು ಮರೆಯುತ್ತಿದ್ದೆನು ನೋಡು. 'ಮನೆಯ ಎಜಮಾನರು ಕರೆದರು' ಗುಂಡವ್ವನ ಈ ಮಾತುಗಳನ್ನು ಕೇಳಿ ಜಾನಕಿಯ ಎದೆಯಲ್ಲಿ ಬಾಣ ಬಡಿದಂತಾಯಿತು. ಅವಳು "ಅಕ್ಕಾ! ನನ್ನನ್ನೇಕೆ ಕರೆದರು ಈಗ ನಾಲ್ಕುದಿನಗಳಹಿಂದೆಯೇ ಬಾಡಿಗೆಯ ಹಣವು ಸಲ್ಲಿರುವದಿಲ್ಲವೇ?" ಎಂದಳು.

ಗುಂಡವ್ವ— ಹಾಗಲ್ಲ; ಮನೆಯ ಧನಿಯರು ಜಾನಕೀ! ಒಳ್ಳೇ ಗೃಹಸ್ಥರಿರುವರು. ನಿನ್ನ ನಿಜಸಂಗತಿಯು ಅವರಿಗೆ ಇದುವರೆಗೆ ತಿಳಿದಿದ್ದಿಲ್ಲ. ಆದ್ದರಿಂದಲೇ ನೋಟೀಸ್ ಕೊಡಿಸಿ ಮನೆಯೊಳಗಣ ಸಾಮಾನ ಹೊರಗೆ ಕಿತ್ತೊಗೆಯುವ ಅಧಿಕಾರವನ್ನು ಅಮುಷ್ಟ ಸೇವಕನಿಗೆ ಕೊಟ್ಟಿದ್ದರು. ಈಗ ನಿನ್ನ ನಿಜಸಂಗತಿಯು ತಿಳಿದದೆ, ಅವರಿಗೂ ಬಹಳ ಅಸಮಾಧಾನವಾಗಿದೆ. ನಿನಗೆ ಧೈರ್ಯ ಕೊಡುವದಕ್ಕಾಗಿಯೇ ನಿನ್ನನ್ನು ತಮ್ಮ ಮನೆಗೆ ಕರೆಕಳುಹಿದಂತೆ ಕಾಣುತ್ತದೆ.

ಜಾನಕಿ— ಹಾಗಾದರೆ ನಾಳೆಮುಂಜಾನೆ ಬರುವೆನೆಂದು ಹೇಳು. ಈಗ ಹೋಗಲು ಹೊತ್ತಿಲ್ಲಿರುವದು.

ಗುಂಡವ್ವ— ಎಂತಹ ದಡ್ಡಹುಡಿಗೆ ನೀನು! ನಿನ್ನಸಲುವಾಗಿ ಅವರು ಮುಂಜಾನೆ ಕಾದುಕೊಂಡು ಕುಳಿತುಕೊಳ್ಳಬೇಕೇನು? ಅವರಿಗೆ ನೂರಾರು ಕೆಲಸ. ಎಷ್ಟೋಜನರು ಯಾವಾಗಲೂ ಬೆನ್ನುಹತ್ತಿರುತ್ತಾರೆ. ತಟ್ಟನೆ ಹೋಗಿ ಬೆಟ್ಟಿಯಾಗಿಬಾ. ಅಂದರಾಯಿತು.

ಜಾನಕಿ—ಅಕ್ಕ! ಒಬ್ಬಳೇ ಹೋಗಲು, ಪರಪುರುಷರ ಸಂಗಡ ಮಾತಾಡಲು ನನಗೆ ಭಯವೆನಿಸುತ್ತದೆ. ನೀವೂ ಬರ್ರಿ, ಇಬ್ಬರೂಕೂಡಿ ಹೋಗಿ ಬರೋಣ.

ಗುಂಡವ್ವ— ನಾನು ಯಾತಕ್ಕೆ? ನಾನೇಕೆಬರಲಿ ನೀ ನೊ ಬ್ಬ ಳೇ ಹೊದರೇನಾಗುತ್ತದೆ?

ಜಾನಕಿ— ಇರುವಲ್ಲದೇಕೆ ನಡೆಯಿರಿ. ಸುಮ್ಮನೆ ಇಬ್ಬರೂಕೂಡಿ ಹೋಗಿಬರೋಣ.

ಗುಂಡವ್ವ— ಎಂತಹ ಹುಡಿಗೆ ಇವಳು! ನಡೆ, ಬರುವೆನು.

ಮುಂದೆ ತುಸು ಹೊತ್ತಿನಮೇಲೆ ಇಬ್ಬರೂಕೂಡಿ, ನಟೇಶನಮನೆಗೆ ಹೋದರು. ನಟೇಶನು ಅಟ್ಟದಮೇಲಿರುವನೆಂದು ಮನುಷ್ಯನು ಹೇಳಿದನು ಅವನನ್ನು ಹಿಂಬಾಲಿಸಿ ಇಬ್ಬರೂ ಅವನಿರುವ ಕೋಣೆಗೆ ಬಂದರು.

ನಟೇಶನು ಮಖಮಲಯ ಗವಸಣಿಕೆಯನ್ನು ಹಾಕಿದ ಒಂದು ಆರಾಮು ಕುರ್ಚಿಯಮೇಲೆ ಸಿಗರೇಟ ಸೇದುತ್ತ ಕುಳಿತುಕೊಂಡಿದ್ದನು. ಆವೇಳೆಯಲ್ಲಿ ಅವನನ್ನುಬಿಟ್ಟು ಆ ಕೋಣೆಯಲ್ಲಿ ಯಾರೂ ಇದ್ದಿಲ್ಲ.

ನಟೇಶನೆದುರಿಗೆ ಬರುತಲೆ ಜಾನಕಿಯು, ಮೈತುಂಬ ಸೆರಗುಹೊತ್ತುಕೊಂಡು, ತಲೆಬಾಗಿ ನಿಂತುಕೊಂಡಳು. ಹೊಗೆಸೊಪ್ಪಿನ ಹೊಗೆಯನ್ನು ಬಿಡುತ್ತಾ ನಟೇಶನು "ಗುಂಡಕ್ಕಾ! ಮೊನ್ನೆ ನಮ್ಮ ಮನುಷ್ಯನು ಬಾಡಿಗೆಯಸಲುವಾಗಿ ಜಪ್ತಿತಂದಿದ್ದು ಇದೇ ಹೆಣ್ಣುಮಗಳ ಸಲುವಾಗಿ ಏನು?

ಗುಂಡವ್ವ— ಹೌದು, ಇದೇಹುಡಿಗೆಯ ಸಲುವಾಗಿ, ಆ ನಿಮ್ಮ ಮೂರ್ಖ ಮನುಷ್ಯನಲ್ಲಿ ಸ್ವಲ್ಪಾದರೂ ಮನುಷ್ಯತ್ವಪಿಲ್ಲ.

ನಟೇಶ— ಈ ಹೆಣ್ಣುಮಗಳ ವಿಷಯವಾಗಿ ನನಗೆ ಕಿಂಚಿತ್ತಾದರೂ ಗೊತ್ತಿರಲಿಲ್ಲ, ಗಂಡನು ತುರಂಗದಲ್ಲಿ ಬಿದ್ದ ಚಿಂತೆಯಿಂದ, ಪಾಪ! ಸೊರಗಿಕೊರಗಿ ಕೃಶಳಾಗಿರುವಳು. ತಂಗೀ, ಕೊಂಚವಾದರೂ ವಿಷಾದ ತಿಳಿಯಕೂಡದು. ನಿನ್ನಸಂಗತಿಯು ಮೊದಲೇ ಗೊತ್ತಿತ್ತೆಂದರೆ, ನಿನ್ನ ಕಡೆಗೆ ಮನುಷ್ಯನನ್ನೇ ಕಳುಹುತ್ತಿದ್ದಿಲ್ಲ. ಎಲ್ಲಿ ಹೋಗುತ್ತಿತ್ತು ಬಾಡಿಗೆಯು. ಸಾವಕಾಶ ಬರುತ್ತಿತ್ತು.

ತನ್ನಮಾತಿಗೆ ಜಾನಕಿಯು ಏನಾದರೂ ಉತ್ತರ ಕೊಡಬಹುದು, ಅವಳ ಸುಂದರ ಮೊಗವು ತನ್ನದೃಷ್ಟಿಗೆ ಬೀಳಬಹುದೆಂದು ನಟೇಶನು ಊಹಿಸಿದ್ದನು. ಆದರೆ ತೆಗ್ಗಿಸಿದ ಮೋರೆಯನ್ನು ಅವಳು ಮೇಲೆತ್ತಲಿಲ್ಲ. ಪುನ: ಹೊಗೆಸೊಪ್ಪಿನ ಹೊಗೆಯನ್ನು ದುಂದಾಗಿಬಿಡುತ್ತ, "ನಿಮ್ಮಕಡೆ ಬಾಡಿಗೆಯು ಇನ್ನೂ ಎಷ್ಟು ಉಳಿದಿರುವದು." ಈಸಾರೆ ಉತ್ತರಕೊಡಲು ಅವಳು ಮೋರೆಯನ್ನು ಮೇಲೆತ್ತಲೇಬೇಕಾಯಿತು. ಅವಳು ಮೋರೆ ಎತ್ತುತಲೆ ಬಿಡುಗಣ್ಣಿನಿಂದ ಅವಳ ಮೋರೆಯನ್ನು ನೋಡಹತ್ತಿದನು.

ಜಾನಕಿ— ಇನ್ನೊಂದು ತಿಂಗಳ ಬಾಡಿಗೆಯನ್ನಷ್ಟೇ ಕೊಡಬೇಕಾಗಿ ರುವದಾಗಿ ಕಾಣುತ್ತದೆ, ಎಂದು ಉತ್ತರಕೊಟ್ಟು ಕೂಡಲೆ ಎತ್ತಿದ ಮೋರೆಯನ್ನು ಕೆಳಗಿಳಿಸಿದಳು.

"ಗಾಬರಿಗೊಳ್ಳಬೇಡ" ಇಷ್ಟೊಂದುಶಬ್ದ ಉಚ್ಚರಿಸಬೇಕಾದರೆ ನಟೇಶನಿಗೆ ಸಾಕು ಬೇಕಾಯಿತು.

ಜಾನಕಿಯು ಕೋಣೆಯಿಂದ ಹೊರಗೆ ಬಂದಳು. ಗುಂಡವ್ವನಾದರೂ ಅವಳನ್ನು ಹಿಂಬಾಲಿಸಿ ಹೊರಗೆಬಂದಳು. ಗುಂಡವ್ವನಿಗೆ ನಟೇಶನ ಮನೆತನದ ಪರಿಚಯು ಚನ್ನಾಗಿತ್ತು. ಕುಟ್ಟುವದು, ಬೀಸುವದು, ಮೊದಲಾದ ಕೆಲಸಗಳು ಬಹುತರ ನಟೇಶನ ಮನಿಯವೇ ಇರುತ್ತಿದ್ದವು. ಆದ್ದರಿಂದ ದಿನಾಲು ಎರಡು ಮೂರುಸಲ ಅವಳಿಗೆ ಅವರಮನೆಗೆ ಹೋಗುವ ಭಾಗ ಬೀಳುತ್ತಿತ್ತು.

ಮುಗಿಲಿನಲ್ಲಿ ಕೋಲು ಮಿಂಚು ಮಿಂಚಿ ನಿಮಿಷಾರ್ಧದಲ್ಲಿ ಮಾಯವಾಗುವಂತೆ, ಜಾನಕಿಯಾದರೂ ತನ್ನಸುಂದರ ಮುಖಕಮಲವನ್ನು ನಟೇಶನಿಗೆ ತೋರಿಸಿ ಕೂಡಲೆ ಕೆಳಗಿಳಿಸಿದ್ದಳು. ಒಂದೇನಿಮಿಷ, ಆ ಒಂದುನಿಮಿಷವೇ ಘಾತಮಾಡಿತು.

ಜಾನಕಿಯ ಸುಸ್ವರೂಪವನ್ನು ನಟೇಶನು ಒಂದುನಿಮಿಷಾರ್ಧದಷ್ಟೇ ನೋಡಿದ್ದನು.

ಅಷ್ಟೇ ಹೊತ್ತಿನಲ್ಲಿ ಅವಳ ಸೌಂದರ್ಯಕ್ಕೆ ಪೂರ್ಣ ಮನಸೋತನು. ಅವನ ಹೃದಯ ವೃತ್ತಿಯುಅವಳಲಾವಣ್ಯದಿಂದ,ಅವನವಶಮೀರಿತು.ಅವನಿಗೆ ಅವಳ ಹುಚ್ಚೇ ಹಿಡಿದಂತಾಯಿತು. ದಿನ ದಿನಕ್ಕೆ ಅವಳವಿಷಯದ ಅಭಿಲಾಷೆಯು ಹೆಚ್ಚುತ್ತಾಹೋಯಿತು. ಅವನಿಗೆ ಎರಡನೆಯ ವಿಷಯವೇ ತಿಳಿಯದಂತಾಯಿತು. ಜಾನಕಿಯು ಅಲ್ಲಿ ಇಲ್ಲದಂತಾಗುತಲೆ ಅವನಿಗೆ ಎಲ್ಲ ಜಗತ್ತೇ ಶೂನ್ಯವಾಗಿ ಕಾಣಹತ್ತಿತು. ಹಗಲಿರಳು ಅವಳ ಸುಂದರ ಮುಖವು ಅವನ ಕಣ್ಣಿಗೆ ಕಟ್ಟಿದಂತಾಯಿತು.

ಜಾನಕಿಯ ದಿವ್ಯಲಾವಣ್ಯದ ಉಪಭೋಗವು ಒಂದುಸಾರೆಯಾದ

ರೂ [illegible]ೇಕೆಂಬ ದುರಿಚ್ಛೆಯು ದುಷ್ಟ ನಟೇಶನಲ್ಲಿ ಉದ್ಭವಿಸಿ ದಿನ ದಿನಕ್ಕೆ ಹೆಚ್ಚಾಗ ಹತ್ತಿತು

ನೀಚ ಮನುಷ್ಯರು ಪರಸ್ತ್ರೀಯರನ್ನು ತಾಯಿ ತಂಗಿಯರೆಂದು ಭಾವಿಸದೆ, ಭೋಗ್ಯದ ವಸ್ತುವೆಂದು ಭಾವಿಸಿ, ತಮ್ಮದುಷ್ಟ ಪಶುವಾಸನೆಯನ್ನು ತೃಪ್ತಿಗೊಳಿಸಲೋಸುಗ ಮನೆತನದ ರೂಪವತಿಯರಾದ ಹೆಂಗಸರನ್ನು ಮೋಸಗೊಳಿಸಿ ಅವರ ಮರ್ಯಾದೆ ಗೇಡುಮಾಡುವ ಅಸುರೀ ವೃತ್ತಿಗೆ ಲಾಂಛನವೇಸರಿ

ನಟೇಶನು ಜಾನಕಿಯ ಸೌಂದರ್ಯದ ಸೊಬಗನ್ನು ಒಂದು ದಿನವಾದರೂ ಸವಿಯಲೇ ಬೇಕೆಂದು, ಕುಟಿಲಕಾಗಸ್ತಿನ ರಚಿಸಿ ತನ್ನಹಸ್ತಕನಾದ ಶಾಮನನ್ನು ಅದರಮೇಲೆ ನೇಮಿಸಿದನು.

ಒಬ್ಬನೇ ಶಾಮನಿಂದ ಕೆಲಸವು ಕೊನೆಗಾಣದೆಂದು ನೆನಿಸಿ ಅತಿ ಪರಿಚಯದವಳಾದ ಗುಂಡವ್ವನಿಗೆ ಚೆನ್ನಾಗಿಕೈಬೆಚ್ಚಗೆಮಾಡಿ, ಅವಳನ್ನುತನ್ನ ಕಾರಸ್ಥಾನದಲ್ಲಿ ಕಲೆಯಿಸಿಕೊಂಡು, ಶಾಮನಸಹಾಯಕ್ಕಾಗಿ ನೇಮಿಸಿದನು

ಗುಂಡವ್ವನಿಗೂ ಜಾನಕಿಗೂ ನಿಕಟಪರಿಚಯ ಇರುವದೆಂದುತಿಳಿದ ಆ ಧೂರ್ತನಟೇಶನು, ಅವಳನ್ನೊಂದುರಾತ್ರಿ ತನ್ನಮನೆಗೆ ಕರೆದುಕೊಂಡು ಬರಬೇಕೆಂಬದಾಗಿ ಕೈತುಂಬ ಹಣಕೊಟ್ಟು ಮನ ಒಲಿಸಿಕೊಂಡು ಮದಲನೇ ಈ ಕೆಲಸವನ್ನು ಅವಳಿಗೆ ಒಪ್ಪಿಸಿದನು.

✣ ✣ ✣ ✣ ✣ ✣ ✣ ✣

ಮುಂಜಾವಿನ ೭ ಗಂಟೆಯು. ಜಾನಕಿಯು ಕೈಯಲ್ಲೊಂದು ಪತ್ರಹಿಡಿದು ಓದುತ್ತಿದ್ದಳು. ಅವಳು ಅಷ್ಟೊಂದು ಇಂಗ್ರೇಜಿಯನ್ನುಕಲಿಯದಿದ್ದರೂ ಗಂಡನ ಶಿಕ್ಷಣದಿಂದ ಓದಲು ಬರೆಯಲು ಚೆನ್ನಾಗಿಬರುತ್ತಿತ್ತು.

ಪತ್ರ ಓದುವ ವೇಳೆಯಲ್ಲಿ ಅವಳಮೋರೆಯಮೇಲೆ ನಾನಾಬಗೆಯ ಚಿನ್ಹವು ಕಾಣುತ್ತಿತ್ತು. ಮೋರೆಯು ಕೆಂಪೇರುತ್ತಿತ್ತು. ಹುಬ್ಬುಗಳು ಗಂಟಿಕ್ಕುತ್ತಿದ್ದವು ಹಲ್ಲುಗಳು ಕೆಳದುಟಿಯನ್ನು ಕಚ್ಚುತ್ತಿದ್ದವು. ಹಣೆಯಮೇಲೆ ಪರಸ್ಪರ ವಿರೋಧಿ ರೇಷೆಯು ಗಡುತರವಾದ ಗೀಟು ಬೀಳುತಿತ್ತು . ಮೋ

ಯನ್ನು ನೋಡುತಲೆ, ಯಾವುದೋ ಘನತರ ವಿಚಾರದಿಂದ ಅವಳ ಮನಸ್ಸು ಅಲ್ಲೋಲ ಕಲ್ಲೋಲ ವಾದಂತೆ ಕಂಡು ಬರುತ್ತಿತ್ತು.

ಪತ್ರುವನ್ನು ಕೊನೆಯವರೆಗೆ ಓದಿದಮೇಲೆ ಅವಳಕಣ್ಣೊಳಗಿಂದ, ತಟ ತಟ ನೀರು ಹನಿಗಳು ಉದುರಿದವು. ಕೂಡಲೆ ಮೊದಲಿನಂತೆ ಗಂಭೀರ ಮುಖಮುದ್ರೆಯಾಯಿತು. ಸಿಟ್ಟಿನಿಂದ ಕೈಯಲ್ಲಿಯ ಪತ್ರವನ್ನು ನೂರೆಂಟು ತುಂಡಾಗುವಹಾಗೆ ಚರಚರಹರಿದು ನೆಲದಮೇಲೆ ಚೆಲ್ಲಿ, ತಡಿಯದೆ ಎದ್ದು ನಿಂತು ಕಾಲಿನಿಂದ ತುಳಿದಳು.

ಆಮೇಲೆ ಅವಳು ಗೂಟಕ್ಕೆ ತಗುಲಿಸಿದ ಪತಿಯು ಭಾವಚಿತ್ರವನ್ನು ಕೈಯಲ್ಲಿ ತೆಗದುಕೊಂಡು, ಅದರಮೇಲೆ ಅಶ್ರುಮಣಿಯ ಮಾಲೆಯನ್ನು ಹಾಕಹತ್ತಿದಳು. ನೋಡುತ್ತ ನೋಡುತ್ತ ಪತಿಯು ಪ್ರತಿರೂಪದೊಳಗೆ ಏಕರೂಪವಾಗಿ ಹೋದಳು.

ಪ್ರಿಯ, ವಾಚಕರೇ! ಆ ಪತ್ರವು ಯಾರದಿರಬಹುದು? ಜಾನಕಿಯ ಹೃದಯಕ್ಕೆ ಬಲವಾಗಿ ಆಘಾತವಾಡಿ ಅವಳನ್ನು ಅಳಲುಪಕ್ರಮಿಸಿದ ಯಾವ ಸಂಗತಿಯು ಅದರಲ್ಲಿ ಅಡಕವಾಗಿರಬಹುದು? ಒಳ್ಳೇದು! ಓದುಗರ ಉತ್ಕಂಠತೆಯನ್ನು ಹೆಚ್ಚಿಸದೆ ತೀವ್ರ ಅವರ ಮುಂದಿಡುವದೇ ಒಳ್ಳೇದು.

> “ ಈಶಸೃಷ್ಟಿಯಲ್ಲಿ ನಾನಾಬಗೆಯ ಸುಂದರ, ಮನಮೋಹಕ ವಸ್ತುಗಳಿರುವವು. ಅವನ್ನು ಹಾಗೆಯೇ ಮಣ್ಣುಗೂಡಿಸದೆ ಮನಸೋಕ್ತ ಉಪಭೋಗ ತೆಗೆದುಕೊಳ್ಳುವದಕ್ಕಾಗಿಯೇ ನಿರ್ಮಿಸಿರುವನು. ‘ಗುಲಾಬಿಯ ಹುವು ಎಲ್ಲಹುವುಗಳಲ್ಲಿಯೂ ನಿಜವಾಗಿ, ಸುಂದರವಾಗಿಯೂ ಮೋಹಕವಾಗಿಯೂ ಇರುವದು ಆದರೆ ತೋಟದಲ್ಲಿ ಅರಳಿದ ಆ ಹುವಿನ ಉಪಭೋಗವನ್ನು ಯಾರೂ ತೆಗೆದುಕೊಳ್ಳದೆ, ದೇಟಿನಮೇಲೆ ಹಾಗೆಯೇ ಒಣಗಲು ಬಿಟ್ಟರೆ, ದೇವರಿಗಾಗಿ ದೊಡ್ಡದೊಂದು ತಪ್ಪುಮಾಡಿದಂತಾಗುತ್ತದೆ.’ ಯಾವುದೋ ಇಲ್ಲದ ಸಲ್ಲದ ವಿಷಯವನ್ನು ಮನದಲ್ಲಿತಂದು, ದೇವರು ಕೊಟ್ಟ ದಿವ್ಯಸೌಂದರ್ಯವನ್ನು, ಉಪಯೋಗವಾಗದಂತೆ ಕೆಡಿಸುವದು, ನಿಜವಾಗಿದೇವರೆದುರಿನಲ್ಲಿ ತಪ್ಪುಮಾಡಿದಂತೆಯೇಸರಿ. ಈ ಪ್ರಕಾರ ದೇಹದಂಡನೆಯನ್ನು ಭೋಗಿಸುವದರಲ್ಲಿ ಪುಣ್ಯವಿರದೆ ಪಾಪವೇ ಇರುವದು. ಆದಿನ ನನ್ನ ದೃಷ್ಟಿಗೆಬಿದ್ದ ಅರ್ಧ ಅರಳಿದ ಹೂವು ನಿಜವಾಗಿ ಮೋಹಕ ವಿರುವದೆಂಬಲ್ಲಿ ಸಂದೇಹವಿಲ್ಲ. ಆ ಹೂವಿಗಾಗಿ ಮುತ್ತು ರತ್ನಗಳ ದೊಂದು ಅತ್ಯುತ್ಕೃಷ್ಟವು ಸರವದೆ. ನಡುವೆ ಆ ಹೂವಿರದೆ ಸರವು ಶೋಭಿಸಲಾರದು. ಸರದ ಹೊರ್ತು ಆ ಹೂವಿಗೂ ಇರಲು ಅನ್ಯಸ್ಥಳವಿಲ್ಲ.

ರೂ ದೊರೆಯಬೇಕೆಂಬ ದುರಿಚ್ಛೆಯು ದುಷ್ಟ ನಟೇಶನಲ್ಲಿ ಉದ್ಭವಿಸಿ ದಿನ ದಿನಕ್ಕೆ ಹೆಚ್ಚಾಗ ಹತ್ತಿತು

ನೀಚ ಮನುಷ್ಯರು ಪರಸ್ತ್ರೀಯರನ್ನು ತಾಯಿ ತಂಗಿಯರೆಂದು ಭಾವಿಸದೆ, ಭೋಗ್ಯದ ವಸ್ತುವೆಂದು ಭಾವಿಸಿ, ತಮ್ಮದುಷ್ಟ ಪಶುವಾಸನೆಯನ್ನು ತೃಪ್ತಿಗೊಳಿಸಲೋಸುಗ ಮನೆತನದ ರೂಪವತಿಯರಾದ ಹೆಂಗಸರನ್ನು ಮೋಸಗೊಳಿಸಿ ಅವರ ಮರ್ಯಾದೆ ಗೇಡುಮಾಡುವ ಅಸುರೀ ವೃತ್ತಿಗೆ ಲಾಂಛನವೇಸರಿ

ನಟೇಶನು ಜಾನಕಿಯ ಸೌಂದರ್ಯದ ಸೊಬಗನ್ನು ಒಂದು ದಿನವಾದರೂ ಸವಿಯಲೇ ಬೇಕೆಂದು, ಕುಟಿಲಕಾಗಸ್ತಿನ ರಚಿಸಿ ತನ್ನಹಸ್ತಕನಾದ ಶಾಮನನ್ನು ಅದರಮೇಲೆ ನೇಮಿಸಿದನು.

ಒಬ್ಬನೇ ಶಾಮನಿಂದ ಕೆಲಸವು ಕೊನೆಗಾಣದೆಂದು ನೆನಿಸಿ ಅತಿ ಪರಿಚಯದವಳಾದ ಗುಂಡವ್ವನಿಗೆ ಚೆನ್ನಾಗಿಕೈಬೆಚ್ಚಗೆಮಾಡಿ, ಅವಳನ್ನುತನ್ನ ಕಾರಸ್ತಾನದಲ್ಲಿ ಕಲೆಯಿಸಿಕೊಂಡು, ಶಾಮನಸಹಾಯಕ್ಕಾಗಿ ನೇಮಿಸಿದನು

ಗುಂಡವ್ವನಿಗೂ ಜಾನಕೆಗೂ ನಿಕಟಪರಿಚಯ ಇರುವದೆಂದುತಿಳಿದ ಆ ಧೂರ್ತನಟೇಶನು, ಅವಳನ್ನೊಂದುರಾತ್ರಿ ತನ್ನಮನೆಗೆ ಕರೆದುಕೊಂಡು ಬರಬೇಕೆಂಬದಾಗಿ ಕೈತುಂಬ ಹಣಕೊಟ್ಟು ಮನ ಓಲಿಸಿಕೊಂಡು ಮದಲನೇ ಈ ಕೆಲಸವನ್ನು ಆವಳಿಗೆ ಒಪ್ಪಿಸಿದನು.

✣ ✣ ✣ ✣ ✣ ✣ ✣ ✣ ✣

ಮುಂಜಾವಿನ ೭ ಗಂಟೆಯು. ಜಾನಕಿಯು ಕೈಯಲ್ಲೊಂದು ಪತ್ರಹಿಡಿದು ಓದುತ್ತಿದ್ದಳು. ಅವಳು ಅಷ್ಟೊಂದು ಇಂಗ್ರೇಜಿಯನ್ನುಕಲಿಯದಿದ್ದರೂ ಗಂಡನ ಶಿಕ್ಷಣದಿಂದ ಓದಲು ಬರೆಯಲು ಚೆನ್ನಾಗಿಬರುತ್ತಿತ್ತು.

ಪತ್ರ ಓದುವ ವೇಳೆಯಲ್ಲಿ ಆವಳಮೋರೆಯಮೇಲೆ ನಾನಾಬಗೆಯ ಚಿನ್ಹವು ಕಾಣುತ್ತಿತ್ತು. ಮೋರೆಯು ಕೆಂಪೇರುತ್ತಿತ್ತು. ಹುಬ್ಬುಗಳು ಗಂಟಿಕ್ಕುತ್ತಿದ್ದವು ಹಲ್ಲುಗಳು ಕೆಳದುಟಿಯನ್ನು ಕಚ್ಚುತ್ತಿದ್ದವು. ಹಣೆಯಮೇಲೆ ಪರಸ್ಪರ ವಿರೋಧಿ ರೇಷೆಯು ಗಡುತರವಾದ ಗೀರು ಬೀಳುತ್ತಿತ್ತು, ಮೋರೆ

ಯನ್ನು ನೋಡುತಲೆ, ಯಾವುದೋ ಘನತರ ವಿಚಾರದಿಂದ ಅವಳ ಮನಸ್ಸು ಅಲ್ಲೋಲ ಕಲ್ಲೋಲ ವಾದಂತೆ ಕಂಡು ಬರುತ್ತಿತ್ತು.

ಪತ್ರವನ್ನು ಕೊನೆಯವರೆಗೆ ಓದಿದಮೇಲೆ ಅವಳಕಣ್ಣೊಳಗಿಂದ, ತಟ ತಟ ನೀರು ಹನಿಗಳು ಉದುರಿದವು. ಕೂಡಲೆ ಮೊದಲಿನಂತೆ ಗಂಭೀರ ಮುಖಮುದ್ರೆಯಾಯಿತು. ಸಿಟ್ಟಿನಿಂದ ಕೈಯಲ್ಲಿಯ ಪತ್ರವನ್ನು ನೂರೆಂಟು ತುಂಡಾಗುವಹಾಗೆ ಚರಚರಹರಿದು ನೆಲದಮೇಲೆ ಚೆಲ್ಲಿ, ತಡಿಯದೆ ಎದ್ದುನಿಂತು ಕಾಲಿನಿಂದ ತುಳಿದಳು.

ಆಮೇಲೆ ಅವಳು ಗೂಟಕ್ಕೆ ತಗುಲಿಸಿದ ಪತಿಯ ಭಾವಚಿತ್ರವನ್ನು ಕೈಯಲ್ಲಿ ತೆಗದುಕೊಂಡು, ಅದರಮೇಲೆ ಅಶ್ರುಮಣಿಯ ಮಾಲೆಯನ್ನು ಹಾಕಹತ್ತಿದಳು. ನೋಡುತ್ತ ನೋಡುತ್ತ ಪತಿಯ ಪ್ರತಿರೂಪದೊಳಗೆ ಏಕರೂಪವಾಗಿ ಹೋದಳು.

ಪ್ರಿಯ, ವಾಚಕರೇ! ಆ ಪತ್ರವು ಯಾರದಿರಬಹುದು ? ಜಾನಕಿಯ ಹೃದಯಕ್ಕೆ ಬಲವಾಗಿ ಆಘಾತಮಾಡಿ ಅವಳನ್ನು ಅಳಲುಪಕ್ರಮಿಸಿದ ಯಾವ ಸಂಗತಿಯು ಅದರಲ್ಲಿ ಅಡಕವಾಗಿರಬಹುದು? ಒಳ್ಳೇದು! ಓದುಗರ ಉತ್ಕಂಠತೆಯನ್ನು ಹೆಚ್ಚಿಸದೆ ತೀವ್ರ ಅವರ ಮುಂದಿಡುವದೇ ಒಳ್ಳೇದು.

“ ಈಶಸೃಷ್ಟಿಯಲ್ಲಿ ನಾನಾಬಗೆಯ ಸುಂದರ, ಮನಮೋಹಕ ವಸ್ತುಗಳಿರುವವು. ಅವನ್ನು ಹಾಗೆಯೇ ಮಣ್ಣುಗೂಡಿಸದೆ ಮನಸೋಕ್ತ ಉಪಭೋಗ ತೆಗೆದುಕೊಳ್ಳುವದಕ್ಕಾಗಿಯೇ ನಿರ್ಮಿಸಿರುವನು. ‘ಗುಲಾಬಿಯ ಹುವು ಎಲ್ಲ ಹುವುಗಳಲ್ಲಿಯೂ ನಿಜವಾಗಿ, ಸುಂದರವಾಗಿಯೂ ಮೋಹಕವಾಗಿಯೂ ಇರುವದು ಆದರೆ ತೋಟದಲ್ಲಿ ಅರಳಿದ ಆ ಹುವಿನ ಉಪಭೋಗವನ್ನು ಯಾರೂ ತೆಗೆದುಕೊಳ್ಳದೆ, ದೇಟಿನಮೇಲೆ ಹಾಗೆಯೇ ಒಣಗಲು ಬಿಟ್ಟರೆ, ದೇವರಿಗಾಗಿ ದೊಡ್ಡದೊಂದು ತಪ್ಪುಮಾಡಿದಂತಾಗುತ್ತದೆ.’ ಯಾವುದೋ ಇಲ್ಲದ ಸಲ್ಲದ ವಿಷಯವನ್ನು ಮನದಲ್ಲಿತಂದು, ದೇವರು ಕೊಟ್ಟ ದಿವ್ಯಸೌಂದರ್ಯವನ್ನು, ಉಪಯೋಗವಾಗದಂತೆ ಕೆಡಿಸುವದು, ನಿಜವಾಗಿದೇವರೆದುರಿನಲ್ಲಿ ತಪ್ಪುಮಾಡಿದಂತೆಯೇ ಸರಿ. ಈ ಪ್ರಕಾರ ದೇಹದಂಡನೆಯನ್ನು ಭೋಗಿಸುವದರಲ್ಲಿ ಪುಣ್ಯವಿರದೆ ಪಾಪವೇ ಇರುವದು. ಆದಿನ ನನ್ನ ದೃಷ್ಟಿಗೆಬಿದ್ದ ಅರ್ಧ ಅರಳಿದ ಹೂವು ನಿಜವಾಗಿ ಮೋಹಕ ವಿರುವದೆಂಬಲ್ಲಿ ಸಂದೇಹವಿಲ್ಲ. ಆ ಹೂವಿಗಾಗಿ ಮುತ್ತು ರತ್ನಗಳ ದೊಂದು ಅತ್ಯುತ್ತಮ ಸರವದೆ. ನಡುವೆ ಆ ಹೂವಿರದೆ ಸರವು ಶೋಭಿಸಲಾರದು. ಸರದ ಹೊರ್ತು ಆ ಹೂವಿಗೂ ಇರಲು ಅನ್ಯಸ್ಥಳವಿಲ್ಲ.

ಗುಂಡವ್ವನು ಬೀಸಲು ತಂದುಕೊಟ್ಟಕಾಳುಗಳಲ್ಲಿ, ಕೆಲಸಕ್ಕೆಬಾರದ ಈ ಪತ್ರವೊಂದು ಮುಚ್ಚಲ್ಪಟ್ಟಿತ್ತು. ಜಾನಕಿಯು ಓದುಬರೆ ಬಲ್ಲ ತರುಣಿಯು. ಕಾವ್ಯದೊಳಗಣ ಭಾವಗರ್ಭಿತ ಪದ್ಯಗಳ ಅರ್ಥವು ತಿಳಿಯುತ್ತಿರದಿದ್ದರೂಕೂಡ ಪತ್ರದಲ್ಲಿ ಬರೆದಸಂಗತಿಯು ಅವಳಿಗೆ ತಿಳಿಯದೇ ಇರಲಿಲ್ಲ. ಯಾರಕಡೆಯಿಂದ ಬಂದಿರುವದೆಂಬದನ್ನೂ ಮನಗಂಡಳು

ತನ್ನ ವಿಷಯದಲ್ಲಿ ನಟೀಶನಿಗೆ ಪಾಪವಾಸನೆ ಹುಟ್ಟಿರುವದನ್ನು ನೋಡಿ ಅವಳಿಗೆ ಬಹಳೇ ಖೇದವಾಯಿತು. ಪತ್ರಬಂದ ದಿನದಿಂದ ಅವಳೂ ಒಳ್ಳೆ ಜಾಗರೂಕತೆಯಿಂದಿರಹತ್ತಿದಳು. ವಿಷಯವು ಒಳ್ಳೇ ಸೂಕ್ಷ್ಮ. ಜೀವದಗೆಳತಿಯಾದ ಗೋದಾವರಿಯು ಸಲುಹೆ ತೆಗುದುಕೊಳ್ಳುವದನ್ನೂಕೂಡ ಮನದಲ್ಲಿ ತರಲಿಲ್ಲ. ಅವಳ ಎಲ್ಲಭರವಸೆಯು ದೇವರ ಮೇಲಿತ್ತು.

ಉಳಿದೊಂದು ತಿಂಗಳಬಾಡಿಗೆಯನ್ನು ಮೊದಲು ಹೇಳಿಕೊಂಡಮೇರೆಗೆ ಹನುಮಂತರಾಯರು, ಮನುಷ್ಯನಕೈಲೆ ಬಾಡಿಗೆಯನ್ನುಕೊಡಹೋದರು. ಅವನು ತೆಗೆದುಕೊಳ್ಳಲಿಲ್ಲ. ಮನೆಯೊಡಯನ ಬಳಿಯಲ್ಲಿಹೋದರು. ಅವನೂ ತೆಗೆದುಕೊಳ್ಳಲ್ಲಿಲ್ಲ. ತಿರುಗಿ ಅವನು ಶಿಷ್ಟಸಾಂಪ್ರದಾಯದಂತೆ ಸಾಮೋಪಚಾರದ ಮಾತುಗಳನ್ನಾಡಿ ತನ್ನಸಭ್ಯತೆಯನ್ನು ತೋರಿಸಲೋಸುಗ "ರಾಯರೇ! ಆಹೆಣ್ಣುಮಗಳ ಗಂಡನು ರಾಷ್ಟ್ರದಸಲುವಾಗಿ ತುರಂಗವಾಸಪತ್ಕರಿಸಿದ್ದರಿಂದ ಅವಳಿಗೆ ಈತರದ ಸಂಕಟಬಂದಿದೆ. ಇಂಥಸ್ಥಿತಿಯಲ್ಲಿ ಕ್ಷುಲ್ಲಕ ಬಾಡಿಗೆಯ ವಿಷಯವೇನು? ನಾನೇನು ಅಂಥ ದಮುಡಿದಾಮೋದರನಲ್ಲ. ರಘುನಾಥನು ಬಿಡುಗಡೆಹೊಂದಿ ಬರುವವರೆಗೆ ಆಮನೆಯ ಬಾಡಿಗೆಯನ್ನು ತೆಗೆದುಕೊಳ್ಳಬಾರದೆಂದು ಮಾಡಿದ್ದೆನೆ. ನೀವು ನಿಮ್ಮನಿಮ್ಮಲ್ಲಿ ವರ್ಗಣಿಕೂಡಿಸಿ ಬಾಡಿಗೆಯಹಣ ತಂದಿರುವದಾಗಿ ಕಾಣುತ್ತದೆ! ನಾನು ಸರ್ವಥಾ ತೆಗೆದುಕೊಳ್ಳಲಾರೆನು. ಇದಲ್ಲದೆ ಜಪ್ತಿಯವೇಳೆಯಲ್ಲಿ ಸಲ್ಲಿಸಿದ ಹಣವನ್ನು ಸಹ ತಿರುಗಿ ತೆಗೆದುಕೊಂಡು ಹೋಗಲೇಬೇಕು" ಎಂದು ಹೇಳಿ ಆ ಹಣವನ್ನುತಂದು ಅವರಮುಂದಿಟ್ಟನು. ನಟೀಶನ ಔದಾರ್ಯವನ್ನು ನೋಡಿ ಅವರಿಗೆ ಕೌತಕವೂಯಿತು ಆದರೆ ಜಾನಕೆಯ ತಲೆಯಮೇಲಿ

ಬೀಳುತ್ತಿರುವ ಆಕಾಶಕೊಡ್ಲಿಯು ತಪ್ಪಿತೆಂದು ಅನಂದವೂ ಆಯಿತು.

ದಿವಸದಮೇಲೆ ದಿವಸಗಳು ಹೋಗಹತ್ತಿದವು; ನಟೇಶನಿಗಂತೂ ಜಾನಕಿಯ ವಿಚಾರದಹೊರ್ತು ಎರಡನೆಯ ವಿಚಾರಗಳೇ ಬರದಂತಾದವು.

ಶಾಮು, ಗುಂಡವ್ವ, ಇಬ್ಬರೂ ಯೋಗ್ಯಸಂಧಿ ಸಾಧಿಸಲೋಸುಗ ಹೊಂಚುಹಾಕಿ ಕುಳಿತುಕೊಂಡಿದ್ದರು. ಯಾವುದಾದರೊಂದು ಉಪಾಯದಿಂದ ಜಾನಕಿಯಿನ್ನು ಮೋಸಗೊಳಿಸಬೇಕೆಂದು, ನಾನಾಪ್ರಕಾರದಯುಕ್ತಿ ಕುಯುಕ್ತಿಗಳನ್ನು ನಡೆಸಿದ್ದರು.

ಬಂಗಾರದ ನಿಜಸ್ವರೂಪವು ಬರಬೇಕಾದರೆ, ಜನರು ಅದನ್ನು ಮೇಲಿಂದಮೇಲೆ ಕಾಸಿ ಅದ್ದಣಿಯ ಮೇಲಿಟ್ಟು ಹೊಡೆಯುತ್ತಾರೆ. ಆದರಂತೆ ದೇವರು ಜನರ ಸತ್ಯತೆಯನ್ನು ತಿಳಿದುಕೊಳ್ಳುವದಕ್ಕಾಗಿ ಅವರಿಗೆ ನಾನಾಬಗೆಯ ಕಷ್ಟಕೊಡುವನು.

ಆ ನೀಚರ ಅಪೇಕ್ಷೆಯಮೇರೆಗೆ ಸಂಧಿಯೂ ಸಾಧಿಸಿಬಂತು.

ಒಂದುದಿನ ಗುಂಡವ್ವನು ಜಡ್ಡಾಗಿ ಮಲಗಿಕೊಂಡಳು ಮುಂದೆರಡು ದಿನಗಳವರೆಗೆ ಹಾಸಿಗೆ ಬಿಟ್ಟು ಏಳಲಲ್ಲ. ನಟೇಶರಾಯನ ಮನೆಕೆಲಸಗಳು ಹಾಗೆಯೇ ನಿಂತವು. ಗುಂಡವ್ವನು ಬಾರದಿರುವದನ್ನು ನೋಡಿ ನಟೇಶನು ರಾತ್ರಿ ೮ ಗಂಟೆಯಸುಮಾರಕ್ಕೆ ತನ್ನಮನೆಗೆ ಅವಳನ್ನು ಕರೆಕಳುಹಿದನು. ಗುಂಡವ್ವನು ಸಮಯವರಿತು ಜಾನಕಿಯನ್ನು ಕರಸಿಕೊಂಡು "ತಂಗೀ! ನನಗೆ ಮೈಯಲ್ಲಿ ನೆಟ್ಟಗೆಇಲ್ಲ ನಟೇಶರಾಯರ ಮನೆಕೆಲಸಗಳು ಹಾಗೆಯೇ ಉಳಿದಿರುವವು. ಮನೆಯವರೆಗೆ ಅಡಿಗೆಮಾಡುವವಳನ್ನು ಕಳುಹಿದ್ದಾರೆ, ಅವಳಸಂಗಡಹೋಗಿ ಕುಟ್ಟ ಬೀಸುವಕಾಳುಗಳನ್ನು ತೆಗೆದುಕೊಂಡುಬಾ" ಎಂದಳು.

ಜಾನಕಿಯು ಏನೋಅನ್ನಬೇಕೆಂದು ಮನದಲ್ಲಿ ಮಾಡಿದ್ದಳು. ಆದರೆ ಅದನ್ನು ಅಷ್ಟಕ್ಕೆತಡೆದು ಬಂದವೇಳೆಗೆ ತಲೆಗೊಟ್ಟು ನಿಲ್ಲಬೇಕೆಂದು ನಿಶ್ಚೈಸಿ, ಹೋಗುವೆನೆಂದು ತಲೆಅಲ್ಲಾಡಿಸಿ, ಅಡಿಗೆಮಾಡುವವಳೊಡನೆ ಹೊರಟಳು.

ಅಡಿಗೆಮಾಡುವವಳು ಜಾನಕಿಯನ್ನು ನೆಟ್ಟಗೆ, ನಟೇಶನು ಕುಳಿತು ಕೊಂಡ ಏಕಾಂತ ಸ್ಥಳಕ್ಕೆ ಕರೆದೊಯ್ದಳು. ಈ ವೇಳೆಯಲ್ಲಿ ಅವನಮನೆ ಯಲ್ಲಿ ಯಾರೂ ಇರುತ್ತಿರಲಿಲ್ಲ. ಇದ್ದೊಬ್ಬ ಹೆಂಡತಿಯು ತನ್ನ ಚಿಕ್ಕ ಮ ಗುವಿನೊಡನೆ ತವರುಮನೆಗೆ ಹೋಗಿದ್ದಳು. ಹಣವೆಂದರೆ ಯಾರುತಾನೇ ಬಾಯಿತೆರೆಯಲಿಕ್ಕಿಲ್ಲ. ಅವನು ಕೆಲಸಕ್ಕೆಬೇಕಾದ ಎಲ್ಲಜನರನ್ನು ಅವರಿಗೆ ಹಣದಾಶೆ ತೋರಿಸಿ ತನ್ನಂತೆ ಮಾಡಿಕೊಂಡಿದ್ದನು. ಸ್ತ್ರೀಯರಿಗೆ ಪುರುಷ ರೇ ಮಾರ್ಗದರ್ಶಕರು. ಪುರುಷರೇಕೂತು ಇಂಥನೀಚಕೃತ್ಯವನ್ನು ಕೈಕೊಂ ಡಮೇಲೆ ಸ್ತ್ರೀಯರಕಡೆಗೆ ಆವದೋಷ.

ಅಡಿಗೆಯುವಳು ಅವಳನ್ನು ಆವನುಕುಳಿತ ಕೋಣೆಯಲ್ಲಿಬಿಟ್ಟು ಬೀ ಸುವಕಾಳನ್ನು ತೆಗೆದುಕೊಂಡು ಬರುವೆನೆಂದು ನೆವಹೇಳಿ ಎರಡನೇಬಾಗಿ ಲಿಂದ ಹೊರಕ್ಕೆ ಹೋದಳು. ಕೋಣೆಯು, ಅಟ್ಟದಮೇಲೆ ಒಂದು ಮೂಲಿ ಗಿದ್ದು ಯಾರು ಎಷ್ಟುಗದ್ದಲ ಮಾಡಿದರೂ ಎರಡನೇಯುವರಿಗೆ ಕೇಳುಬರು ವಂತಿದ್ದಿಲ್ಲ. ಆಡಿಗೆಯುವಳು ಹೊರಗೆ ಹೋಗುತಲೆ, ನಟೇಶನು ಕುಳಿತ ಸ್ಥಳದಿಂದೆದ್ದು ಜಾನಕಿಯು ಒಳಗೆಬಂದ ಬಾಗಿಲಿಗೆ ಅಡ್ಡಾಗಿ ಕಿಸಿ ಕಿಸಿ ಹ ಲ್ಲು ತೆಗೆಯುತ್ತ ನಿಂತುಕೊಂಡನು.

ಒಮ್ಮಿಂದೊಮ್ಮೆ ಬಾಗಿಲಿಗೆ ಬಂದು ಆಡ್ಡಗಟ್ಟಿ ನಿಂತಿದ್ದುನೋಡಿ ಜಾನಕಿಯು ಗಾಬರಿಗೊಂಡಳು.

ನಟೇಶ— ಜಾನಕಿ! ಇಲ್ಲೇಕೆ ಬಂದಿರುವಿ? ಏನುಕೆಲಸವಿರುವದು?

ಜಾನಕಿಯು ಚಿತ್ರದ ಬೊಂಬೆಯಂತೆ ಕೆಳಮೋರೆಯನ್ನುಮಾಡಿ ನಿಂ ತುಕೊಂಡಳು. ಅವಳಸರ್ವಾಂಗವು ಕಂಪಿಸಹತ್ತಿತು. ಕಾತರಸ್ವರದಿಂದ ಜಾನಕಿಯು "ನಿಮ್ಮ ಅಡಿಗೆಯುವಳು ಎಲ್ಲಿಗೆಹೋದಳು? ಅವಳೇ ನನ್ನನು ಇಲ್ಲಿಯವರಗೆ ಕರೆತಂದು ಕೂಡ್ರಿಸಿ, ಈಗಬರುವೆನೆಂದು ಹೇಳಿ ಹೊರಗೆ ಹೋದಳು"

ನಟೇಶ— ಈಗಲೇಬರಬಹುದು, ಒಳ್ಳೇದು. ಜಾನಕಿ ನಿಮ್ಮಕಡೆಗೆ ಷ್ಟು ಬಾಡಿಗೆಯು ಉಳಿದಿರುವದು.

ಜಾನಕಿ— ಅದು ನನಗೆ ಗೊತ್ತಿಲ್ಲ. ಹನುಮಣ್ಣನವರಿಗೆ ಗೊತ್ತು, ಅವರನ್ನೇ ಕೇಳಿರಿ.

ನಟೇಶ— ೪, ೫ ತಿಂಗಳಿಗಿಂತ ಹೆಚ್ಚಾಗಿರುವದಾಗಿ ಕಾಣುತ್ತದೆ.

ಜಾನಕಿ— ಎಷ್ಟೇಇರಲಿ, ಪ್ರಸ್ತುತ ನಮ್ಮಮೇಲಿನ ಪ್ರಸಂಗ—

ನಟೇಶ— ಹಾಗಲ್ಲ ! ಈಗಲೇ ಕೊಡಬೇಕೆಂದು ನಾನೆಲ್ಲಿ ಹಟಹಿಡಿದಿರುವೆನು? ಆದರೆ ನನ್ನದೊಂದು ಕೆಲಸ.

ಜಾನಕಿ— ನನ್ನಲ್ಲಿ ಯಾವಕೆಲಸ ನಿಮ್ಮದು ! ಇದಲ್ಲದೆ ಏಕವಚನದ ಶಬ್ದಯೋಜನೆ ನಡೆಸಿರುವಿರಿ! ಪರಸ್ತ್ರೀಯರಸಂಗಡ ಯಾರೂ ಇಲ್ಲದ ವೇಳೆಯಲ್ಲಿ ಹೀಗೆ ಮಾತಾಡುವದು ಸರಿಯಲ್ಲ. ಸುಮ್ಮನೆ ಚೇಷ್ಟೆ ಮಾಡಬೇಡಿರಿ. ಅಡಿಗೆಯವಳು ಎಲ್ಲಿರುವಳು ? ಎಲ್ಲರೂ ಈ ನಿಮ್ಮ ಕುಕೃತ್ಯದಲ್ಲಿ ಕಲೆತಿರುವಂತೆ ಕಾಣುತ್ತದೆ. ಸರೆಯರಿ. ನಾನು ಹೋಗುವೆನು.

ನಟೇಶ— ಎಲ್ಲಿಗೆ ಹೋಗುವಿ?

ಜಾನಕಿ— ಅಂದರೆ

ನಟೇಶ— ನಾನನ್ನುವನ್ನು ಮೊದಲು ಕೇಳು

ಜಾನಕಿ— ಈವೇಳೆಯಲ್ಲಿ ನಿಮ್ಮ ಯಾವಮಾತನ್ನೂ ಕೇಳೆನು. ನಿಮ್ಮಂಥ ದೊಡ್ಡವರಕೂಡ.

ನಟೇಶ—ನಾನು ದೊಡ್ಡವನಿದ್ದರೂ ಈವೇಳೆಯಲ್ಲಿ ನಿನ್ನಮುಂದೆ-

ಜಾನಕಿ— ಇಂಥ ನೀಚತನವು ನಿಮಗೆ ಶೋಭಿಸಲಾರದು. ಬಾಗಿಲಬಿಟ್ಟು, ನಿಲ್ಲಿರಿ. ನಾನು ಹೋಗುತ್ತೇನೆ.

ನಟೇಶ— ಹೋಗುವದಾದರೆ— ಆದರೆ,

ಜಾನಕಿ—ನನ್ನಕೂಡ ಮನಬಂದಂತೆ ಗಳುಹಬೇಡಿರಿ. ಕಡೆಗೊಂದು ಮಾತು ಹೇಳುತ್ತೇನೆ; ನಾನು ಬಡಿವೆಯಾದರೂ—

ನಟೇಶ— ಬಡಿವೆಯಾತಕ್ಕೆ ? ಬೇಕಾದಷ್ಟು ಹಣಕೊಡಲು ನಾನು ಸಿದ್ಧನಿರುವೆನು.

ಜಾನಕಿ— ಚಾಂಡಾಲಾ! ನರಾಧಮಾ!! ಇದಕ್ಕಾಗಿ ಇಷ್ಟೊಂದು ಕುಟಿಲಕಾರಸ್ಥಾನವನ್ನು ರಚಿಸಿರುವಿ ಏನು? ನೋಡು! ನಾಲ್ಕು ಜನರೊಳಗೆ ನಿನಗೆ ಮೋರೆ ತೋರಿಸದಂತೆ ಮಾಡುವೆನು. ಇಷ್ಟರಮೇಲೆ ಮರ್ಯಾದೆ ಯುಳಿಸಿಕೊಂಡು ಹಿಂದಕ್ಕೆ ಸರಿ.

ವಿಷಯ ವಾಸನೆಯು ಮಸ್ತಕಕ್ಕೇರಿದ ಮಂಕು ಮನುಷ್ಯನು ಹಿಂದಕ್ಕೆ ಸರೆಯುವನೇ? 'ಜಾನಕಿ ನನ್ನಿಂದ ಇನ್ನುಮುಂದೆ ತಡೆಯದಾಗದು' ಎಂದು ಮುಂದೆಬಂದು ಅವಳ ಮುಂಗೈ ಹಿಡಿದನು. ಜಾನಕಿಯು ಕೈಬಿಡಿಸಿಕೊಳ್ಳಲು ನಾನಾಬಗೆಯಾಗಿ ಯತ್ನಿಸಿದರೂ ಸಾಧ್ಯವಾಗಲಿಲ್ಲ. ಕೋಣನಂತಿರುವ ಟೊಣಪನಮುಂದೆ, ಪಾಪ! ಕೋಮಲ ತರುಣಿಯ ಕೊನೆಸಾಗುವ ಬಗೆ ಹೇಗೆ? ಜನ ಸಹಾಯಬರಲೋಸುಗ ಒದರಾಡಿದಳು ಚೀರಾಡಿದಳು. ಭವ್ಯಮನೆ ಮೇಲಿನ ಮಾಲೆಯ ಕೋಣೆಯೊಳಗಿನ ಸಪ್ಪಳವು ಹೊರಗೆ ಹೇಗೆತಾನೇ ಕೇಳಬರುವದು. ಅವಳು ಕೈಯನ್ನು ಕೊಸರಿಕೊಳ್ಳುತ್ತ ತೀರ ಬಾಗಿಲೆದುರಿಗೆ ಬಂದಳು. ಏನುಮಾಡಿದರೂ ಅವನು ಕೈಬಿಡದಾದನು. ಪಾತಿವ್ರತ್ಯ ಕಾಯ್ದುಕೊಳ್ಳಲೋಸುಗ ಅವಳು ಧೈರ್ಯದಿಂದ, ಹಿಡಿದ ಅವನ ಕೈಯನ್ನು ಹಲ್ಲಿನಿಂದ ಕಸುವಿನಿಂದ ಕಡಿದಳು. ರಕ್ತದ ಧಾರೆಯು ಸುರಿಯಹತ್ತಿತು. ಕೂಡಲೆ ಕೈಬಿಟ್ಟು ಹಿಂದಕ್ಕೆ ಸರಿದನು.

ಜಾನಕೆಯು ಅಸ್ತವ್ಯಸ್ತವಾಗಿದ್ದ ಬಟ್ಟೆಯನ್ನು ಸಾವರಿಸಿಕೊಂಡು ಬಂದಬಾಗಿಲಿಂದ ಹೊರಬಿದ್ದಳು. ಇಷ್ಟರಲ್ಲಿ ಆರಾಕ್ಷಸನು ಮುಂದೆಬಂದು ಅವಳಕಾಲು ಗಟ್ಟಿಯಾಗಿ ಹಿಡಿದುಕೊಂಡು "ಜಾನಕೀ! ನೀನು ನನಗೆ ಅಕ್ಕತಂಗಿಯಂತಿರುವಿ. ನಾನು ನಿಜವಾಗಿ ಪಾಪಿ ನರಾಧಮನು. ನನ್ನನ್ನು ಕ್ಷಮಿಸಲೇಬೇಕು. ವಿಷಯದ ಮಬ್ಬಿನಿಂದ ಮುಚ್ಚಿದ ನನ್ನ ಕಣ್ಣುಗಳು ಈಹೊತ್ತು ತೆರೆದವು. ನನ್ನ ಅಕ್ಷಮ್ಯ ತಪ್ಪನ್ನು ಕ್ಷಮಿಸುವವರೆಗೂ, ಇದುವರೆಗೆ ನನ್ನಿಂದ ಜರುಗಿದ ಅನುಚಿತ ಕೃತ್ಯವನ್ನು, ಜನರಮುಂದೆ ಹೇಳುವದಿಲ್ಲವಾಗಿ ವಚನ ಕೊಡುವವರೆಗೆ ನಿನ್ನ ಕಾಲುಗಳನ್ನು ಬಿಡುವದಿಲ್ಲ.

ಅವನ ದೀನ ವಾಣಿಯನ್ನು ಕೇಳಿ ಅವಳ ಮನಕರಗಿತು. ಮುಂದಿನ ವಿಚಾರಮಾಡಿ ಅವಳು "ಬಿಡು ಮೂರ್ಖಮನುಷ್ಯನೆ, ಕ್ಷಮಿಸಿರುವೆನು. ಇದಲ್ಲದೆ ಇನ್ನಾರಮುಂದೆಯೂ ಈ ವಿಷಯವನ್ನು ಹೇಳುವದಿಲ್ಲವೆನ್ನುವದಾಗಿ ವಚನಕೊಡುವೆನು. ಇನ್ನುಮುಂದೆ ಇಂಥ ಹೇಯ ಕೆಲಸಕ್ಕೆ ಕೈ ಹಾಕಬೇಡ ಹಿಗೆಯೇ ಮಾಡಿದರೆ ಎಂದಿಲ್ಲೊಂದುದಿನ ಪಾಪದ ಪ್ರಾಯಶ್ಚಿತ್ತವು ನಿಜವಾಗಿ ಬಾರದೆಇರದು." ಎಂದುನುಡಿದು ಅವನ ಮನೆಯಿಂದ ಹೊರಬಿದ್ದವಳು ನೆಟ್ಟಗೆ ತನ್ನ ಕೋಣಿಗೆ ಬಂದುಸೇರಿದಳು.

ಜಾನಕಿಯು ಕಸುವಿನಿಂದ ಕಡಿಯುತಲೆ, ಕೈಬಿಟ್ಟು ಹಿಂದಕ್ಕೆ ಸರಿಯಲು ಜೋಲಿಹೋಗಿ ಒಮ್ಮಿಂದೊಮ್ಮೆ ನೆಲಕ್ಕೆ ಬಿದ್ದನು. ಶಾಬಾದಿ ಬಂಡಿಗಳನ್ನು ಹಾಸಿದ ಹಾಸುಗೆಯ ಮೇಲೆ ಬಿದ್ದುದರಿಂದ, ತಲೆಯೊಡೆದು ರಕ್ತಬರಹತ್ತಿತು. ಪೆಟ್ಟಿನ ಬಲವಾದ ಬೇನೆಯಿಂದ ಅವನಿಗೆ ಚೆನ್ನಾಗಿ ಎದ್ದುನಿಲ್ಲಲು ಸಹ ಬರಲಿಲ್ಲ. ಆದುದರಿಂದಲೇ ಅವನು ಅವಳ ಕೈಬಿಟ್ಟನು ಇಲ್ಲವಾದರೆ ಎಂದಿಗೂ ಹಿಂಜರೆಯುತ್ತಿದ್ದಿಲ್ಲ.

✣ ✣ ✣ ✣ ✣ ✣ ✣ ✣ ✣

ರಘುನಾಥನು ಕಾರಾಗ್ರುಹ ವಾಸಮಾಡಿ ಸುಮಾರು ದೀಡ ವರ್ಷವಾಗುತ್ತ ಬಂದಿತ್ತು. ಅವನ ಸ್ವಾಭಿಮಾನಿ ಸ್ವಭಾವಕ್ಕೆ, ಸೆರೆಮನೆಯ ವಾಸದಿಂದ, ಕೊಂಚವಾದರೂ ಕೆಡಕೆನಿಸುತ್ತಿದ್ದಿಲ್ಲ. ಸ್ವಾತಂತ್ರ್ಯ ದೇವಿಯು ಜನ್ಮತಾಳಿ, ಈ ಮಹಾಮಂಗಲ ಭರತವರ್ಷಕ್ಕೆ ಗತವೈಭವವು ಪ್ರಾಪ್ತಿಯಾಗಬೇಕಾದರೆ, ಅವನಂತೆ ಸಾವಿರಾರು ಜನರು ಕಾರಾಗ್ರುಹ ವಾಸಮಾಡಲೇಬೇಕಾಗಿತ್ತು. ಮುಂದೆಯಾದರೂ ಮಾಡಬೇಕಾಗಬಹುದು.

ತುರಂಗದಲ್ಲಿಮಾಡಬೇಕಾದ ನಾನಾಬಗೆಯ ಕಷ್ಟದಕೆಲಸದಿಂದಲೂ, ಅವನಿಗೆ ಅಷ್ಟೊಂದು ದುಃಖವಾಗುತ್ತಿದ್ದಿಲ್ಲ. ಆದರೆ, ಅವನ ಮನಸ್ಸು ಎರಡು ವಿಷಯಗಳಸಲುವಾಗಿ ಮೇಲಿಂದಮೇಲೆ ವ್ಯಾಕುಲ ಹೊಂದುತ್ತಿತ್ತು. ಮೊದಲನೆಯ ವಿಷಯವೆಂದರೆ, 'ಅನಾಥನಾದ ತನ್ನನ್ನು ಸಣ್ಣವನಿಂದ

ದೊಡ್ಡವನಾಗುವವರೆಗೆ ಎಲ್ಲಬಗೆಯ ಸಂಕಟಸಹಿಸಿ, ಓದುಬರೆ ಗಲಿಸಿ, ಸನ್ಮಾರ್ಗಕ್ಕೆ ಹಚ್ಚಿ, ಕೊನೆಗೆ ತನ್ನಸಲುವಾಗಿ ಎದೆಯೊಡೆದ ಕಕ್ಕನ ಆಕಸ್ಮಿಕ ನಿಧನವು. ಎರಡನೆಯದೆಂದರೆ ತಾನು ಕಾರಾಗೃಹಕ್ಕೆ ತೆರಳಿದ ಮೇಲೆ ಸಹಾಯರಹಿತಳಾದ ಪತ್ನಿಯ ವಿಷಯವು.' ಇವೆರಡರಿಂದ ಅವನ ಕೋಮಲ ಹೃದಯಕ್ಕೆ ಆಗಿಂದಾಗ್ಗೆ ಬಲವಾದ ಆಘಾತವಾಗುತ್ತಿತ್ತು.

'ಅವಳು ಹೇಗೆ ದಿನಗಳೆಯುತ್ತಿರಬಹುದು. ಏನುತಿನ್ನುತ್ತಿರಬಹುದು ಹೊಟ್ಟೆಯ ಸಲುವಾಗಿ ಅವಳ ಅವಸ್ಥೆ ಏನಾಗಿರಬಹುದು. ಹತ್ತರ ಕಡೆ ಪೂರೈಸುವಷ್ಟು ಹಣವಿಲ್ಲ. ಸಮೀಪದ ಆಪ್ತೇಷ್ಟರೆನ್ನುವವರೂ ಇಲ್ಲ.' ಈ ಎಲ್ಲವಿಷಯಗಳು ಮನದಲ್ಲಿ ಬರುತ್ತಲೆ ಅವನ ಮನಸ್ಸುಒಮ್ಮೊಂದೊಮ್ಮೆ ಉದ್ವಿಗ್ನಹೊಂದುತ್ತಿತ್ತು.

ಜಾನಕಿಯು ಒಬ್ಬಳೇ ಒಬ್ಬಳು. ತಾರುಣ್ಯವತಿಯು. ಅಪ್ರತಿಮ ಸುಂದರಿಯು. ಹೊಟ್ಟೆಗಿಲ್ಲದೆ ಉಪವಾಸ ಬೀಳಹತ್ತಿ ಎಲ್ಲತರದ ದುರ್ದೆಶೆ ಗೊಳಗಾಗಿ, ಯಾರಸಹಾಯವೂ ಸಿಗದಂತಾಗುತಲೆ, ಯಾವನಾದರೊಬ್ಬ, ಕುಕರ್ಮಿಯ ಮೋಸದ ಮಾತಿಗೆ ಮರುಳಾಗಿ ಮುಂದಿನ ಭಯಂಕರ ಕುಕಲ್ಪನೆಗಳು ಬರಹತ್ತುತಲೆ, ಅವನಿಗೆ ತನ್ನ ಅಪೂರ್ಣ ವಿಚಾರದಬಗ್ಗೆ ಪೂರ್ಣ ಪಶ್ಚಾತ್ತಾಪವಾಗುತ್ತಿತ್ತು.

ರಘುನಾಥನಿಗೆ, ಪತ್ನಿಯ ಪಾತಿವೃತ್ಯದ ವಿಷಯವಾಗಿ ಪೂರ್ಣ ಮನವರಿಕೆಯಾಗಿತ್ತು. ಅನ್ನವಿಲ್ಲದೆ, ದೇಹವು ಸೊರಗಿ ಕೊರಗಿ ಅಸ್ಥಿಪಂಜರವಾದರೂ, ಆ ಸಾಧ್ವಿಯು ತನ್ನ ಶೀಲದಿಂದ ರವಷ್ಟಾದರೂ ಚ್ಯುತಳಾಗಲಾರಳೆನ್ನುವದು ಅವನಿಗೆ ಚೆನ್ನಾಗಿಗೊತ್ತಿತ್ತು. ಆದರೂ ಒಂದೊಂದುಸಾರೆ ಕುಕಲ್ಪನೆಗಳು ಅವನನ್ನು ಬಾಧಿಸದೆ ಬಿಡುತ್ತಿದ್ದಿಲ್ಲ.

ನಿಜವಾಗಿ ಜಾನಕಿಯೋರ್ವ ಆದರ್ಶ ಆರ್ಯ ಮಹಿಳೆಯು. ಪುರಾತನ ಸಂಸ್ಕೃತಿಯ ಪವಿತ್ರ ದೇವತೆಯು. ***Love is Blind. Love Knows Neither Race Nor Religion.*** ಎಂಬ ಪಶುವೃತ್ತಿಯ ಪಾಶ್ಚಾತ್ಯ ದ್ಯೋತಕ ಮತದ ವಿಚಾರವು ಅವಳ ಮನಸ್ಸನೆಂದೂ

ಸ್ಪರ್ಶಿಸುತ್ತಿರಲಿಲ್ಲ. ಪವಿತ್ರತೆಯ ಸಲುವಾಗಿ ಪರಮ ಪ್ರಿಯ ಪ್ರಾಣದ ಬಲಿಕೊಟ್ಟು ತಮ್ಮ ಹೆಸರು ಅಜರಾಮರವಾಗಿ ಉಳಿಯುವಂತೆ ಮಾಡಿದ ಆರ್ಯಲಲಾಂಗನೆಯರಲ್ಲಿವಳೋರ್ವಳೆಂದು ನಿಶ್ಚಯವಾಗಿ ನಿರ್ಭಿಡೆಯಿಂದ ಹೇಳಬಹುದು.

卐 卐 卐 卐 卐 卐

ಹಿಂದೆ ಹೇಳಿದಂತೆ ರಘುನಾಥನ ಕಾರಾಗೃಹ ವಾಸದ ಅವಧಿಯು ಇನ್ನೂ ಇರುತಿರಲು ಆವದೋಕಾರಣದಿಂದ ಇಷ್ಟರಮೇಲೆಯೇ ಅವನನ್ನು ಬಂಧಮುಕ್ತಮಾಡಿದರು. ಈ ವೇಳೆಯಲ್ಲಿ ಅಸಹಕಾರದ ಯುದ್ಧವು ನಿಲ್ಲುತ್ತ ಬಂದಿತ್ತು. ಜನರ ಅಪೂರ್ಣ ವಿಚಾರದ ಸಲುವಾಗಿ ಬೇಸರಗೊಂಡು, ಮಹಾತ್ಮಾಜಿಯುವರು ತಮ್ಮ ಆಶ್ರಮಕ್ಕೆ ತೆರಳಿದ್ದರು. ಮುಂದೆ ತೀರ ತು ಸುದಿವಸಗಳಲ್ಲಿ, ಸ್ವತಃ ಮಹಾತ್ಮರಿಗೆ ಕಾರಾಗೃಹ ವಾಸವು ಪ್ರಾಪ್ತಿಯಾಯಿತು. ಸೇನಾನಿ ಇಲ್ಲದಂತಾಗುತಲೆ, ಪೂರ್ವದ ಪದ್ಧತಿಯಂತೆ, ಸತ್ಯಾಗ್ರಹ ಸೈನ್ಯವು ಬೆನ್ನುತೋರಿಸಿತು.

ರಘುನಾಥನು ತುರಂಗದಿಂದ ಬಿಡುಗಡೆ ಹೊಂದಿದ ದಿವಸ, ವೃತ್ತಪತ್ರದವರು ವರ್ತಮಾನಸಾರದ ಎರಡು ಮೂರು ಸಾಲ್ಲಿನಲ್ಲಿಯೇ ಅವನ ವಿಷಯವನ್ನು ಮುಗಿಸಿದ್ದರು. ಇಷ್ಟರಲ್ಲಿ ಎಲ್ಲಕಡೆಗೂ ಅವನ ವಿಸ್ಮರಣೆಯಾಗಿತ್ತು. ರಘುನಾಥನು ಬಿಡಗಡೆ ಹೊಂದಿದ ಮರುದಿವಸವೇ ಹೊರಟು ಕಲಬುರ್ಗಿಗೆ ಬಂದನು. ಜಾನಕಿಗೂ ಅವನಿಗೂ ದೃಷ್ಟಾದೃಷ್ಟಿಯಾದ ಬಳಿಕ ಅವರೀರ್ವರಿಗೆ ಯಾವತರದ ಆನಂದವಾಗಿರಬಹುದೆನ್ನುವದನ್ನು ಓದುಗರೇ ಉಹಿಸಬೇಕು.

✣ ✣ ✣ ✣ ✣ ✣ ✣ ✣

ನಟೀಶನು ಜಾನಕಿಯ ಮೇಲೆ ಅತಿಪ್ರಸಂಗ ಮಾಡಿದನು. ಅದು ಸಫಲವಾಗಲಿಲ್ಲ. ಮಾನಕಾಯ್ದುಕೊಳ್ಳುವದಕ್ಕೋಸುಗ ಕ್ಷಮೆ ಬೇಡಿದನು. ಆದರೂ ಅವನಲ್ಲಿದ್ದ ಅಸುರಿಲಾಲಸೆಯು ಕಡಿಮೆಯಾಗಿದ್ದಿಲ್ಲ. ತುಟಿಯ ವರೆಗೆ ಬಂದ ಅಮೃತದ ಪಾತ್ರೆಯು, ಕೈತಪ್ಪಿ ಒಮ್ಮಿಂದೊಮ್ಮೆ ನೆಲದ

ಮೇಲೆ ಬಿದ್ದು ಚೆಲ್ಲಿಹೋದಂತಾದ್ದರಿಂದ, ಅವನ ವಿಷಯಪಿಪಾಸೆಯು ಹೆಚ್ಚುತ್ತಲೇ ನಡೆದಿತ್ತು.

ಈ ವೇಳೆಯಲ್ಲಿ ಜಾನಕಿಯು ಮೊದಲಿನಂತೆ ಒಬ್ಬಳೇ ಸಹಾಯರಹಿತಳಾಗಿದ್ದಿಲ್ಲ. ಪರಮಪ್ರಿಯ ಪತಿಯು ಸಂರಕ್ಷಣೆಗೋಸುಗ ಬಳಿಯಲ್ಲಿಯೇ ಇದ್ದನು. ಅವಳಮೇಲೆ ಮೋಸದ ಜಾಲಹರಡಿ ತನ್ನ ಕಾರ್ಯ ಸಾಧಿಸಿಕೊಳ್ಳುವದು ಮೊದಲಿನಂತೆ ಸುಲಭ ಸಾಧ್ಯದ ಮಾತಾಗಿದ್ದಿಲ್ಲ ನಟೇಶಗೆ ಈ ವಿಷಯವು ಗೊತ್ತಿಲ್ಲೆನ್ನುವಂತಿದ್ದಿಲ್ಲ. ಆದರೂ ಅವನು ತನ್ನ ಕಪಟ ಕೃತ್ಯವನ್ನು ಬಿಟ್ಟುಬಿಡದಂತೆ ನಡೆಸಿದ್ದನು. ಕಡೆಗೊಂದುದಿನ ಆ ಚಾಂಡಾಲನು ಸಮಯಸಾಧಿಸಿ ದೇವರ ದರುಶನಕ್ಕಾಗಿ ಸ್ಟೇಶನದಾಚೆಗೆ ಹೋದ ತರುಣಿಯನ್ನು ವಿಧವೆಯೋರ್ವಳ ಸಹಾಯದಿಂದ ಎಚ್ಚರತಪ್ಪುವಂತೆ ಮಾಡಿ ಅಲ್ಲಿಂದಲೇ ಅವಳನ್ನು ತೆಗೆದುಕೊಂಡು ಹೋಗಿ ಹಸ್ತಗುಂಬದಾಚೆಯ ಓಣಿಯಲ್ಲೊಯ್ದು ಇಟ್ಟನು.

೬ ನೇ ಪ್ರಕರ್ಣದಲ್ಲಿ ಒಬ್ಬ ತರುಣಿಯು ವಿಧವೆಯೊಬ್ಬಳಸಂಗಡ ಹೊತ್ತು ಮುಳುಗುವ ಮುಂದೆ ದೇವದರುಶನಕ್ಕೆ ಹೋದ ಉಲ್ಲೇಖವಿರುವದು. ಆ ತರುಣಿಯೇ ಜಾನಕಿಯು.

ಇಬ್ಬರೂ ಮಾತಾಡುತ್ತ ಕುಳಿತ ಸಮಯದಲ್ಲಿ ಜಾನಕಿಯು ಎಚ್ಚರವಿಲ್ಲದಂತಾಗಿ ಬಿದ್ದಳಲ್ಲ. ವಿಧವೆಯು ಮಾದಕಪದಾರ್ಥ ಹಾಕಿದ ಪೇಡೆಯ ತೂಣಕನ್ನೊಂದು ತಿನ್ನುತಲೆ, ಮುಂದೆ ತುಸು ಹೊತ್ತಿನಲ್ಲಿ ಬಾಯಿ ಗಂಟಲೊಣಗಿ ಒಮ್ಮಿಂದೊಮ್ಮೆ ಎಚ್ಚರವಿಲ್ಲದಂತಾಗಿ ಬಿದ್ದಳು. ವಿಧವೆಯ ಸಹಾಯಕ್ಕಾಗಿ ಬಂದ ಸದ್ಗೃಹಸ್ಥರಾದರೂ ನಟೇಶನ ಹಸ್ತಕರೇ. ಆ ಫೈಟನ್ ಗಾಡಿಯಾದರೂ ನಟೇಶನದೇ ಇತ್ತು. ಈ ಎಲ್ಲ ವ್ಯೂಹವನ್ನು ನಟೇಶನೇ ರಚಿಸಿದ್ದನು. ಆ ವಿಧವೆ ಗುಂಡವ್ವ ಹಣದಾಶೆಯಿಂದ ಆ ಕರ್ಮ ಚಾಂಡಾಲನ ಕಾರಸ್ತಾನದಲ್ಲಿ ಕಲೆತಿದ್ದಳು.

卐 卐 卐 卐 卐 卐

ಇತ್ತ ಹೊತ್ತು ಬಹಳಾಗುತಲೆ ರಘುನಾಥನು ಹೆಂಡತಿ ಬಾರದಿರುವದನ್ನು ನೋಡಿ, ಗುಂಡವ್ವನ ಅಣ್ಣನನ್ನು ವಿಚಾರಿಸಿದನು ಅವನೂ ತನ್ನ ತಂಗಿಯು ಬಂದಿಲ್ಲೆಂಬದಾಗಿ ಹೇಳಿದನು

ಇಬ್ಬರೂ ಕೂಡಿ ಹುಡುಕಲು ಹೊರಟರು. ಎತ್ತಹೋದರೂ ಸುಳುವು ಹತ್ತದಂತಾಯಿತು. ಸ್ಟೇಶನದಾಚೆಗೆ ಸಹ ಹೋಗಿಬಂದರು ಇಷ್ಟು ರಾತ್ರಿಯಲ್ಲಿ ಆ ಅರಣ್ಯದಲ್ಲಿ ಯಾರುತಾನೇ ಇರುವರು? ಕಡೆಗೆ ನಿರಾಶರಾಗಿ ಗ್ರಾಮರಕ್ಷಕ ( ಪೋಲಿಸ ) ರಿಗೆ ವರ್ದೀಕೊಟ್ಟು ಬಹಳ ರಾತ್ರಿಗೆ ಮರುಳಿ ಮನೆಗೆ ಬಂದರು.

ಮರುದಿವಸ, ಹಾ ಹಾ ಅನ್ನುವದರೊಳಗಾಗಿ ಜಾನಕಿ ಗುಂಡವ್ವ ಇಬ್ಬರೂ ಇಲ್ಲದಂತಾದ ದುರ್ವಾರ್ತೆಯು ಓಣಿಯಲ್ಲೆಲ್ಲ ಹಬ್ಬಿ ಎಲ್ಲರಿಗೂ ಬಹಳ ಕೆಡಕೆನಿಸಿತು.

ಹಿಂದೆ ೬ ನೇ ಪ್ರಕರಣದಲ್ಲಿ ಹೇಳಿದ ಹೊಸಮಾದರಿಯ ತರುಣನು ಅನ್ಯನಿರದೆ, ಸುಂದರ ಸ್ತ್ರೀಯರ ಸೌಂದರ್ಯಕ್ಕೆ ಮನಸೋಲುವ ನಟೇಶನೇ ಆಗಿದ್ದನು. ಆದಿನ ನಟೇಶನು ಜಾನಕಿಯ ಕೂಡ ಚಕಾರಶಬ್ದವೂ ಸಹ ತೆಗೆಯದೆ ಅಲ್ಲಿಂದ ಹೊರಟು ಹೋದನು. ಜಾನಕಿಯೋರ್ವಳೆ ಉಳಿದ ರಾತ್ರಿಯನ್ನು ಆ ಕೋಣೆಯಲ್ಲಿ ಕಳೆದಳು. ಇಡೀ ರಾತ್ರಿ ಅವಳಿಗೆ ಕಣ್ಣಿಗೆ ಕಣ್ಣು ಸಹ ಹತ್ತಲಿಲ್ಲ.

ಎರಡನೇದಿನವನ್ನಾದರೂ ಎತ್ತಾದರೂ ಮಾಡಿ ಕಳೆದಳು. ಹೊತ್ತಿನ ಸರಿಯಾಗಿ ಎರಡು ವೇಳೆ ಊಟದ ಎಲಿಯು ಬಡಿಸಿಬಂದಿತು; ಆದರೆ ಅವಳು ಅದನ್ನು ಮೋರೆ ಎತ್ತಿಸಹ ನೋಡಲಿಲ್ಲ. ಬಿಡುಗಡೆ ಹೊಂದಬೇಕೆಂದು ಬಗೆಬಗೆಯಾಗಿ ಹಂಚಿಕೆ ಹಾಕಿದಳು. ಆದರೆ ಯಾವ ಯುಕ್ತಿಯೂ ತೋರದಂತಾಯಿತು.

ರಾತ್ರಿ ಒಂಬತ್ತು ಗಂಟೆಯಾಗಿರಬಹುದು. ಪೋಷಾಕು ಚೆನ್ನಾಗಿ ಮಾಡಿಕೊಂಡು, ನಟೇಶನು ಜಾನಕಿಯು ಕೋಣೆಯಲ್ಲಿ ಪ್ರವೇಶಿಸಿದನು. ತನ್ನಮೇಲೆ ಕಠಿಣ ಪ್ರಸಂಗ ಬಂದೊಬರುವದೆಂದು ಅವಳು ಈ ಮೊದಲೇ ಊಹಿಸಿದ್ದಳು. ಅವನು ಒಳಗೆ ಬರುತಲೆ ಕಣ್ಣು ಕೆಂಪಗೆ ಮಾಡಿ ಕೆರಳಿದ ಸಿಂಹಿಣಿಯಂತೆ, "ಮೂರ್ಖ ನಟೇಶ! ಆ ಹೊತ್ತು ಕ್ಷಮಿಸಿದುದರ ಪ್ರತಿ ಫಲವೇ ಇದು.

ನಟೇಶ— ಈ ಹೊತ್ತು ನನ್ನೀಮನೀಷೆಯುನ್ನು ಪೂರ್ಣ ಮಾಡಲೇ ಬೇಕು.

ಜಾನಕಿ— ಏನನ್ನುವಿ! ಏನೆಂದು ತಿಳಿದಿರುವಿ!! ಪರನಾರಿಯಂದರೆ ವಿಷದ ಕೊಡವಲ್ಲವೇ? ಈ ಹೊತ್ತು ನಿನ್ನ ಪಾಪದ ಕೊಡವು ತುಂಬಿ ದಂತಾಗಿ ಕಾಣುತ್ತದೆ ಆದುದರಿಂದಲೇ ನಿನ್ನಲ್ಲಿ ಈ ತರದ ದುರ್ಬುದ್ಧಿ ಹುಟ್ಟಿದೆ. ಪವಿತ್ರ ಆರ್ಯತರುಣಿಯರನ್ನು ಅಪೇಕ್ಷಿಸುವದೆಂದರೆ ನಾಗರ ಹಾವಿನ ಹೆಡಿಯ ಮೇಲೆ ಕಾಲಿಟ್ಟಂತೆ

ನಟೇಶ— ಈ ಎಲ್ಲ ವಿಷಯುವನ್ನು ತಿಳಿದೇ ನಿನ್ನೀ ಸುಕುಮಾರ ದೇಹದ ಸಮಾಗಮ ಇಚ್ಛಿಸುವೆನು.

ಜಾನಕಿ— ನಟೇಶ, ಭ್ರಮಿಷ್ಟನಂತೆ ಮಾತಾಡಬೇಡ ಸುಮ್ಮನೆ ನನ್ನನ್ನು ಹೋಗಗೊಡು. ಇಲ್ಲದಿದ್ದರೆ—

ನಟೇಶ— ಇಲ್ಲದಿದ್ದರೆ ಏನುಮಾಡುವಿ! ಎಂದು ವಿಷಯ ಮದದಿಂದ ಮೈಮರೆತವನಾಗಿ ಅವಳನ್ನು ಹಿಡಿಯಹೋದನು.

ಜಾನಕಿಯು ಮುಂದೆಡೆ ಇಡದೆ ನಿಂತಸ್ಥಳದಲ್ಲಿಯೇ ಸ್ಥಿರಮನಸ್ಸಿನಿಂದ ನಿಂತು "ಆಲಿಂಗನ ತೆಗೆದುಕೊಳ್ಳಲು ಬರುವಿಯೋ? ಬಾ ಮುಂದಕ್ಕೆ. ಒಂದೆಡೆ ಮುಂದಿಟ್ಟರೆ, ನನ್ನಬಳಿಯಲ್ಲಿ ಶಸ್ತ್ರವಂತೂ ಇಲ್ಲ. ಕುತ್ತಿಗೆಯನ್ನು ಹಿಸುಕಿ ಕೊಳ್ಳುವೆನು ನೋಡು. ನನಗೆ ಪಾತಿವ್ರತ್ಯದ ಮುಂದೆ, ಜೀವವೇನು, ಅಷ್ಟೊಂದು ಮಹತ್ವದ್ದಾಗಿ ಕಾಣುವದಿಲ್ಲ " ಎಂದು ಕಣ್ಣು ಬಿಡೆಯದೆ ಅವನನ್ನು ನೋಡುತ್ತ ತನ್ನಕುತ್ತಿಗೆಗೆ ಕೈನೀಡಿದಳು.

ಆವಳು ತೆರದಕಣ್ಣನ್ನು ನೋಡಿ, ಅವನಿಂದ ಮುಂದೆಡೆ ಇಡುವದಾಗಲಿಲ್ಲ. ಆಪಾತಿವೃತ್ಯದ ಮೂರ್ತಿಮಂತ ದೇವತೆಯ, ಕಣ್ಣೊಳಗಿನ ಆವೇಳೆಯ ತೇಜವನ್ನು ನೋಡಿ, ಧೈರ್ಯಸಾಲದೆ ಅಂಜಿದವನಾಗಿ ಹಿಂದಕ್ಕೆ ಹೆಜ್ಜೆ ಇಡಹತ್ತಿದನು. ಅವಳು ಕಣ್ಬಡೆಯದೆ ದಿಟ್ಟಿಸಿ ನೋಡಹತ್ತಿದಂತೆ ಅವನು ಹಿಂದ ಹಿಂದಕ್ಕೆ ಸರಿಯಹತ್ತಿದನು ಅವಳನ್ನು ಮುಟ್ಟುವದಂತೂ ಒತ್ತಟ್ಟಿಗೆ ಉಳಿದು, ನಟೇಶನಿಂದ ಅವಳನ್ನು ಕಣ್ಣೆತ್ತಿ ನೋಡುವದು ಅಗಲಿಲ್ಲ. ಆವೇಳೆಯಲ್ಲಿ ಜಾನಕಿಯು ಓರ್ವದೇವತೆಯಂತೆ, ತೇಜಸ್ವಿಯಾಗಿ ಕಾಣುತ್ತಿದ್ದಳು

ಇತ್ತ ಪೋಲಿಸರು ಎಷ್ಟು ಹುಡುಕಿದರೂ ಶೋಧಹತ್ತದಂತಾಯಿತು. ಕಡೆಗೆ ಸಿ. ಆಯ್. ಡಿ. ಇನಸ್ಪೇಕ್ಟರ ನರಸಿಂಹಾಚಾರ್ಯರವರಿಗೆ ಸುದ್ದಿಯು ಹೋಯಿತು. ಅವರು ಗುಪ್ತ ಶೋಧದ ಕೆಲಸದಲ್ಲಿ ಹೆಸರುವಾಸಿಯಾದವರು. ಮರುದಿವಸವೇ ಸಾಹಸಬಟ್ಟು ಶೋಧಹಚ್ಚಿದರು. ಪೋಲಿಸ ಅಮೀನರು, ಹತ್ತೆಂಟುಮಂದಿ ಪೋಲಿಸ ಸಿಪಾಯಿಯರನ್ನೂ, ರಘುನಾಥನನ್ನೂ ಸಹ ಕರೆದುಕೊಂಡು, ರಾತ್ರಿ ೯ ಗಂಟೆಯ ಸುಮಾರಕ್ಕೆ ಜಾನಕಿಯನ್ನಿಟ್ಟಿರುವ ಆ ಮನೆಗೆ ಒಮ್ಮಿಂದೊಮ್ಮೆ ಮುತ್ತಿಗೆ ಹಾಕಿದರು.

ಒಳಗೆ ಹೋಗಿ ನೋಡಲು ಓರ್ವ ತೇಜಸ್ವಿ ತರುಣಿಯು, ಒಂದು ಮೂಲೆಗೆ ಕಣ್ದೆರೆದು ನಿಂತಿದ್ದು, ನಟೇಶನು ಅಧೈರ್ಯದಿಂದ, ಅಂಜಿದವನಾಗಿ ಹಿಂದಕ್ಕೆ ಸರಿಯ ಹತ್ತಿದ್ದನು.

ಜಾನಕಿಯ ಆ ದಿವ್ಯ ತೇಜವನ್ನುನೋಡಿ ರಘುನಾಥನಿಗೆ ಆಶ್ಚರ್ಯವಾಯಿತು. ಇನಸ್ಪೇಕ್ಟರ ನರಸಿಂಹಾಚಾರ್ಯರೂ, ಅಮೀನಸಾಹೇಬರು ಸಹ ಆಶ್ಚರ್ಯ ಹೊಂದಿದರು. ಅವಳು ದೇಹಭಾನವಿಲ್ಲದೆ ಹಾಗೆಯೇ ನೋಡುತ್ತ ನಿಂತಿದ್ದಳು. ಇನಸ್ಪೇಕ್ಟರ ಮೊದಲಾದವರು ಚಿತ್ರದಂತೆ ತಟಸ್ಥರಾಗಿನಿಂತಿದ್ದರು.

ಅಮೀನರು ಪೋಲಿಸರಿಗೆ ನಟೇಶನನ್ನು ಹಿಡಿಯಲು ಅಪ್ಪಣೆ ಕೊಟ್ಟರು. ಪೋಲಿಸರು ಕೂಡಲೆ ಅವನನ್ನು ಮುತ್ತಿ ಕೈಗಳಿಗೆ ಸಂಕೋಲೆಗಳನ್ನು ಹಾಕಿದರು

ರಘುನಾಥನು ಮುಂದಕ್ಕೆ ಹೋಗಿ "ಜಾನಕಿ" ಎಂದು ಒದರಿದನು. ಜಾನಕಿಯ ಸಮಾಧಿಯು ಇಳಿಯಿತು. ಬಹಿರ್ಮುಖಳಾಗಿ ಬೇಶುದ್ಧತೆಯಿಂದ ಪತಿಯ ಬಾಹುಪಾಶದಲ್ಲಿ ಬಿದ್ದಳು.

ಮುಂದೆ ತುಸು ಹೊತ್ತಿನ ಮೇಲೆ ಎಚ್ಚರವಾಯಿತು. ಎಚ್ಚತ್ತು ನೋಡುತಲೆ ಅಲ್ಲಿ ಯಾರು ಇರಲಿಲ್ಲ. ಪತಿಯೊಬ್ಬನೇ ಇದ್ದನು ಹೊರಗಿನ ಬಾಗಿಲ ಹತ್ತರ ಕುದುರೆಯ ಗಾಡಿಯೊಂದು ನಿಂತಿತ್ತು. ಇಬ್ಬರೂ ಕೂಡಿ ಆ ಗಾಡಿಯ ಮೇಲೆ ಮನೆಗೆ ಬಂದರು.

ದಾರಿಯಲ್ಲಿ ಜಾನಕಿಯು ಮನೆಯಿಂದ ಹೊರಟು, ಇದುವರೆಗೆ ಜರುಗಿದ ಎಲ್ಲ ಸುದ್ದಿಯನ್ನು ಹೇಳಿದಳು. ತನ್ನ ಹಾಗೂ ತನ್ನ ಕುಟುಂಬದ ಭಾವೀಬಾಳುವಿಕೆಯ ಕಡೆಗೂ ಸ್ಥಿತಿಗತಿಯ ಕಡೆಗೂ ಪೂರ್ಣ ವಿಚಾರಮಾಡದೆ ಹೋದದ್ದೇ ಈ ಎಲ್ಲ ಅನರ್ಥಕ್ಕೆ ಮೂಲ ಪರಂಪರೆಯು. ಅಸಹಕಾರಕ್ಕೆ ಸರ್ವಥಾ ದೋಷಕೊಡಲಾಗುವದಿಲ್ಲ. ತನ್ನಲ್ಲಿ ಸಾರಾಸಾರಾ ವಿಚಾರವಿಲ್ಲದಿರುವದೇ ದೊಡ್ಡತಪ್ಪೆಂದು ರಘುನಾಥನು ನುಡಿದನು.

ನಟೇಶನ ಹಸ್ತಕನಾದ ಶಾಮನು ಹೊಳಹೆಸರಿಲ್ಲದಂತೆ ಎಲ್ಲಿಯೋ ಒಡಿಹೋದನು. ಗುಂಡವ್ವನು ಜಾನಕಿಗೆ ಕ್ಷಮೆ ಬೇಡಿಕೊಂಡಳು.

ನಟೇಶನ ಖಟ್ಲೆಯು ಆನರರಿ ಮಾಜಿಸ್ಟ್ರೇಟರಾದ ದೇಶಮುಖರ ಮುಂದೆ ಹೋಯಿತು. ಪರಸ್ತ್ರೀಯರನ್ನು ಮೋಸಗೊಳಿಸಿದ ಅತ್ಯಾಚಾರದ ಆರೋಪದಮೇಲೆ, ಅವನಿಗೆ ೩ ವರ್ಷದ ಕಠಿಣಶಿಕ್ಷೆ ವಿಧಿಸಿದರು.

ಮುಂದೆ ತುಸುದಿವಸಗಳಲ್ಲಿ, ಸ್ವತಂತ್ರ ಉದ್ಯೋಗವನ್ನು ಕೈಕೊಳ್ಳಲೋಸುಗ ರಘುನಾಥನು ಜಾನಕಿಯೊಡನೆ ಕಲಬುರ್ಗಿಯನ್ನು ಬಿಟ್ಟು, ಹುಟ್ಟಿದುರಾದ ಸಾಲಾರಜಂಗರ ರಾಜಧಾನಿ ಕೋಪಣನಗರಿಗೆ ಬಂದನು.

**ಮುಗಿದದು.**

---